## ಮಹಿಳೆಯರ ಬದುಕು-ಬವಣೆ-ಸಾಧನೆಗಳ ಕುರಿತ ಆತ್ಮಕಥನಗಳು, ಕಾದಂಬರಿಗಳು, ವ್ಯಕ್ತಿ ಚಿತ್ರಣಗಳು, ನೈಜ ಘಟನೆಗಳು

ವನಿತಾ ಚಿಂತನ ಮಾಲೆ


ಇಸ್ಲಾಂ ಮತ್ತು ಮಹಿಳೆ
₹ 55


ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿ ಮಹಿಳೆಯರ ಕೊಡುಗೆ
₹ 140


ಸ್ತ್ರೀಪಥ
₹ 65


ಕಾಲುಹಾದಿಯ ಕೋಲ್ಮಿಂಚುಗಳು ಮಹಿಳಾ ವಿಜ್ಞಾನಿಗಳು
₹ 75


ಹೋರಾಟದ ಹಾದಿಯಲ್ಲಿ ಧೀಮಂತ ಮಹಿಳೆಯರು
₹ 50


ಧೀಮತಿಯರು
₹ 95


ಇಳಾ ಭಟ್
₹ 60


ಕಮಲಾದೇವಿ ಚಟ್ಟೋಪಾಧ್ಯಾಯ
₹ 70


ದೀಪಧಾರಿಣಿ
₹ 40


ಬಿ. ರಂಗನಾಯಕಮ್ಮ
₹ 40


ಶಕ್ತಿಧಾಮದ ಸತ್ಯಕಥೆಗಳು
₹ 65


ಸೂಫಿ ಮಹಿಳೆಯರು
₹ 60


ಶೃಂಖಲೆಯ ಝೇಂಕಾರ
₹ 75


ಸಂಗತಿ
₹ 65


ಬದುಕು ನಮ್ಮದು
₹ 55


ನೋವು ತುಂಬಿದ ಬದುಕು
₹ 90


ನಿರಕ್ಷರಿಯ ಆತ್ಮಕತೆ
₹ 55


ನೂರಿ
₹ 140


ಅಮ್ಮನಿಗೆ ಹಜ್ ಬಯಕೆ
₹ 70


ಮಣ್ಣಿಂದ ಎದ್ದವರು
₹ 80


ಆಲಾಹಳ ಹೆಣ್ಣುಮಕ್ಕಳು
₹ 100


ಉಷೋದಯ
₹ 65


ಅಂತಿಮ ಜ್ವಾಲೆ
₹ 55


ಸೀತಾಕಾವ್ಯ ಕಥನ
₹ 45

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ?




**ಚಿತ್ರಗಳು :** ತನು, ಪ್ರತೀಕ್ ಸಿನ್ಹಾ, ಶ್ರೀಹರಿ, ವಿ. ಗೋಪಾಲ್, ಕಮಲಂ ಅರಸು, ಪ್ರಕಾಶ್ ಎಸ್., ವಿ. ಆರ್. ಸಿ. ಶೇಖರ್, ಜಿಎಂಬೊ, ಗೋಪಿ ಹಿರೇಬೆಟ್ಟು

**ಮುಖಪುಟ ಚಿತ್ರ :** ಮುತ್ತುರಾಜ ಹಾಳಕೇರಿ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಈ ನಮ್ಮ ದೇಶದ ಒಂದೊಂದು ಭಾಗದಲ್ಲಿ ಒಂದೊಂದು ರೀತಿಯಲ್ಲಿ ಆಚರಣೆಯಲ್ಲಿರುವ ಹಬ್ಬಗಳು ಹತ್ತಾರಿವೆ. ದೀಪಾವಳಿಯು ಕೆಲವರಿಗೆ ಬಲಿ ಚಕ್ರವರ್ತಿಯನ್ನು ನೆನಪಿಸಿದರೆ ಇನ್ನು ಕೆಲವರಿಗೆ ಅದು ಲಕ್ಷ್ಮೀ ಪೂಜೆಯ ಸಡಗರದ ಹಬ್ಬ. ಕೇರಳದಲ್ಲಿ ಬಲಿಯು ಓಣಂ ಸಂದರ್ಭದಲ್ಲೇ ಬಂದುಹೋಗಿಬಿಡುತ್ತಾನೆ. ಬಂಗಾಳದಲ್ಲಿ ದಸರಾ ಎಂದರೆ ದುರ್ಗಾಮಾತೆಯ ಪೂಜೆ. ಗುಜರಾತಿನಲ್ಲಿ ನಾಟ್ಯದ ಸಂಭ್ರಮ. ಮಹಾರಾಷ್ಟ್ರದಲ್ಲಿ ಹಿರಿಯರಿಗೆ ಎರಡು ದಳಗಳ ಒಂದು ವಿಶಿಷ್ಟ ಎಲೆಯನ್ನು ಕೊಟ್ಟು ನಮಸ್ಕರಿಸುವುದು ರೂಢಿ. ಆ ಎಲೆಯು ಸುವರ್ಣದ ಪ್ರತೀಕ. ಉತ್ತರ ಭಾರತದಲ್ಲಿ ರಾಮನು ರಾವಣನ ಮೇಲೆ ಯುದ್ಧಕ್ಕೆ ಹೊರಡುವುದು ದಸರಾ. ವಿರಾಟನಗರದಲ್ಲಿ ಅಜ್ಞಾತವಾಸದಲ್ಲಿದ್ದ ಪಾಂಡವರ ಪೈಕಿ ಅರ್ಜುನನು ಗೋಗ್ರಹಣ ಮಾಡಿದ್ದ ದುರ್ಯೋಧನನ ವಿರುದ್ಧ ಯುದ್ಧಕ್ಕೆ ಹೊರಡುವುದು ವಿಜಯದಶಮಿಯಂದು ಎಂಬುದು ಮೈಸೂರಿನ ಆಚರಣೆ. ಶಸ್ತ್ರಾಸ್ತ್ರಗಳನ್ನು ಕಟ್ಟಿಟ್ಟಿದ್ದ ಮರದ ಬಳಿ ಹೋಗಿ (ಅದು ಶಮೀವೃಕ್ಷ) ಅವನ್ನು ಕೆಳಗಿಳಿಸಿ ಯುದ್ಧಕ್ಕೆ ಸನ್ನದ್ಧನಾಗುವುದು, ಅಂದಿಗೆ ಅಜ್ಞಾತವಾಸ ಮುಗಿಯಿತೆಂದು ಘೋಷಿಸುವುದು ಆಚರಣೆಯ ಹಿನ್ನೆಲೆ. ಶಮೀವೃಕ್ಷವನ್ನು ಉರುಳಿಸುವುದರ ಬದಲು ನಮ್ಮ ಜನ ಅದರ ಬಳಿ ಒಂದು ಬಾಳೆಯ ಕಂದನ್ನು ನಿಲ್ಲಿಸಿ ಅದನ್ನು ಕತ್ತರಿಸಿಹಾಕುತ್ತಾರೆ. ಒಟ್ಟಿನಲ್ಲಿ ದಸರಾ ಶಾಂತಿಯ ಉತ್ಸವವಲ್ಲ. ವಿಜಯದ ಉತ್ಸವ ಹೌದು, ಆದರೆ ಅದರಲ್ಲಿ ಯುದ್ಧದ ಹಿನ್ನೆಲೆಯಿದೆ. ಒಳಿತು–ಕೆಡಕುಗಳ ನಡುವಣ ಸಂಗ್ರಾಮದಲ್ಲಿ ಒಳಿತಿಗೇ ಜಯವೆಂಬುದು ನಮ್ಮ ಎಲ್ಲ ಆಚರಣೆಗಳಲ್ಲೂ ಸೂಚ್ಯವಾಗಿ ಸೇರಿದೆ. ಆದರೆ ಪ್ರಕೃತದಲ್ಲಿ ಅದು ಜನರನ್ನು ಒಂದೆಡೆ ಸೇರಿಸಿ ಸಂಭ್ರಮಿಸುವ ಸಂದರ್ಭವಾಗಿದೆ. ಅರ್ಜುನನಾಗಲಿ, ರಾಮನಾಗಲಿ, ಆನೆ ಏರಿ ಕೆಡುಕಿನ ಪ್ರತಿನಿಧಿಗಳಾದ ವೈರಿಗಳನ್ನು ಮಣಿಸಲು ತೆರಳಲಿಲ್ಲ; ಆದರೆ ನಮ್ಮಲ್ಲಿ ಆನೆಯದೇ ಅಗ್ರಸ್ಥಾನ. ಮೈಸೂರು ರಾಜ್ಯದಲ್ಲಿ ಆನೆಗಳಿರುವುದು ಅದಕ್ಕೆ ಕಾರಣವಿರಬೇಕು. ದೆಹಲಿಯ ರಾಮಲೀಲಾ ಮೈದಾನದಲ್ಲಿ ಆನೆಗಳಿಗೆ ಪ್ರಾಧಾನ್ಯವಿಲ್ಲ. ಮೂಲಭೂತವಾದ ಪ್ರಶ್ನೆ ಬೇರೆಯೇ ಇದೆ. ಸಂಭ್ರಮ, ಸಂತೋಷ, ಉತ್ಸವ ಮಾನವನಿಗೆ ಬೇಕು. ಆದರೆ ಇಂದಿನ ನಮ್ಮ ಸಂದರ್ಭವು ಉತ್ಸವಗಳನ್ನು ಪ್ರಚೋದಿಸುವಂತಹದ್ದೆ ? ವರ್ಷದಲ್ಲಿ ಎಷ್ಟು ಉತ್ಸವಗಳು ಬೇಕು ? ಕದಂಬ, ಕರಾವಳಿ, ಹಂಪಿ, ಮೈಸೂರು ದಸರಾ, ಹೊಯ್ಸಳ, ಹೀಗೆ ವರ್ಷವಿಡೀ ಒಂದಲ್ಲ ಒಂದು ಉತ್ಸವ. ಜನರ ಜೀವನದ ಮೇಲೆ ಚಿರವಾದ ಪ್ರಭಾವ ಬೀರಲು ಇವು ಉಪಯುಕ್ತವೆ ? ೧೮೫೦ರಲ್ಲಿ ಲಂಡನ್ನಿನಲ್ಲಿ ಒಂದು ಮಹಾನ್ ಪ್ರದರ್ಶನ ಆಯೋಜಿಸಲಾಗಿತ್ತು. ದೇಶದ ಒಂದೊಂದು ಊರಿನಿಂದಲೂ ಜನರನ್ನು ಅಲ್ಲಿಗೆ ಕರೆದೊಯ್ಯಲಾಯಿತು. ೧೮೪೮–೫೦ರ ವರ್ಷಗಳಲ್ಲಿ ಜನ ದಂಗೆಯೇಳುವ ಮಟ್ಟಕ್ಕೆ ಹೋಗಿದ್ದರು. ಅವರನ್ನು ತಟಸ್ಥರನ್ನಾಗಿಸಲು ಮಹಾನ್ ಪ್ರದರ್ಶನವನ್ನು ಏರ್ಪಡಿಸಲಾಯಿತು. ನಮ್ಮ ಉತ್ಸವಗಳನ್ನು ಅಂತಹ ಉದ್ದೇಶಕ್ಕಾಗಿ ರೂಪಿಸಿಲ್ಲವೆಂದು ಭಾವಿಸಬೇಕಾಗಿದೆ. ಆದರೂ ಈ ಸಂಭ್ರಮವು ಇಡೀ ಜನತೆಯ ಉತ್ಸವದ ರೂಪ ಪಡೆದಿದೆಯೆ ? ಪಡೆದಿಲ್ಲದಿದ್ದರೆ ಅಂತಹ ಬೆಳವಣಿಗೆಗಾಗಿ ಕೈಗೊಳ್ಳಬೇಕಾದ ಕ್ರಮಗಳೇನು ? ಒಂದಷ್ಟು ಕವನಗಳ ವಾಚನ, ನೃತ್ಯ, ಸಂಗೀತ, ಇವೆಲ್ಲಾ ಒಂದು ನಗರಕ್ಕೆ ಸೀಮಿತವಾದ ಕಾರ್ಯಕ್ರಮಗಳು. ಕೃಷಿ ಮತ್ತು ಕೂಲಿಕಾರರ ಶ್ರಮವನ್ನು ಕೇಂದ್ರೀಕರಿಸುವಂತಹ ಉತ್ಸವ ಮಾತ್ರ ನಿಜಕ್ಕೂ ಜನತೆಯ ಉತ್ಸವವಾಗುತ್ತದೆ. ಈಗಾಗಲೆ ಪ್ರತಿಷ್ಠಿತ ಸ್ಥಾನಗಳನ್ನು ಪಡೆದಿರುವವರು 'ಉತ್ಸವ'ದಲ್ಲಿ ಭಾಗವಹಿಸಿ ಸಂಸ್ಕೃತಿಯ ಬಗೆಗೆ ಉಪದೇಶ ನೀಡುವುದು ಅವರಿಗೆ ಲಾಭದಾಯಕ, ಆದರೆ ಜನತೆಗೆ ಅದರಲ್ಲಿ ಪಾಲ್ಗೊಳ್ಳುವಿಕೆ ಇರುವುದಿಲ್ಲ. ನಾಡಹಬ್ಬದಲ್ಲಿ ನಾಡು, ನುಡಿ ಮತ್ತು ಜನತೆಗೆ ಅಗ್ರಸ್ಥಾನವೇ ವಿನಾ ದೇವಾನುದೇವತೆಗಳಿಗೆ, ಸಾಂಸ್ಕೃತಿಕ ರಾಯಭಾರಿಗಳೆನ್ನಲಾದ ವಿದ್ವಾಂಸರಿಗೆ ಮತ್ತು ಆಡಳಿತ ನಡೆಸುವ ಅಧಿಕಾರಿಗಳಿಗೆ ಅಲ್ಲ. ನಿಜವಾದ ಸಾಂಸ್ಕೃತಿಕ ಪರ್ಯಾಯವಾಗಿ, ಜನತೆಯ

*(೬ನೇ ಪುಟಕ್ಕೆ)*




ಸಂಪುಟ-೧೫ ಸಂಚಿಕೆ-೪ ನವೆಂಬರ್ ೨೦೧೩

■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ಆರ್. ಉಡುಪ

■ *ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

■ *ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

■ *ಹೊಸತು ಕಚೇರಿಯ ವಿಳಾಸ*



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೪೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**



# ಸಂಪಾದಕೀಯ

## ಭಾಷೆ ಮತ್ತು ಬದುಕು : ಕರುಳು-ಕೊರಳಿನ ಸಂಬಂಧ

ಕರ್ನಾಟಕದ ಇತಿಹಾಸಕ್ಕೆ ಮತ್ತೊಂದು ರಾಜ್ಯೋತ್ಸವ ದಿನ ಸೇರ್ಪಡೆಯಾಗಿದೆ. ಕರ್ನಾಟಕ ಒಂದು ಭಾಷಾವಾರು ಪ್ರಾಂತವಾಗಿ ೫೭ ವರ್ಷ ಪೂರೈಸಿದೆ. ವರ್ಷಗಳು ಕಳೆದಂತೆ ಒಂದು ಭಾಷೆ ಮತ್ತು ಆ ಭಾಷೆಯ ಪ್ರದೇಶ ಬಲಿಷ್ಠವಾಗುತ್ತ ಸಾಗಬೇಕು. ಆದರೆ ನಮ್ಮ ದೇಶದಲ್ಲಿ ಭಾಷಾವಾರು ಪ್ರಾಂತಗಳ ರಚನೆಯ ಹಿಂದಿನ ಉದ್ದೇಶ ಈಡೇರಿದೆಯೇ ಎಂದು ಯೋಚಿಸುವ ಕಾಲ ಬಂದಿದೆ. ಭಾಷಾವಾರು ಪ್ರಾಂತ ರಚನೆಗೆ ತೀವ್ರ ಹೋರಾಟ ನಡೆಸಿ ಒಂದಾಗಿದ್ದ ಆಂಧ್ರಪ್ರದೇಶ ಮತ್ತೆ ಇಂದು ವಿಭಜನೆ ಮತ್ತು ಏಕತೆಗೆ ಸಂಘರ್ಷ ನಡೆಸುವ ಪ್ರದೇಶವಾಗಿ ಮಾರ್ಪಟ್ಟಿದೆ. ಇದೇ ರೀತಿ ದೇಶದ ಹಲವಾರು ಪ್ರದೇಶಗಳಲ್ಲಿ ಭಾಷಾವಾರು ಪ್ರಾಂತರಚನೆಯ ಹಿಂದಿನ ಉದ್ದೇಶಗಳಿಗೆ ವ್ಯತಿರಿಕ್ತವಾದ ರೀತಿಯಲ್ಲಿ ಪ್ರತ್ಯೇಕತೆಯ ಕೂಗು ಎದ್ದಿದೆ. ಕರ್ನಾಟಕದಲ್ಲಿಯೂ ಉತ್ತರ ಕರ್ನಾಟಕ ಪ್ರತ್ಯೇಕ ರಾಜ್ಯವಾಗಬೇಕೆಂಬ ಧ್ವನಿ ಆಗಾಗ ಎದ್ದಿದ್ದರೂ ಅದು ಸಮಗ್ರ ಜನತೆಯ ಬೆಂಬಲವನ್ನು ಪಡೆಯದೇ ಇದ್ದುದರಿಂದ ಒಂದು ಚಳುವಳಿಯಾಗಿ ಬೆಳೆಯಲಿಲ್ಲ. ಸದ್ಯ ಹೈದರಾಬಾದ್ ಪ್ರದೇಶಕ್ಕೆ ೩೭೧(ಜೆ) ವಿಧಿ ಪ್ರಕಾರ ವಿಶೇಷ ಸ್ಥಾನಮಾನ ದೊರಕಿ ಕೆಲವು ವರ್ಷ ಅವರು ಸುಮ್ಮನಿರಬಹುದು. ಸಂವಿಧಾನಕ್ಕೆ ಎಂಥದೇ ತಿದ್ದುಪಡಿ ತಂದರೂ ಅದನ್ನು ಆಚರಣೆಗೆ ತರಬೇಕಾದದ್ದು ನಮ್ಮ ಆಳುವ ಸರಕಾರಗಳೇ ಎಂಬುದನ್ನು ಮರೆಯಲಾಗದು. ಏಕೀಕರಣವಾಗಿ ಅರ್ಧ ಶತಮಾನ ಕಳೆದರೂ ನಮ್ಮ ನಾಡಿನಲ್ಲಿನ ಪ್ರಾದೇಶಿಕ ಅಸಮಾನತೆಗಳನ್ನು ನಿವಾರಿಸಲಾಗಲಿಲ್ಲ. ಈ ಪ್ರಾದೇಶಿಕತೆ ಎನ್ನುವುದು ಮತ್ತೆ ಮತ್ತೆ ತನ್ನ ಅಸ್ಮಿತೆಯನ್ನು ಪ್ರದರ್ಶಿಸುತ್ತಲೇ ಇರುತ್ತದೆ. ಏಕೀಕರಣ ಸಂದರ್ಭದಲ್ಲಿಯೇ ಕರ್ನಾಟಕದ ದಕ್ಷಿಣ ಪ್ರದೇಶ ಮುಂಬೈ ಮತ್ತು ಹೈದರಾಬಾದ್ ಪ್ರಾಂತಗಳ ವ್ಯಾಪ್ತಿಯ ಉತ್ತರ ಕರ್ನಾಟಕದ ಪ್ರದೇಶಗಳಿಗಿಂತ ಅಭಿವೃದ್ಧಿಯಲ್ಲಿ ಮುಂದಿತ್ತು. ಇದಕ್ಕೆ ಐತಿಹಾಸಿಕ ಕಾರಣಗಳೇನೇ ಇರಲಿ, ಏಕೀಕರಣದ ನಂತರ ಆಡಳಿತ ನಡೆಸಿದ ಸರಕಾರಗಳು ಆದ್ಯತೆಯ ಮೇಲೆ ಈ ಪ್ರಾದೇಶಿಕ ಅಂತರವನ್ನು ತೊಡೆದುಹಾಕಲು ಪ್ರಾಮಾಣಿಕ ಪ್ರಯತ್ನ ಮಾಡಬಹುದಿತ್ತು. ಬೀದರ ಜಿಲ್ಲೆಯ ಭಾಲ್ಕಿಯಿಂದ ಕಾರವಾರ ಜಿಲ್ಲೆಯ ಭಟ್ಕಳದವರೆಗೆ ಗುರ್ತಿಸುವ ಉತ್ತರ ಕರ್ನಾಟಕದಲ್ಲಿಯೂ ಮುಂಬೈ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕದ ಮಧ್ಯೆ ಹೋಲಿಸಿದರೆ ಅಲ್ಲಿಯೂ ಈ ಪ್ರಾದೇಶಿಕ ಅಸಮಾನತೆ ಅಭಿವೃದ್ಧಿಯಲ್ಲಿಯೂ, ಜನತೆಯ ಭಾಷೆ, ಸಂಸ್ಕೃತಿ, ಒಟ್ಟಾರೆ ಬದುಕಿನಲ್ಲಿಯೂ ಕಂಡುಬರುತ್ತದೆ. ಮುಂಬೈ ಕರ್ನಾಟಕದ ವಿಷಯಕ್ಕೆ ಬಂದರೆ ಧಾರವಾಡ ಜಿಲ್ಲೆ ಪಡೆದ ಸೌಲಭ್ಯಗಳ ಕುರಿತು ವಿಜಾಪುರ, ಉತ್ತರ ಕನ್ನಡ ಜಿಲ್ಲೆಗಳ ಜನತೆಗೆ ಒಂದು ಅಸಮಾಧಾನವಿದೆ. ಅದೇ ರೀತಿ ಗುಲಬರ್ಗಾ ಜಿಲ್ಲೆ ಪಡೆದ ಸೌಲಭ್ಯ, ಸವಲತ್ತುಗಳ ಕುರಿತು ಹೈದರಾಬಾದ್ ಕರ್ನಾಟಕದ ಇತರ ಪ್ರದೇಶಗಳಾದ ರಾಯಚೂರು, ಬೀದರ, ಬಳ್ಳಾರಿ ಜನರಿಗೆ ಅಸಮಾಧಾನಗಳಿವೆ. ಈ ಅಸಮಾಧಾನಗಳೇ ಬೆಳೆದು ಮುಂದೆ ಪ್ರತ್ಯೇಕತೆಯ ಕೂಗಿಗೆ ಕಾರಣವಾಗುತ್ತವೆ. ಇದನ್ನು ಕೇವಲ ಪ್ರತ್ಯೇಕತಾವಾದ ಎಂದು ತಳ್ಳಿಹಾಕುವಂತಿಲ್ಲ. ಆ ಭಾವನೆಗಳ ಹಿಂದೆ ಜನತೆಯ ಬದುಕಿನ ಸಮಸ್ಯೆಗಳಿವೆ ಎಂದು ಅರ್ಥಮಾಡಿಕೊಳ್ಳಬೇಕು. ಯಾವುದೇ ಪ್ರದೇಶದ ಜನತೆಯ ಬದುಕು ಶ್ರೀಮಂತವಾದರೆ ಮಾತ್ರ ಅವರ ಭಾಷೆಯೂ ಶ್ರೀಮಂತವಾಗುತ್ತದೆ. ಕರ್ನಾಟಕ ಒಂದು ಭಾಷಾವಾರು ಪ್ರಾಂತವಾಗಿ, ಪ್ರಾಂತದ ವ್ಯಾಪ್ತಿಯ ಒಳಗಿನ ಜನತೆಯ ಬದುಕನ್ನು ಶ್ರೀಮಂತಗೊಳಿಸಲು ನಮ್ಮ ಸರಕಾರಗಳು, ಸಂಘ ಸಂಸ್ಥೆಗಳು, ಚಳುವಳಿಗಳು ಮಾಡಿರುವ, ಮಾಡುತ್ತಿರುವ ಪ್ರಯತ್ನಗಳೇನು ಎಂದು ನೋಡಿದರೆ ನಿರಾಸೆಯಾಗುತ್ತದೆ. ನವೆಂಬರ್ ತಿಂಗಳು ಬಂದ ತಕ್ಷಣ ಜಾಗೃತವಾಗುವ ರಾಜ್ಯದಾದ್ಯಂತ ಹರಡಿರುವ ನೂರಾರು ಕನ್ನಡ-ಕರ್ನಾಟಕ ಹೆಸರಿನ ವೇದಿಕೆಗಳು, ಸೇನೆಗಳು ಕನ್ನಡದ ಹೆಸರಿನಲ್ಲಿ, ರಾಜ್ಯೋತ್ಸವದ ಹೆಸರಿನಲ್ಲಿ ಚಂದಾ ವಸೂಲಿಗಿಳಿಯುತ್ತವೆ. ಆಗಾಗ ಗಡಿ ತಕರಾರಿನ ವಿಷಯದಲ್ಲಿ, ಜಲವಿವಾದದ ಹೆಸರಿನಲ್ಲಿ ಬೀದಿಗಿಳಿದು ಮತ್ತೆ ಮಾಯವಾಗುತ್ತವೆ. ಈ ಎಲ್ಲ ಸಂಘಟನೆಗಳು ಬರೀ ಭಾವನಾತ್ಮಕ ವಿಷಯಗಳನ್ನಿಟ್ಟುಕೊಂಡು ಜನರನ್ನು ಪ್ರಚೋದಿಸುವ ಕೆಲಸ ಮಾಡುತ್ತಿವೆಯೇ ಹೊರತು ಕನ್ನಡ, ಕರ್ನಾಟಕ ಜನತೆಯ ಬದುಕಿನ ವಿಷಯದಲ್ಲಿ ಮೌನವಹಿಸುತ್ತವೆ. ರಾಜ್ಯದಲ್ಲಿನ ಆಳುವ, ವಿರೋಧ ಪಕ್ಷಗಳು ಜನತೆಯ ಬದುಕನ್ನು ನಿರ್ಲಕ್ಷಿಸಿ ತಮ್ಮ ವರ್ಗಹಿತಾಸಕ್ತಿಯನ್ನು ಕಾಪಾಡಿಕೊಳ್ಳುವಲ್ಲಿ ನಿರತವಾಗಿವೆ. ಎಡಪಕ್ಷಗಳು ಮತ್ತು ಜನಪರ ಚಳುವಳಿಗಳ ಸಂಘಟನೆಗಳು ತಮ್ಮ ಮಿತಿಯಲ್ಲಿ ಕೆಲಸ ಮಾಡಿದರೂ ಅವು ಕೇವಲ ಪ್ರತಿಕ್ರಿಯೆಗೆ ಸೀಮಿತವಾಗಿ ಮಧ್ಯಪ್ರವೇಶ ಮಾಡುವ ಶಕ್ತಿಯನ್ನು ಕಳೆದುಕೊಂಡಿವೆ. ಇಂಥ ಸಂದರ್ಭದಲ್ಲಿ ರಾಜ್ಯದ ನೆಲ, ಜಲ, ನೈಸರ್ಗಿಕ ಸಂಪತ್ತು ಅವ್ಯಾಹತವಾಗಿ ಲೂಟಿಗೊಳಗಾಗುತ್ತಿದೆ.

ಕರ್ನಾಟಕದ ಗಡಿಭಾಗದ ಒಂದು ಹಳ್ಳಿಯಲ್ಲಿ ಮರಾಠಿ ಭಾಷಿಕ ಅವಿವೇಕಿಗಳು ಏನಾದರೂ ಕಿಡಿಗೇಡಿ ಕೃತ್ಯವೆಸಗಿದರೆ ಕರ್ನಾಟಕದ ಕನ್ನಡ ಹೆಸರಿನ ಎಲ್ಲ ಸಂಘಟನೆಗಳು ತಮ್ಮ ತಮ್ಮ ಶಕ್ತ್ಯಾನುಸಾರ ಕೂಗೆಬ್ಬಿಸುತ್ತವೆ. ಆದರೆ ಕರ್ನಾಟಕದ ಗಣಿಗಳ್ಳರು ನಮ್ಮ ನಾಡಿನ ಬೆಟ್ಟ ಗುಡ್ಡಗಳನ್ನು ಕಡಿದು ವಿದೇಶಕ್ಕೆ ಸಾಗಿಸುವಾಗ, ನಮ್ಮ ಸರಕಾರಗಳು ಕರ್ನಾಟಕದ ಲಕ್ಷಾಂತರ ಕೃಷಿಭೂಮಿಯನ್ನು ವಿದೇಶಿ ಕಂಪನಿಗಳಿಗೆ ಕೊಡುವಾಗ, ನಮ್ಮ ನದಿಗಳ ನೀರನ್ನೇ ನಮ್ಮ ಜನತೆಗೆ ವಿತರಿಸಲು ವಿದೇಶಿ ಕಂಪನಿಗಳಿಗೆ ಕೊಡುವಾಗ, ಸಣ್ಣಪುಟ್ಟ ಊರುಗಳಲ್ಲಿಯೂ ಸರಕಾರ ಖಾಸಗಿ ಶಾಲೆಗಳಿಗೆ

ಅನುಮತಿ ನೀಡುವಾಗ ಮತ್ತು ಅಲ್ಲಿ ಕನ್ನಡ ಮಾಧ್ಯಮದಲ್ಲಿ ಅನುಮತಿ ಪಡೆದು ಇಂಗ್ಲಿಷ್ ಮಾಧ್ಯಮದ ಶಿಕ್ಷಣ ಕೊಡುವಾಗ ನಮ್ಮ ಕನ್ನಡ–ಕರ್ನಾಟಕದ ಹೆಸರಿನ ನವೆಂಬರ್ ಸಂಘಟನೆಗಳು ಮೌನವಾಗಿರುತ್ತವೆ. ಹೋಗಲಿ, ಕರ್ನಾಟಕದ ಸ್ವಾಭಿಮಾನ ಕುರಿತು ಮಾತನಾಡುವ ಈ ಕನ್ನಡದ ಕಲಿಗಳು ಕರ್ನಾಟಕದಲ್ಲಿನ ಭ್ರಷ್ಟ ಸರಕಾರಗಳ ವಿರುದ್ಧ ಎಂದಾದರೂ ಹೋರಾಡಿ ಕರ್ನಾಟಕ, ಕನ್ನಡ ನಾಡಿನ ಮಾನರಕ್ಷಣೆಗೆ ಪ್ರಯತ್ನವನ್ನಾದರೂ ಮಾಡಿವೆಯೆ ? ಇದೆಲ್ಲ ಕನ್ನಡದ ಕೆಲಸವೇ ಅಲ್ಲ ಎಂಬುದು ನಮ್ಮ ಕನ್ನಡ ಕಲಿಗಳ ಅಂಬೋಣವೆ ?

ಕರ್ನಾಟಕ ಪ್ರಬಲ ರಾಜ್ಯವಾಗಬೇಕಾದರೆ ಮೊದಲು ಕರ್ನಾಟಕದಲ್ಲಿನ ಪ್ರಾದೇಶಿಕ ಅಸಮಾನತೆ ನಿವಾರಣೆಯಾಗಬೇಕು. ಪ್ರಾದೇಶಿಕ ಅಸಮಾನತೆ ನಿವಾರಣೆಗೆ ಬಿಡುಗಡೆಯಾಗುವ ಅನುದಾನ ಎಲ್ಲಿ ಸೋರಿಹೋಗುತ್ತಿದೆ ಎಂದು ಗುರ್ತಿಸಿ ಅದರ ಸರಿಯಾದ ಅನುಷ್ಠಾನಕ್ಕಾಗಿ ಹೋರಾಟಗಳೂ ನಡೆಯಬೇಕಾಗಿದೆ. ಇತ್ತೀಚಿನ ಜನಗಣತಿಯ ಪ್ರಕಾರ ಶೇಕಡ ೫೦ಕ್ಕಿಂತ ಹೆಚ್ಚು ಜನ ಕೃಷಿ ಉತ್ಪಾದನಾ ವ್ಯವಸ್ಥೆಯಿಂದ ದೂರವಾಗಿದ್ದಾರೆ. ಅವರಲ್ಲಿ ಬಹುತೇಕ ಜನ ವಲಸೆ ಹೊರಟಿದ್ದಾರೆ. ರಾಜ್ಯದೊಳಗಿನ ನಗರದೆಡೆ ಹಲವು ಜನ ವಲಸೆ ಬಂದು ಇಲ್ಲಿನ ಸ್ಲಂಗಳಲ್ಲಿ ಬದುಕಿದರೆ, ಗೋವಾ, ಮಹಾರಾಷ್ಟ್ರ, ಆಂಧ್ರಪ್ರದೇಶಗಳಿಗೆ ಉತ್ತರ ಕರ್ನಾಟಕದ ಜನ ವಲಸೆ ಹೋಗುತಾರೆ. ಅಲಿ ಆ ಭಾಷೆ ಕಲಿತು ಅವರ ಮುಂದೆ ಕೈಯೊಡ್ಡುತ್ತಾರೆ. ಅನ್ನ ಕೇಳುವ ಭಾಷೆ ಅಭಿಮಾನ ಕಳೆದುಕೊಳ್ಳುತ್ತದೆ. ಇನ್ನು ಬಯಲುಸೀಮೆ, ಕರಾವಳಿ, ಮಲೆನಾಡು ಪ್ರದೇಶಗಳನ್ನು ಹೊಂದಿದ ವೈವಿಧ್ಯಮಯ ನಿಸರ್ಗ ಸಂಪತ್ತು ; ಕಾಡು, ನದಿ, ಸಾಗರ, ಖನಿಜ ಹೀಗೆ ಎಲ್ಲ ಸಂಪನ್ಮೂಲವನ್ನು ಹೊಂದಿದ್ದೂ ಕರ್ನಾಟಕದಲ್ಲಿ ಬಡತನವೇಕಿದೆ, ವಲಸೆ ಏಕಿದೆ, ಹಸಿವು, ಅನಾರೋಗ್ಯ ಏಕಿದೆ ಎಂದು ಪ್ರಶ್ನಿಸಿಕೊಂಡರೆ ಮಾತ್ರ ನಾವು ಸಂಪದ್ಭರಿತವಾದ ರಾಜ್ಯವನ್ನು ಉಳಿಸಿಕೊಂಡು ಈ ಸಂಪತ್ತಿನ ಹಂಚಿಕೆ ಸರ್ವಜನರಿಗೂ ತಲುಪಿಸಿ ಜನತೆಯ ಬದುಕನ್ನು ಹೇಗೆ ಶ್ರೀಮಂತಗೊಳಿಸಬೇಕೆಂಬ ದಾರಿ ತಿಳಿಯುತ್ತದೆ.

ರಾಜ್ಯೋತ್ಸವ ಆಚರಿಸುವಾಗ ಕೆಂಪು–ಹಳದಿ ಬಾವುಟ ಹಾರಿಸಿ, ಹೊಯ್ಸಳ–ಚಾಲುಕ್ಯ, ಕದಂಬರ ಕುರಿತು ಮಾತನಾಡಿ ಕನ್ನಡಕ್ಕಾಗಿ ರಕ್ತಕೊಡುತ್ತೇವೆ, ಬುರುಡೆ ಕೊಡುತ್ತೇವೆ ಎಂದು ನವೆಂಬರ್ ತಿಂಗಳಲ್ಲಿ ಕೂಗಾಡುವುದು ಉತ್ಸವ ಆಗುವುದಿಲ್ಲ. ಭ್ರಷ್ಟಾಚಾರವಿಲ್ಲದ, ಸುಲಿಗೆ ಶೋಷಣೆಗಳಿಲ್ಲದ, ಅತ್ಯಾಚಾರವಿಲ್ಲದ, ಹಸಿವು, ನಿರುದ್ಯೋಗ, ವಲಸೆ, ಅನಕ್ಷರತೆ, ಅನಾರೋಗ್ಯವಿಲ್ಲದ ಒಂದು ನಾಡನ್ನು ಕಟ್ಟುವುದು ಹೇಗೆಂದು ಚಿಂತನ ಮಂಥನ ನಡೆಸುತ್ತಲೇ, ಇಂಥ ಸುಂದರ ರಾಜ್ಯ ನಿರ್ಮಾಣಕ್ಕಾಗಿ ಹೋರಾಡಿದ ಏಕೀಕರಣದ ಮಹನೀಯರನ್ನು ಸ್ಮರಿಸುತ್ತ ನಮ್ಮ ರಾಜ್ಯದ ಐತಿಹಾಸಿಕ ವೈಭವಗಳನ್ನು ಹೇಳಿದರೆ ಅದು ಉತ್ಸವವಾಗುತ್ತವೆ. ಇಲ್ಲವಾದರೆ ಹೊಟ್ಟೆಗೆ ಹಿಟ್ಟಿಲ್ಲದ, ಜುಟ್ಟಿನ ಮಲ್ಲಿಗೆ ಕುರಿತೇ ಮಾತನಾಡುವ ಬಡಬಡಿಕೆಯಾಗುತ್ತದೆ.

ಭಾಷೆ ಎನ್ನುವುದು ಕೊರಳಿಗೆ ಸಂಬಂಧಿಸಿದ್ದು, ಬದುಕು ಕರುಳಿಗೆ ಸಂಬಂಧಿಸಿದ್ದು. ಈ ಕೊರಳು ಮತ್ತು ಕರುಳಿನ ಕುರಿತ ಹೋರಾಟದ ನಡುವೆ ಅಂತರ್ ಸಂಬಂಧ ಏರ್ಪಡಬೇಕು. ಭಾಷೆ ಮತ್ತು ಬದುಕಿನ ಹೋರಾಟ ಪ್ರತ್ಯೇಕ ನೆಲೆ ಹಾಗೂ ದೃಷ್ಟಿಕೋನದಿಂದ ನಡೆಯಕೂಡದು. ಕರುಳು ಕೊರಳಿಗೆ ಉಸಿರುಕೊಡುತ್ತದೆ ಎಂಬ ಸತ್ಯ ಮನಗಾಣಬೇಕು. ಕೊರಳು ಕರುಳಿಗೆ ನಿಷ್ಠವಾಗಿರಬೇಕು. ಆದರೆ ಕೊರಳು ಮಾರಿಕೊಳ್ಳುವ ಕಾಲದಲ್ಲಿ ನಾವಿಂದು ಉತ್ಸವ ಆಚರಿಸುತ್ತಿದ್ದೇವೆ. ಜಾಗತೀಕರಣ ನೀತಿಗಳು ಪ್ರಾದೇಶಿಕ ಭಾಷೆ ಮತ್ತು ಬದುಕನ್ನು ನಿರ್ನಾಮ ಮಾಡಿ, ಏಕಮುಖಿ ಉತ್ಪಾದನಾ ವ್ಯವಸ್ಥೆಯನ್ನು ಹಾಗೂ ಏಕಮುಖಿಯಾದ ನಮ್ಮದಲ್ಲದ ಸಂಸ್ಕೃತಿಯನ್ನು ಹೇರುತ್ತಿವೆ. ಪ್ರಾದೇಶಿಕ ಅಸಮಾನತೆಯ ನಿರ್ಮೂಲನೆಗೆ ಹೋರಾಟ ನಡೆಯಬೇಕಾದ ಸಂದರ್ಭದಲ್ಲಿ ಪ್ರಾದೇಶಿಕತೆಯನ್ನೇ ನಿರ್ಮೂಲನ ಮಾಡುವ ಪ್ರಕ್ರಿಯೆ ತೀವ್ರವಾಗುತ್ತಿದೆ. ಇಂಥ ಸಂದರ್ಭದಲ್ಲಿ ಬಹುಭಾಷೀ, ಬಹುಮುಖಿ ಸಂಸ್ಕೃತಿಯನ್ನೊಳಗೊಂಡ ನಮ್ಮ ದೇಶದ ಭಾಷಾವಾರು ಪ್ರಾಂತಗಳ ಜನತೆಯ ಭಾಷೆ, ಸಂಸ್ಕೃತಿ ಉಳಿದು ಬೆಳೆಯಬೇಕಾದರೆ ಆ ಜನತೆಯ ಬದುಕು ಸ್ವಾವಲಂಬಿಯಾಗಬೇಕು. ಸ್ವಾವಲಂಬಿ ಜನತೆ ಮಾತ್ರ ಸ್ವಾಭಿಮಾನದ ರಾಜ್ಯ ನಿರ್ಮಾಣ ಮಾಡಲು ಸಾಧ್ಯ. ಅಂಥ ಸ್ವಾವಲಂಬನೆಗೆ ಇಂದಿನ ವಿಶ್ವದ ಕೊಡು–ಕೊಳ್ಳುವಿಕೆಯ ನೀತಿಯ ಮಧ್ಯೆಯೇ ನಮ್ಮದೇ ಆದ ಮಾರ್ಗ ಕಂಡುಕೊಳ್ಳಬೇಕಿದೆ. ಇಂಥ ಮಹತ್ತರವಾದ ಕಾರ್ಯಕ್ಕೆ ಇಂದು ಜಾಗತೀಕರಣದ ಗುಲಾಮರಾದ ಆಳುವ ಶಕ್ತಿಗಳ ವಿರುದ್ಧ ಜನಪರ ಹೋರಾಟದ ಪಕ್ಷ ಹಾಗೂ ಸಂಘಟನೆಗಳ ಜೊತೆ ತಾತ್ವಿಕವಾಗಿ ಸಂಘಟನಾತ್ಮಕವಾಗಿ ಈ ಕನ್ನಡ–ಕರ್ನಾಟಕದ ಹೆಸರಿನಲ್ಲಿರುವ ಸಂಘಟನೆಗಳು ಒಂದಾಗಿ ಹೋರಾಡಬೇಕು. ಅಂದಾಗ ಮಾತ್ರ ಏಕೀಕರಣದ ಆಶಯಗಳನ್ನು ಒಂದು ಹೆಜ್ಜೆ ಮುಂದೆ ಕೊಂಡೊಯ್ಯಲು ಸಾಧ್ಯವಾಗುತ್ತದೆ. ಇಲ್ಲವಾದರೆ ರಾಜ್ಯೋತ್ಸವ ಎನ್ನುವುದು ಭವಿಷ್ಯದ ಚಿಂತನೆ ಇಲ್ಲದ, ವರ್ತಮಾನದ ವಾಸ್ತವದ ಅರಿವಿಲ್ಲದ ಕೇವಲ ಭೂತಕಾಲದ ನೆನಪುಗಳಿಗೆ ಸೀಮಿತವಾಗುತ್ತದೆ.

## ಸುಗ್ರೀವಾಜ್ಞೆ ಹಿಂದಕ್ಕೆ ಪಡೆದ ರಾಜಕೀಯ ಪ್ರಹಸನ

ನಮ್ಮ ಶಾಸಕಾಂಗದ ಬಹುಪಾಲು ಸದಸ್ಯರು ಹಲವು ಕೋಟಿ ರೂಪಾಯಿಗಳ ಒಡೆಯರು, ಹಲವು ಮೊಕದ್ದಮೆಗಳಲ್ಲಿ ಆಪಾದಿತರು. ಪ್ರತಿಸಲ ಚುನಾವಣೆಗಳು ಬಂದಾಗ ಕಳಂಕಿತರಿಗೆ, ಅಂದರೆ ಭ್ರಷ್ಟಾಚಾರ ಪ್ರಕರಣಗಳಲ್ಲಿ ಪಾಲ್ಗೊಂಡಿರುವವರು, ಬೇರೆ ಬೇರೆ ಪ್ರಕರಣಗಳಲ್ಲಿ ಮೊಕದ್ದಮೆ ಎದುರಿಸುತ್ತಿರುವವರಿಗೆ




**ಸಮಾಲೋಚಕ ಮಂಡಲಿ**

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ

**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೫/- |
| ವಾರ್ಷಿಕ ಚಂದಾ | ರೂ. ೨೦೦/- |
| ಮೂರು ವರ್ಷಕ್ಕೆ | ರೂ. ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
☎ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨

ಸ್ಪರ್ಧಿಸಲು ಅವಕಾಶಕೂಡದು ಎಂದು ರಾಜಕೀಯ ಪಕ್ಷಗಳ ಮೇಲೆ ಒತ್ತಾಯ ಇರುತ್ತದೆ. ಆದರೂ ಅದನ್ನು ಲೆಕ್ಕಿಸದೆ ಅಂಥವರೇ ಅಭ್ಯರ್ಥಿಗಳಾಗುತ್ತಾರೆ, ಆರಿಸಿಯೂ ಬರುತ್ತಾರೆ, ಸಚಿವರೂ ಆಗುತ್ತಾರೆ. ಈಚಿನ ದಿನಗಳಲ್ಲಿ ಇದು ವಿಪರೀತದ ಮಟ್ಟಕ್ಕೆ ಹೋಗುತ್ತಿದೆ. ರಾಜಕೀಯ ಅಪರಾಧೀಕರಣಗೊಂಡಿದೆಯೋ ಇಲ್ಲ ಅಪರಾಧಿಗಳ ಕೈಯ್ಯಲ್ಲಿ ರಾಜಕೀಯ ಸಿಕ್ಕಿಕೊಂಡಿದೆಯೊ ! ಅಂತೂ ರಾಜಕೀಯ ಕಲುಷಿತಗೊಂಡಿದೆ ಎನ್ನುವುದು ಸತ್ಯ. ಇದಕ್ಕೆ ಪರಿಹಾರ ಏನು ? ಇದು ಯಕ್ಷಪ್ರಶ್ನೆ. ಸೀಟುಗಳ ಲೆಕ್ಕಾಚಾರ, ಗೆಲ್ಲುವ ಕುದುರೆಗೇ ಮಣೆ ಅನ್ನುವುದೇ ಪ್ರಮುಖ ರಾಜಕೀಯ ಪಕ್ಷಗಳ ವೋಟ್ ಬ್ಯಾಂಕ್ ರಾಜಕಾರಣ. ಹಾಗಾಗಿ ಅಪರಾಧೀಕರಣಕ್ಕೆ ಅವು ಕಡಿವಾಣ ಹಾಕುವುದೆಂದು ನಿರೀಕ್ಷಿಸುವುದು ಸಾಧ್ಯವಿಲ್ಲ. ನಮ್ಮ ನ್ಯಾಯಾಂಗದ ಮಂದಗತಿ ಅಂಥ ರಾಜಕಾರಣಿಗಳಿಗೆ ಶ್ರೀರಕ್ಷೆ. ಎರಡು ದಶಕಗಳಿಗೂ ಹೆಚ್ಚು ಕಾಲವಾದ ಮೇಲೆ ಬಿಹಾರದ ಮಾಜಿ ಮುಖ್ಯಮಂತ್ರಿ ಲಾಲೂ ಪ್ರಸಾದ್ ಯಾದವ್ ಈಚೆಗೆ ಶಿಕ್ಷೆಯಾಗಿ ಕಾರಾಗೃಹದಲ್ಲಿದ್ದಾರೆ. ಇನ್ನು ಈತನಿಗೆ ಶಿಕ್ಷೆ ಕಾಯಂ ಆಗಲು ಹೈಕೋರ್ಟ್, ಸುಪ್ರೀಮ್ ಕೋರ್ಟ್ ಮೆಟ್ಟಿಲುಗಳಿವೆ. ಇದು ತೀರ ಈಚಿನ ಉದಾಹರಣೆ. ಇನ್ನೂ ಎಷ್ಟೋ ಪ್ರಕರಣಗಳು ನ್ಯಾಯಾಲಯಗಳಲ್ಲಿ ಕೊಳೆಯುತ್ತಿವೆ. ತ್ವರಿತ ನ್ಯಾಯ ವಿತರಣೆ ಸದ್ಯಕ್ಕಂತೂ ಕನಸಿನ ಮಾತು. ಎಲ್ಲ ಕಗ್ಗಂಟು.

ಸುಪ್ರೀಮ್ ಕೋರ್ಟಿನ ಇತ್ತೀಚಿನ ಒಂದು ತೀರ್ಪು ರಾಜಕೀಯದ ಅಪರಾಧೀಕರಣ ತಡೆಯುವುದರಲ್ಲಿ ಒಂದು ಹೆಜ್ಜೆ ಮುಂದಿರಿಸಿದೆ. ಅದರ ಪ್ರಕಾರ ಯಾವುದೇ ನ್ಯಾಯಾಲಯದಲ್ಲಿ ಶಿಕ್ಷೆಗೆ ಒಳಗಾದ ಶಾಸಕ ಯಾ ಪಾರ್ಲಿಯಮೆಂಟ್ ಸದಸ್ಯ ಒಡನೆಯೇ ಅನರ್ಹನಾಗಿ ಸದಸ್ಯತ್ವ ಕಳೆದುಕೊಳ್ಳುತ್ತಾನೆ ಮತ್ತು ಚುನಾವಣೆಗಳಲ್ಲಿ ಸ್ಪರ್ಧಿಸಲು ಆರು ವರ್ಷ ಅನರ್ಹನಾಗುತ್ತಾನೆ. ಈ ತೀರ್ಪು ರಾಜಕೀಯ ಪಕ್ಷಗಳಲ್ಲಿ ಸಂಚಲನ ಉಂಟುಮಾಡಿತು. ಮುಖ್ಯವಾಗಿ ಕಾಂಗ್ರೆಸ್, ಭಾಜಪ ಹಾಗೂ ಇತರ ಪ್ರಮುಖ ರಾಜಕೀಯ ಪಕ್ಷಗಳು ಗಾಬರಿಗೊಂಡವು. ಆಪಾದಿತ ಶಾಸಕರ ಸಂಖ್ಯೆ ಹೆಚ್ಚಾಗಿರುವುದು ಈ ಪಕ್ಷಗಳಲ್ಲಿಯೇ. ಮೊಕದ್ದಮೆಗಳು ನ್ಯಾಯಾಲಯಗಳಲ್ಲಿ ವಿವಿಧ ಹಂತಗಳಲ್ಲಿವೆ. ಮತ್ತೆ ಇನ್ನು ಆರೇಳು ತಿಂಗಳಲ್ಲಿ ಲೋಕಸಭಾ ಚುನಾವಣೆಗಳು ಬರಲಿವೆ. ರಾಜಕೀಯ ಪ್ರೇರಿತವಾದ ಮೊಕದ್ದಮೆಗಳ ಕುರಿತು ಈ ಪಕ್ಷಗಳ ಆತಂಕ. ಏನೇ ಕಾರಣಗಳಿದ್ದಾಗ್ಯೂ ಆಪಾದಿತರನ್ನು ಹಿಂದಿಟ್ಟುಕೊಳ್ಳುವುದು ಅಕ್ಷಮ್ಯ. ಹಾಗಾಗಿ ಸುಪ್ರೀಂ ಕೋರ್ಟಿನ ತೀರ್ಮಾನವನ್ನು ಕಾರ್ಯಗತವಾಗದಂತೆ ಮಾಡಲು ಚುನಾವಣಾ ಕಾಯ್ದೆಯಲ್ಲಿ ತಿದ್ದುಪಡಿ ತರಲು ರಾಜಕೀಯ ಪಕ್ಷಗಳು ತೀರ್ಮಾನಿಸಿದ್ದಾಯಿತು. ಮುಖ್ಯವಾಗಿ ಕಾಂಗ್ರೆಸ್ ಮತ್ತು ಭಾಜಪಗಳು ಈ ವಿಷಯದಲ್ಲಿ ಒಮ್ಮತ ಹೊಂದಿದ್ದವು. ತಿದ್ದುಪಡಿ ಮಸೂದೆಯನ್ನು ಸಿದ್ಧಗೊಳಿಸಿದ ಯುಪಿಎ ಸರಕಾರ ಅದನ್ನು ರಾಜ್ಯಸಭೆಯಲ್ಲಿ ಮಂಡಿಸಿಯೂ ಇತ್ತು. ಈ ಕ್ರಮ ಎಷ್ಟು ಸಮಂಜಸ ಎನ್ನುವ ವಿಚಾರ ಸದ್ಯಕ್ಕೆ ಅನಗತ್ಯ.

ಈ ಮಧ್ಯೆ ದಿಢೀರ್ ಎಂದು ಕಾಂಗ್ರೆಸ್ ನೇತೃತ್ವದ ಮನಮೋಹನ ಸಿಂಗ್ ಸರಕಾರ ತಿದ್ದುಪಡಿಯನ್ನು ಸುಗ್ರೀವಾಜ್ಞೆ ಮೂಲಕ ಜಾರಿಗೆ ತರಲು ತೀರ್ಮಾನಿಸಿತು. ಸುಗ್ರೀವಾಜ್ಞೆಯ ಕರಡನ್ನು ರಾಷ್ಟ್ರಪತಿಯವರ ಸಮ್ಮತಿಗೂ ರವಾನಿಸಿ ಪ್ರಧಾನಿ ಅಮೆರಿಕ ಪ್ರವಾಸಕ್ಕೂ ಹೋಗಿ ಆಯಿತು. ಸರಕಾರದ ನಿರೀಕ್ಷೆಯಂತೆ ರಾಷ್ಟ್ರಪತಿಯವರ ಅಂಗೀಕಾರ ಒಡನೆಯೇ ಲಭಿಸಲಿಲ್ಲ. ಅದು ದೊರೆಯುತ್ತಿತ್ತೋ ಇಲ್ಲವೊ ಎನ್ನುವ ಪ್ರಶ್ನೆ ಈಗಿಲ್ಲ, ಏಕೆಂದರೆ ಸರಕಾರ ಅಷ್ಟೇ ಅವಸರದಿಂದ ಅದನ್ನು ಹಿಂದಕ್ಕೆ ಪಡೆದುಕೊಂಡಿದೆ. ಈ ಅವಾಂತರಗಳ ಮಧ್ಯೆ ನಡೆದ ನಾಟಕೀಯ ಬೆಳವಣಿಗೆ ಗಮನಾರ್ಹ. ಅದು ಕಾಂಗ್ರೆಸ್ ಪಕ್ಷದ ಉಪಾಧ್ಯಕ್ಷ, ಲೋಕಸಭಾ ಸದಸ್ಯ ರಾಹುಲ್ ಗಾಂಧಿ ಅನಿರೀಕ್ಷಿತವಾಗಿ ಕಾಂಗ್ರೆಸ್ ಪತ್ರಿಕಾ ಗೋಷ್ಠಿಯಲ್ಲಿ ಸುಗ್ರೀವಾಜ್ಞೆಯನ್ನು ಅವಿವೇಕದ ಕ್ರಮ, ಅದನ್ನು ಹರಿದು ಬಿಸಾಕಬೇಕು ಎಂದು ಹೇಳಿದ್ದು. ಅಧಿಕಾರದಲ್ಲಿರುವ ಪಕ್ಷದ ನಾಯಕನ ಈ ಅಬ್ಬರದ ಹಿನ್ನೆಲೆ ಏನು ಎನ್ನುವುದು ಪ್ರಾಯಶಃ ಯಾವತ್ತೂ ಬಯಲಾಗದೆ ಇರಬಹುದು. ಆದರೆ ಈ ನಾಟಕೀಯ ಬೆಳವಣಿಗೆಯ ಹಿಂದೆ ಪೇಚಿನಿಂದ ಹೊರಬರಲು ಕಾಂಗ್ರೆಸ್ ನಡೆಸಿದ ಸಂಚು ಎನ್ನುವುದಂತೂ ಸತ್ಯ. ಸರಕಾರಕ್ಕೆ ಮುಖಭಂಗವಾದರೂ, ಮನಮೋಹನ ಸಿಂಗ್ ಕುರ್ಚಿ ತ್ಯಜಿಸಲಿಲ್ಲ. ಸ್ವದೇಶಕ್ಕೆ ಮರಳಿದ ಪ್ರಧಾನಿ ಅವಸರವಾಗಿ ಸಂಪುಟದ ಸಭೆ ಕರೆದು ಸುಗ್ರೀವಾಜ್ಞೆಯನ್ನು ಹಿಂತೆಗೆದುಕೊಳ್ಳಲು ಅಂಗೀಕಾರ ಪಡೆದರು, ರಾಷ್ಟ್ರಪತಿಯಿಂದ ಅದನ್ನು ಹಿಂಪಡೆದಿದ್ದೂ ಆಯಿತು.

ಈ ಪ್ರಕರಣ ಹಲವಾರು ಪ್ರಶ್ನೆಗಳನ್ನು ಹುಟ್ಟಿಹಾಕಿದೆ. ಸರಕಾರ ಏಕೆ ಆತುರಾತುರವಾಗಿ ಸುಗ್ರೀವಾಜ್ಞೆಯ ಮೊರೆಹೋಯಿತು ? ಪ್ರಾಯಶಃ ಲಾಲೂಪ್ರಸಾದ್ ಯಾದವ್ ಅನರ್ಹತೆ ತಡೆಯುವುದಕ್ಕಾಗಿಯೆ ? ಮತ್ತೆ ಕಾಂಗ್ರೆಸ್ ಹಾಗೂ ಸಚಿವ ಸಂಪುಟದ ತೀರ್ಮಾನ ರಾಹುಲ್ ಗಾಂಧಿ ಗಮನಕ್ಕೆ ಬಂದಿರಲಿಲ್ಲವೆ ? ಇಂಥ ಪ್ರಶ್ನೆಗಳೂ ಚರ್ಚೆಗೆ ಗ್ರಾಸವಾಗಿವೆ. ಅದೇನೇ ಇರಲಿ ಸರಕಾರದ ಸುಗ್ರೀವಾಜ್ಞೆಗೆ ಜನಸಾಮಾನ್ಯರ ವಿರೋಧ ಇತ್ತು ಎನ್ನುವುದು ನಿಜ. ಫಜೀತಿಗೆ ಸಿಕ್ಕಿಕೊಂಡಿದ್ದ ಕಾಂಗ್ರೆಸ್ ಅದರಿಂದ ಹೊರಬರಲು ನಡೆಸಿದ ಅಣಕ ಇದು. ಆದರೆ ಹಲವು ಹಗರಣಗಳಲ್ಲಿ ಸಿಕ್ಕಿಕೊಂಡಿರುವ ಯುಪಿಎ ಸರಕಾರವನ್ನು ಬಚಾವು ಮಾಡಲು ಯಾವ ತಂತ್ರವೂ ಫಲಿಸದು. ಚುನಾವಣೆಗೆ ಮುನ್ನ ಇನ್ನೂ ಏನೇನು ಕಾದಿದೆಯೊ ?

---

***ಈ ತಿಂಗಳು (೩ನೇ ಪುಟದಿಂದ)***

ಅಭಿಮುಖವಾಗಿ, ವಿಸ್ತರಿಸಿಕೊಂಡಾಗ ಮಾತ್ರ ದಸರಾ ಎಂದರೆ ಉಲ್ಲಾಸದ ಅನುಭವ ಆಗುತ್ತದೆ.

*   *   *

ಬೆಂಗಳೂರಿನ ನಾಗರಿಕರ ಪುಣ್ಯ, ಹಣ ತುಂಬಿಕೊಂಡಿರುವ ಸಾಹಿತ್ಯದ ದಲ್ಲಾಳಿಗಳು ತಮ್ಮ ಸಾಹಿತ್ಯ ಸಂಭ್ರಮವನ್ನು ಊರಾಚೆಯ ವಿದ್ಯುನ್ಮಾನ ನಗರಿಯಲ್ಲಿ ಆಯೋಜಿಸಿಕೊಂಡರು. ಹುಲ್ಲುಹಾಸು, ಹೆಂಡ, ಹೆಳವ ಪ್ರಜ್ಞೆ, ಎಲ್ಲಕ್ಕೂ ಹೇಳಿ ಮಾಡಿಸಿದ ಜಾಗ ಅದು. ಅಲ್ಲಿ ಸಹಜವಾಗಿಯೇ ಘಟಾನುಘಟಿಗಳು ಮಾತ್ರವೇ ಉಪನ್ಯಾಸ ನೀಡಿ "ಕೊರೆಯಲು" ಸಾಧ್ಯ. ಇಷ್ಟು ನಿಮಿಷ ಮಾತನಾಡಲು ಇಷ್ಟು ಹಣ, ಇಷ್ಟು ವೇಳೆ ಇಲ್ಲಿರಬೇಕಾದರೆ ಇಷ್ಟು ಹಣ, ಇತ್ಯಾದಿ ಲೆಕ್ಕಾಚಾರಗಳಿಗೆ ವಿದ್ಯುನ್ಮಾನ ನಗರಿಯು ಪ್ರಸಿದ್ಧ. ಅನಂತಮೂರ್ತಿ ಮತ್ತು ರಾಮಚಂದ್ರ ಗುಹ ಇರಲೇಬೇಕಿತ್ತು, ಇದ್ದರು. ಬೇರೆ ಅನೇಕ ಮಹಾನ್ ಸಾಹಿತಿಗಳು, ವಿಮರ್ಶಕರು, ಕಲಾಕಾರರು ಅಲ್ಲಿ ಉಪಸ್ಥಿತರಿದ್ದು ಜ್ಞಾನ ಹಂಚಿಕೊಂಡರು, ಅಂತೆಯೇ ಬಹುಶಃ ಹಣವನ್ನೂ ಹಂಚಿಕೊಂಡಿರಬೇಕು. ಭೂಕಬಳಿಕೆಯ ಖ್ಯಾತಿಯ ಗುರು ರವಿಶಂಕರ ಸ್ವಾಮಿ ಸಹ ಅಲ್ಲಿಗೆ ಹೋಗಿ "ಅದ್ಭುತ" ಸಾಂಸ್ಕೃತಿಕ ಉಪನ್ಯಾಸ ನೀಡಿದನಂತೆ. ಅದೊಂದೇ ಸಾಲದೆ ಆ ಸಾಹಿತ್ಯ ಸಂಭ್ರಮದ ಉದ್ದೇಶ ಮತ್ತು ಯೋಗ್ಯತೆಗಳನ್ನು ಅಳೆಯಲು ! ಮಜಾ ಎಂದರೆ ನಮ್ಮ ಕನ್ನಡವನ್ನು "ಒಂದು ಥರಾ" ಮಾತನಾಡುವ ಮಂದಿ ಅಲ್ಲಿದ್ದರಂತೆ. ಅವರಿಗೆ ನಮ್ಮ ಕನ್ನಡ ಸಾಹಿತ್ಯ ದಿಗ್ಗಜರ ಬಗ್ಗೆ ಅಷ್ಟೇನೂ ತಿಳಿಯದು. ಪ್ರಯತ್ನಿಸಿದರೆ ತಾನೆ ತಿಳಿವಳಿಕೆ ! ಆದರೆ ದಿಗ್ಗಜರ ಅಳಲು ಅದಲ್ಲ. ತಮ್ಮ ಘನಂದಾರಿ ಉಪನ್ಯಾಸಗಳಿಗೆ "ಪ್ರತಿಷ್ಠಿತ ಶ್ರೋತೃಗಳು" ಬರಲೇ ಇಲ್ಲ ಎಂಬುದು ಇವರಿಗೆ ಮನೋವೇದನೆ. ಕಲಾಸಿಪಾಳ್ಯದ ಬಳಿ ನಿಂತು ಸಾಹಿತ್ಯ ಪ್ರವಚನ ನೀಡಿದ್ದರೆ ಆಹ್ವಾನವಿಲ್ಲದೆಯೇ ನೂರಿನ್ನೂರು ಮಂದಿ ಸೇರಿ ಉಪನ್ಯಾಸ ಕೇಳುತ್ತಿದ್ದರಲ್ಲ. ಬದಲಾಗಿ ವಿದ್ಯುನ್ಮಾನದವರ ಬಳಿ ಹೋಗಿ ಸಾಹಿತ್ಯದಿಂದ ರಂಜನೆ ನೀಡಿ ಬಂದಮೇಲೆ "ನಮ್ಮ ಭಾಷಣ ಕೇಳಲು ಜನರೇ ಇರಲಿಲ್ಲ" ಎಂದು ತಲೆ ಚಚ್ಚಿಕೊಂಡರೆ ನಮ್ಮ ಸಾಹಿತ್ಯ ಪ್ರಭೃತಿಗಳ ಭವಿಷ್ಯ ಇನ್ನೂ ಬರಿದಾಗಿಬಿಡುವ ಭೀತಿ ಇದೆ. ಯಾವ ನಿರೀಕ್ಷೆ ಇರಿಸಿಕೊಂಡು ಹೋಗಿದ್ದರೋ ಏನೋ ನಮ್ಮ ಸಾಹಿತ್ಯ ವಿದ್ವಾಂಸರು, ಪಾಪ; ಆದರೆ ಕಂಪ್ಯೂಟರ್ ನಗರದ ಕಂಪನಿಗಳ ವಿಶಾಲ ಹುಲ್ಲುಹಾಸಿನ ಮೇಲೆ ಹೇಗೇಗೋ ಕುಳಿತು, ನಿಂತು, ಮಲಗಿ, ಕುಕ್ಕರಿಸಿ ಅಲ್ಲಿಯ "ಸಾಹಿತ್ಯಾಸಕ್ತರು" ಮೆಕ್ಡೊನಾಲ್ಡ್ ತಿನಿಸುಗಳನ್ನು ನಿಧಾನವಾಗಿ ನುಂಗುವುದರಲ್ಲಿ ಆಸಕ್ತರಾಗಿದ್ದರು, ಮಗ್ನರಾಗಿದ್ದರು. ಅವರಿಗೆ ವಿರಾಮದ ಮೋಜು ಬೇಕಿತ್ತು, ಅದಕ್ಕೇ ನಮ್ಮ ಪ್ರತಿಭಾವಂತ ಸಾಹಿತ್ಯ ಸೃಷ್ಟಿಕರ್ತರನ್ನು ಕರೆದು ಒಂದಷ್ಟು ಖುಷಿ ಪಡೆದುಕೊಂಡರು, ಮುಸಿಮುಸಿ ನಕ್ಕರು. "ನಿಮ್ಮ ಜೇಬುಗಳು ಎಷ್ಟು ತುಂಬಿದವು ?" ಎಂದು ಆ ಜನ ನಮ್ಮ ಸಾಹಿತಿಗಳನ್ನು ಕೇಳಲಿಲ್ಲ ಎಂಬುದೊಂದೇ ಸಮಾಧಾನ. "ಎಲೆಕ್ಟ್ರಾನಿಕ್ ಸಿಟಿ"ಗೆ ಹೋಗುವ ಬದಲು ನಮ್ಮ ಇದೇ ಸಾಹಿತಿಗಳು

ಕೋಲಾರಕ್ಕೆ ಹೋಗಿ ಸಂತ ಕನಕನ ಬಗೆಗಿನ ಗೋಷ್ಠಿಗಳಲ್ಲಿ ಮಾತನಾಡಿದ್ದಿದ್ದರೆ ಇಡೀ ಭವನವು ಆಸಕ್ತ ಕೇಳುಗರಿಂದ ತುಂಬಿದ್ದುದನ್ನು ಕಾಣಬಹುದಿತ್ತು. ಆದರೆ ಅಲ್ಲಿ ಹುಲ್ಲುಹಾಸು, ಮೆಕ್ಡೊನಾಲ್ಡ್, ರಾಯಲ್ ಸೆಲ್ಯೂಟ್ ಇರುತ್ತಿರಲಿಲ್ಲ. ಒಂದು ತಟ್ಟೆಯಲ್ಲಿ ಬಿಸಿಬೇಳೆ ಭಾತ್, ಬೋಂಡ ಮತ್ತು ಮೊಸರನ್ನ ಮಾತ್ರ ಇರುತ್ತಿತ್ತು. ವಿಶೇಷವೇನೆಂದರೆ, ಅಲ್ಲಿಗೂ ಹತ್ತಾರು ಸಾಹಿತಿಗಳು, ವಿದ್ವಾಂಸರು, ವಿದ್ಯಾರ್ಥಿಗಳು, ಎಲ್ಲಾ ಹೋಗಿದ್ದರು ಮತ್ತು ಗಂಭೀರವಾಗಿ ಎರಡು ದಿನ ಏನೇನೋ ಗಹನವಾಗಿ ಚರ್ಚಿಸಿದರು. ಕನ್ನಡ ಬಾರದ ಮಂದಿ ಇಲ್ಲದೆಡೆ ಸಾಹಿತ್ಯ ವಿದ್ವಾಂಸರಿಗೇನು ಕೆಲಸ ಎಂಬುದು ವಿದ್ಯುನ್ಮಾನ ನಗರಿಯ ಸಾಹಿತ್ಯ ಸಂಭ್ರಮದಲ್ಲಿ ಕಂಗೊಳಿಸಿದ ಕನ್ನಡ ಸಾಹಿತಿಗಳ ಪ್ರಶ್ನೆ ಇರಬೇಕು. ಜೈ ಕನ್ನಡ ಸಾಹಿತ್ಯ !

* * *

ರಾಹುಲ್ ಗಾಂಧಿಯ ಸ್ವೇಚ್ಛಾಚಾರ ಪ್ರವೃತ್ತಿಯಿಂದಾಗಿ ಮನಮೋಹನ ಸಿಂಗರ ಒಂದು "ನಾನ್‌ಸೆನ್ಸ್" ಸುಗ್ರೀವಾಜ್ಞೆ ಕಸದ ಬುಟ್ಟಿಗೆ ಹೋಗುವ ಮುನ್ನ ಮಾಧ್ಯಮಗಳು ಅಬ್ಬರಿಸುತ್ತಿದ್ದುದು ತಿಳಿದಿದೆಯಲ್ಲವೆ ? ರಾಜಕಾರಣಿಗೆಳೆಲ್ಲಾ ಒಂದು "ಗ್ಯಾಂಗ್" ರೀತಿಯಲ್ಲಿ ಒಟ್ಟಾಗಿಬಿಡುತ್ತಾರೆ, ತಮ್ಮ ಸಂಬಳ, ವಿದೇಶ ಪ್ರವಾಸ, ಸೌಲಭ್ಯಗಳು, ಎಲ್ಲವನ್ನೂ ಎಗ್ಗಿಲ್ಲದೆ ಹೆಚ್ಚಿಸಿಕೊಂಡುಬಿಡುತ್ತಾರೆ; ಅವರಿಗೆ ಲಜ್ಜೆಯಿಲ್ಲ, ಮೌಲ್ಯಗಳಿಲ್ಲ, ಪ್ರಜೆಗಳ ಪ್ರತಿನಿಧಿಗಳು ತಾವೆಂಬ ಘನತೆ ಇಲ್ಲ, ಇನ್ನೂ ಏನೇನೋ ಇಲ್ಲ, ಇತ್ಯಾದಿಯಾಗಿ. ದೊಡ್ಡ ಪ್ರಜಾಪ್ರಭುತ್ವವಾದಿ ರಾಹುಲ್ ಈ ಟೀಕಾಕಾರರ ಬಾಯಿಗೆ ಬೀಗ ಜಡಿದುಬಿಟ್ಟ. ಅಪರಾಧಿಗಳೆಂದು ಸಾಬೀತಾಗಿರುವ ಮಂದಿಗೆ ಲೋಕಸಭೆ-ಶಾಸನಸಭೆಗಳಲ್ಲಿ ಕೂರುವ ಅವಕಾಶ ಕೂಡದೆಂಬ ನ್ಯಾಯಾಲಯದ ತೀರ್ಪಿಗೆ ಪ್ರತಿಕ್ರಿಯೆ, ಗೌಹತಿ ಪ್ರತಿನಿಧಿ ಪ್ರಧಾನಿ ಸಿಂಗ್ ಅವರ ಆರ್ಡಿನೆನ್ಸ್. ಅಬ್ಬರವೆಲ್ಲಾ ಮುಗಿದಿದೆ, ಈಗಲಾದರೂ ಮಾಧ್ಯಮಗಳು ಸ್ವಲ್ಪ ಸಹನೆಯಿಂದ ವಾಸ್ತವವನ್ನು ತಿಳಿಯಬೇಕಲ್ಲವೆ ? ಆ ಮನಮೋಹಕ ಆರ್ಡಿನೆನ್ಸ್‌ಅನ್ನು ಎಲ್ಲ ರಾಜಕೀಯ ಪಕ್ಷಗಳೂ ಬೆಂಬಲಿಸಿರಲಿಲ್ಲ, ಎಲ್ಲ ಬಣಗಳ ರಾಜಕಾರಣಿಗಳೂ "ಗ್ಯಾಂಗ್" ಸೇರಿರಲಿಲ್ಲ. ಕಮ್ಯುನಿಸ್ಟ್ ಪಕ್ಷಗಳು ಆರ್ಡಿನೆನ್ಸ್‌ಅನ್ನು ತೀವ್ರವಾಗಿ ವಿರೋಧಿಸಿದ್ದುವು; ಆ ಪಕ್ಷಗಳವರಿಗೆ ರಾಹುಲ್ ಬಾಬಾ ಬರುವನೆಂದು ಶಬರಿಯಂತೆ ಕಾದು ಕುಳಿತಿರಬೇಕಾದ ಪೇಚಾಟವೇನೂ ಇರಲಿಲ್ಲ. ಲಾಲೂಪ್ರಸಾದ್, ಮುಲಾಯಂ, ಮತ್ತು ಅವರ ಸಹವರ್ತಿ ಅಪರಾಧಿಗಳು ಪಾರ್ಲಿಮೆಂಟಿಗೆ ಬಂದು ಸಿಂಗ್ ಸರ್ಕಾರವನ್ನು ಉಳಿಸಬೇಕೆಂಬ ತುರ್ತೇನೂ ಇರಲಿಲ್ಲ. ಅಥವಾ, ಮುಂದಿನ ವರ್ಷ ಮತ್ತೆ ಮನಮೋಹನ ಸಿಂಗ್ ಅಥವಾ ಅವರ ಪಕ್ಷದ ಯಾವನೋ ಧುರೀಣನೇ ಪ್ರಧಾನಿಯಾಗಬೇಕೆಂಬ ಕಳಕಳಿಯೂ ಇರಲಿಲ್ಲ. ಮಾಧ್ಯಮಗಳಿಗೆ ಇದು ಕಾಣುವುದಿಲ್ಲವೆ ? ಕಾಣುತ್ತದೆ, ಆದರೆ ಕೇಜ್ರಿವಾಲನ ತುತ್ತೂರಿ ಆಗಬೇಕಾದರೆ ಅವರು ಕಣ್ಣು-ಕಿವಿ ಮುಚ್ಚಿಕೊಳ್ಳಬೇಕು. ಹೋಗಲಿ, ರಾಜಕಾರಣಿಗಳಿಗಿಂತ ನಮ್ಮ ರಾಜ್ಯದ ಕಾವಿ ಸ್ವಾಮಿಗಳೇನು ಕಮ್ಮಿ ? ಜೇವರ್ಗಿಯಲ್ಲಿ ಅಡ್ಡಪಲ್ಲಕ್ಕಿಯಲ್ಲಿ ಪವಡಿಸಿ ನಾಲ್ಕು ಜನರಿಂದ ಹೊರಿಸಿಕೊಳ್ಳಬೇಕೆಂಬ ಮಹದಾಕಾಂಕ್ಷೆಯು ಫಲಿಸಲೆಂದು ಅದೆಷ್ಟು ಸ್ವಾಮಿಗಳು ಥಟಕ್ಕನೆ "ಗ್ಯಾಂಗ್" ಕಟ್ಟಿಕೊಂಡುಬಿಡಲಿಲ್ಲವೆ ! ಪ್ರಸ್ತುತ ಸಂಚಿಕೆ ಓದುಗರ ಕೈ ಸೇರುವ ವೇಳೆಗೆ ಮಂತ್ರಿಗಳೋ, ಜಿಲ್ಲಾಧಿಕಾರಿಯೋ, ಯಾರೋ ಅಂತೂ ಎಂಥದೋ ಒಡಂಬಡಿಕೆ ಮೂಡಿಸಿ ಶಾಂತವಾಗಿ ಪಲ್ಲಕ್ಕಿ ತನ್ನ ಗುರಿ ಸೇರುವಂತೆ ಮಾಡುತ್ತಾರೆಂಬ ಭರವಸೆ ಹುಸಿಯಾಗದು. "ಹೊರುವವರೇ ಸುಮ್ಮನಿರುವಾಗ ನಿಮ್ಮದೇನು ಅಧಿಕಪ್ರಸಂಗ" ಎಂದು ಕೆಲವು ಸ್ವಾಮಿಗಳು ಟೀಕೆ ಮಾಡಿದ ವಿಚಾರವಂತರನ್ನು ಕೇಳಿದ್ದಾರೆ. ಪೇಜಾವರ ಸ್ವಾಮಿಯು ಕುಕ್ಕೆ ಸುಬ್ರಹ್ಮಣ್ಯದ ಮಲೆಕುಡಿಯರ ಬಗೆಗೂ ಅದೇ ಪ್ರಶ್ನೆ ಹಾಕುತ್ತಾರೆ : "ಎಂಜಲೆಲೆ ಮೇಲೆ ಉರುಳುವ ಅವರೇ ಅದನ್ನು ಒಪ್ಪಿ ಸ್ವಯಮಿಚ್ಛೆಯಿಂದ ಮಾಡುತ್ತಿರುವಾಗ ಬೇಡವೆನ್ನಲು ನೀವು ಯಾರು ?" ಈ ಪ್ರಶ್ನೆಯು ಸ್ವಾಮಿಗಳ ಬ್ರಹ್ಮಾಸ್ತ್ರ. ನೂರು ವರ್ಷಗಳ ಹಿಂದೆ ಜ್ಯೋತಿಬಾ ಫುಲೆಯಂತಹ ಮಹಾತ್ಮರು ಬರುವ ಮುನ್ನ ನಮ್ಮ ದೇಶದ "ಅಸ್ಪೃಶ್ಯರು" ಸಹ "ಸ್ವಯಮಿಚ್ಛೆಯಿಂದ" ಅಸ್ಪೃಶ್ಯರಾಗಿರಲು ತಾವೇ ಒಪ್ಪಿದ್ದರು. ಅವರ ಪ್ರಜ್ಞಾವಲಯವನ್ನು ಹಿಗ್ಗಿಸಿ ಮಾನವ ಘನತೆಯ ಪ್ರಜ್ಞೆಯನ್ನು ಅವರಲ್ಲಿ ತುಂಬಲು ಪೇಜಾವರರ ತಾತನಾಗಿದ್ದ ಯಾವನೋ ಸ್ವಾಮಿ ಬರಲಿಲ್ಲ; ಬಂದಿದ್ದು ಮಹಾತ್ಮ ಫುಲೆಯಂಥವರು. "ಸ್ವಾಮಿಗಳೇ, ಪ್ರಶ್ನೆ ಅದಲ್ಲ; ನಿಮಗೂ ಸರಿಯಾದ ಪ್ರಶ್ನೆ ಗೊತ್ತಿದೆಯಲ್ಲವೆ ? 'ಸ್ವಯಮಿಚ್ಛೆ'ಯಿಂದ ಘನತೆಗೆ ಚ್ಯುತಿ ತರುವಂತಹ ಎಂತೆಂಥದೋ ಕೃತ್ಯಗಳಲ್ಲಿ ತೊಡಗುವ ಅಮಾಯಕ ಜನರಿದ್ದಾರಲ್ಲ, ಅವರ ಪ್ರಜ್ಞೆಯನ್ನು ಆ ಮಟ್ಟದಲ್ಲೇ ಇರಿಸಲು ನೀವೆಲ್ಲಾ ಹೂಡಿರುವ ಉಪಾಯ ಎಂಥದು ? ಅದನ್ನು ಹೇಳಿ, ಸ್ವಾಮಿ. ಪ್ರಜ್ಞೆ ಆ ಮಟ್ಟದಲ್ಲೇ ಇದ್ದರೆ ನಿಮಗೆ ಅಪಾರ ಲಾಭ; ಆದ್ದರಿಂದ ಕುಷ್ಠರೋಗ ಗುಣವಾಗುತ್ತದೆ, ನಾಗಪ್ಪ ಕಚ್ಚುವುದಿಲ್ಲ, ಮನಸ್ಸಿಗೆ ನೆಮ್ಮದಿ ಬರುತ್ತದೆ, ಎಂಬ ಕತೆಗಳನ್ನು ಕಟ್ಟುತ್ತೀರಲ್ಲ. ಈಗಲಾದರೂ ಅದನ್ನು ಸಾಕು ಮಾಡಿ ಘನತೆಯ ಮಾನವನ ಮಟ್ಟಕ್ಕೇರಿ. ನಿಮ್ಮ ಮಾನಸಿಕ ಆರೋಗ್ಯಕ್ಕೆ ಅದು ಪರಮೌಷಧಿ."

* * *

೧೯೯೭ರ ಡಿಸೆಂಬರ್ ೧ : ಬಿಹಾರದ ಲಕ್ಷ್ಮಣ್‌ಪುರ್ ಬಾತೆ ಎಂಬ ಗ್ರಾಮಕ್ಕೆ ಅದು ಕರಾಳ ರಾತ್ರಿ; ರಣವೀರ್ ಸೇನೆಯ ಪುಂಡರು ರಾತ್ರಿಯ ವೇಳೆ ಆ ಗ್ರಾಮಕ್ಕೆ ಮುತ್ತಿಗೆ ಹಾಕಿ ೨೭ ಮಹಿಳೆಯರು ಮತ್ತು ೩೧ ಪುರುಷರನ್ನು ಕೊಚ್ಚಿಹಾಕಿದ್ದು ಅಂದು. ಹದಿನಾರು ವರ್ಷಗಳ ನಂತರ ಇದೇ ಅಕ್ಟೋಬರ್ ೯ರಂದು ಮತ್ತೆ ಆ ಗ್ರಾಮವು ಇನ್ನೊಂದು ಕರಾಳ ಘಟನೆಯನ್ನು ಕಂಡು ಜಗ್ಗಿಹೋಯಿತು. ಪಾಟ್ನಾದಲ್ಲಿ ಇರುವ ಬಿಹಾರ ಉಚ್ಚ ನ್ಯಾಯಾಲಯವು ಅಪರಾಧಿಗಳನ್ನು ನಿರ್ದೋಷಿಗಳೆಂದು ಘೋಷಿಸಿ ಬಿಡುಗಡೆಗೊಳಿಸಿತು. ಅವರೆಲ್ಲಾ ಅಪರಾಧಿಗಳಲ್ಲ, ಕೇವಲ ಆಪಾದಿತರು, ಎಂಬುದು ಕಾನೂನಿನ ಪರಿಭಾಷೆ. ನಿಜಜೀವನದಲ್ಲಿ ಅವರು ಪಾತಕಿಗಳು. ಕೆಳಗಿನ ನ್ಯಾಯಾಲಯವು ಆಪಾದಿತರಲ್ಲಿ ೧೬ ಮಂದಿಗೆ ಮರಣ ದಂಡನೆ ಮತ್ತು ೧೦ ಮಂದಿಗೆ ಜೀವಾವಧಿ ಕಾರಾಗೃಹ ವಾಸವನ್ನು ವಿಧಿಸಿದ್ದಿತು. "ನಾನು ನ್ಯಾಯವನ್ನು ಹೇಳುತ್ತೇನೆ, ನ್ಯಾಯವಲ್ಲದೆ ಬೇರೇನನ್ನೂ ಹೇಳುವುದಿಲ್ಲ, ನಾನು ಹೇಳುವುದೆಲ್ಲಾ ನ್ಯಾಯ" ಎಂಬ ಧೋರಣೆಯುಳ್ಳ ನ್ಯಾಯಾಲಯವು ಹತ್ಯೆಗೊಳಗಾದವರೆಲ್ಲಾ ನಿಜಕ್ಕೂ ಹತ್ಯೆಗೊಳಗಾದರು, ನಿಜವಾಗಿಯೂ ಯಾರೋ ಅವರನ್ನೆಲ್ಲಾ ಕೊಲೆ ಮಾಡಿದರು, ಎಂಬುದನ್ನು ಒಪ್ಪಿಕೊಂಡಂತಿಲ್ಲ. ಅವರಲ್ಲದಿದ್ದರೆ ಬೇರೆ ಯಾರು ಕೊಲೆ ಮಾಡಿದ್ದು ಎಂಬ ಪ್ರಶ್ನೆಗೆ ನ್ಯಾಯಾಲಯ ಉತ್ತರ ಹೇಳಬೇಕಾಗಿಲ್ಲ. ಏಕೆಂದರೆ, ಅದು ನ್ಯಾಯಾಸ್ಥಾನವೇ ಹೊರತು ಪತ್ತೆಹಚ್ಚುವ ದಳವಲ್ಲ. ಪತ್ತೆಹಚ್ಚಿದ್ದ ಪೊಲೀಸರು ಮುಖದ ಮೇಲೆ ಬಟ್ಟೆ ಎಳೆದುಕೊಂಡು ನ್ಯಾಯಾಲಯದಿಂದ ನಿರ್ಗಮಿಸಬೇಕು, ಅಷ್ಟೆ. ಬಿಡುಗಡೆ ಹೊಂದಿದ "ನಿರಪರಾಧಿಗಳು" ಬಂದೂಕು ಹಿಡಿದು ಹೋಗಿ ಮತ್ತೆ ಲಕ್ಷ್ಮಣ್‌ಪುರದಲ್ಲಿ ಮಾನವ ಬೇಟೆ ನಡೆಸಲು ಸಿದ್ಧತೆ ಮಾಡಿಕೊಳ್ಳಬಹುದು. ಕೆಳಗಿನ ನ್ಯಾಯಾಲಯವು ತಾನು ಕೊಟ್ಟ ತೀರ್ಪಿಗೆ ಏನಾದರೊಂದು ಆಧಾರ ಹೊಂದಿದ್ದಿರಬೇಕಲ್ಲವೆ ? ಆ ನ್ಯಾಯಾಲಯವೇ ಉಚ್ಚ ನ್ಯಾಯಾಲಯದೆದುರು ಹಾಜರಾಗಿ ಪುರಾವೆಗಳನ್ನೆಲ್ಲಾ ಮಂಡಿಸುವಂತಿದ್ದರೆ ಕತೆ ಬೇರೆಯೇ ಇರುತ್ತಿತ್ತೇನೊ ! ನಮ್ಮ ನ್ಯಾಯಾಂಗ ಪದ್ಧತಿಯಲ್ಲಿ ಅಂತಹ ವ್ಯವಸ್ಥೆ ಇಲ್ಲ. ಮೊಕದ್ದಮೆಗಳನ್ನು ೧೬ ವರ್ಷ ನಡೆಸಿ ಕಂಗಾಲಾದ ಒಬ್ಬ ಮುದುಕ ಹೇಳಿದನಂತೆ : "ಇನ್ನು ಹೋರಾಡಲು ನಾನು ಅಶಕ್ತ. ೫೮ ಜನ ಕೊಲ್ಲಲ್ಪಟ್ಟಿದ್ದು ನಿಜ, ಆದರೆ ಕೊಲೆಗೆ ಯಾರೂ ಅಪರಾಧಿಗಳಲ್ಲ. ನ್ಯಾಯಾಲಯಗಳು ಅವರದು, ಸರ್ಕಾರ ಅವರದು, ಲಾಠಿಗಳು ಅವರವು. ನಮ್ಮ ಕೈಯೆಲ್ಲಾ ಬರಿದು. ಇದೇ ನಮಗೆ ದೊರೆಯುವ ನ್ಯಾಯ." ರಾಜಧಾನಿ ಪಾಟ್ನಾದಿಂದ ಕೇವಲ ೧೦೦ ಕಿಲೋಮೀಟರ್ ದೂರದ ದುರಂತ ಕತೆ ಇದು. ಆದರೆ ಅದನ್ನು ಕಂಡು ಬೆಚ್ಚಿಬೀಳಲು, ವಾದ ಮಾಡಲು, ಸಮಾಚಾರವನ್ನು ಸತತವಾಗಿ ಬಿತ್ತರಿಸಿ ಇದು ಘೋರ ಅನ್ಯಾಯ, ಎಂದು ಹೇಳಲು ನಮ್ಮ ಮಾಧ್ಯಮಗಳಿಗೆ ವ್ಯವಧಾನವಿಲ್ಲ. ಅವು ಮೂರು ಗಂಟೆ ಕಾಲ ಟೆಂಡುಲ್ಕರ್ ಘೋಷಿಸಿದ ವಿದಾಯವನ್ನು ಚರ್ಚಿಸುತ್ತವೆ, ರಘುರಾಜ್ ಪ್ರತಾಪ್ ಸಿಂಗ್ ಉತ್ತರ ಪ್ರದೇಶದಲ್ಲಿ ಮತ್ತೆ ಮಂತ್ರಿಯಾದುದನ್ನು ಐದು ಗಂಟೆ ಚರ್ಚಿಸುತ್ತವೆ, ಅಮೆರಿಕಾದ ಆರ್ಥಿಕತೆಯ ಬಗ್ಗೆ ಚಿದಂಬರಂ ಹೇಳಿದ್ದನ್ನು ಎರಡು ಗಂಟೆ ಚರ್ಚಿಸುತ್ತವೆ. ೫೮ ಜನರ ಕೊಲೆ ಮತ್ತು ೨೬ ಆಪಾದಿತರ ಖುಲಾಸೆ ಅವಕ್ಕೆ ಏನೂ ಅಲ್ಲ. ಇದು ಮಾಧ್ಯಮ ನೀತಿ, ಇದು ನ್ಯಾಯಾಂಗದ ನೀತಿ, ಇದು ಸರ್ಕಾರದ ನೀತಿ. ಎಲ್ಲಕ್ಕಿಂತಲೂ ಹೆಚ್ಚಾಗಿ ಇದು ನಮ್ಮ, ಅಂದರೆ ಭಾರತದ ಜನತೆಯ, ಅನೀತಿ. ರಘುರಾಜ್ ಪ್ರತಾಪ್ ಸಿಂಗ್ ಹೆಚ್ಚು (ಕು)ಪ್ರಸಿದ್ಧನಾಗಿರುವುದು 'ರಾಜಾ ಭಯ್ಯಾ' ಎಂದು. ಎಂಟೋ

ಹತ್ತೋ ಕೊಲೆಗಳ ಸಂಯೋಜಕನೆಂಬ ಆಪಾದನೆ ಅವನ ಮೇಲಿದೆ, 'ದೊಡ್ಡ ಗೂಂಡಾ' ಎಂದು ಮಾಧ್ಯಮಗಳು ಹಾಗೂ ಜನರು ಹೇಳುತ್ತಿರುವುದು ತಿಳಿದೇ ಇದೆ. ಒಬ್ಬ ಪೊಲೀಸ್ ಅಧಿಕಾರಿಯ ಹತ್ಯೆ ಸಂಬಂಧದಲ್ಲಿ ಶಾಮೀಲಾಗಿರುವ ಆಪಾದನೆ ಹೊತ್ತು ಸಚಿವ ಸ್ಥಾನ ಕಳೆದುಕೊಂಡಿದ್ದ ಈ "ನಿಷ್ಠಾವಂತ ರಾಜಕೀಯ ಕಾರ್ಯಕರ್ತ" ಮತ್ತೆ ಸಚಿವನಾಗುತ್ತಾನೆ. ಇದು ನಮ್ಮ ದೇಶ, ನಮ್ಮ ಸಂಸ್ಕೃತಿ. ನ್ಯಾಯಾಲಯವು ೨೬ ಜನರ ಖುಲಾಸೆ ಮಾಡಿತು, ಅದಕ್ಕೇನೋ ಕಾರಣ ಕೊಟ್ಟಿರಬೇಕು; ಆದರೆ ೫೮ ಜನರ ಹತ್ಯೆಗೆ ನಮ್ಮ ಪ್ರತಿಕ್ರಿಯೆ ಏನು, ಸಾಂತ್ವನ ಏನು ? "ಹತ್ಯೆಗೊಳಗಾದವರು ಹೇಗೂ ದಲಿತರು, ಹೋಗಲಿ ಬಿಡಿ" ಎಂದು ಕಂಬಳಿ ಹೊದ್ದು ಮಲಗೋಣವೆ ? ಅಥವಾ, ಇದೇನು ನಮ್ಮ ನ್ಯಾಯ–ನ್ಯಾಯಾಂಗ–ತೀರ್ಪು–ಕಾನೂನು–ಸಾಕ್ಷಿ ಹೇಳುವ ಜನ, ಎಂದು ಹೌಹಾರಬೇಕೆ ? ಕೆಲವು ವರ್ಷಗಳ ಹಿಂದೆ ಕಂಚಿ ಕಾಮಕೋಟಿ ಪೀಠದ "ಜಗದ್ಗುರು" ಜಯೇಂದ್ರ ಸ್ವಾಮಿ, ಶಂಕರರಾಮನ್ ಎಂಬುವರ ಕೊಲೆಯಲ್ಲಿ ಆಪಾದನೆ ಹೊತ್ತಿದ್ದುದು ಮರೆತಿಲ್ಲ ತಾನೆ ? ಆಪಾದಿತರ ವಿರುದ್ಧ ಮೊದಲು ೧೮ ಮಂದಿ ಸಾಕ್ಷಿ ಹೇಳಿದ್ದರು. ಆಮೇಲೆ ಅಷ್ಟೂ ಮಂದಿ ತಮ್ಮ ಸಾಕ್ಷಿಯನ್ನು ಸಂಪೂರ್ಣವಾಗಿ ಬದಲಿಸಿದರು. 'ಜಯೇಂದ್ರ ಸ್ವಾಮಿ ನಿರ್ದೋಷಿ' ಎಂದು ನ್ಯಾಯಾಲಯ ಹೇಳಿತು. ಈಗ ಪಾಟ್ನಾದಲ್ಲಿ ನಡೆದದ್ದೂ ಅದೇ. "ಎಲಾ, ಈ ಸಾಕ್ಷಿಗಳೆಲ್ಲಾ ಏಕೆ ತಿಪ್ಪರಲಾಗ ಹಾಕುತ್ತಿದ್ದಾರೆ" ಎಂಬ ಪ್ರಶ್ನೆಯು ನ್ಯಾಯಾಲಯದ ಕುತೂಹಲ ಕೆರಳಿಸುವುದಿಲ್ಲವೇಕೆ ? ಅವರಿಗೆ ಆಮಿಷಗಳನ್ನು ಒಡ್ಡುತ್ತಾರೆ, ಬೆದರಿಕೆ ಹಾಕುತ್ತಾರೆ, ಎಂದೆಲ್ಲಾ ಪ್ರಪಂಚಕ್ಕೇ ತಿಳಿದಿದೆ; ಇನ್ನು ನ್ಯಾಯಾಲಯಕ್ಕೆ ತಿಳಿಯದೆ ? ಆದರೂ ನಾಟಕ ಮುಂದುವರಿಯುತ್ತದೆ, ಸಂವಿಧಾನವನ್ನು ಹೊಗಳುತ್ತೇವೆ, ನ್ಯಾಯಾಲಯವು ನ್ಯಾಯವನ್ನು ವಿತರಿಸುತ್ತದೆ, ಕೊಲ್ಲಲ್ಪಟ್ಟವರು ಇಲ್ಲವಾಗುತ್ತಾರೆ. "ಗಾಡಿ ಮುಂದಕ್ಕೆ ಹೋಗುತ್ತಿದೆ, ಆದ್ದರಿಂದ ಅದು ಚೆನ್ನಾಗಿರಲೇಬೇಕು" ಎಂಬರ್ಥ ಬರುವ ಹಿಂದಿ ವಾಕ್ಯವೊಂದಿದೆ : ಚಲ್ತೀ ಕಾ ನಾಮ್ ಗಾಡೀ. ಹೀಗೇ ಚಲಿಸುತ್ತಿದ್ದರೆ ಇನ್ನಷ್ಟು ದಲಿತರ ಕೊಲೆಯಾಗುತ್ತದೆ, ಭೂಮಾಲಿಕರ ರಣವೀರ ಸೇನೆಯು ರಣದುಂದುಭಿಯನ್ನು ಬಾರಿಸುತ್ತಿರುತ್ತದೆ. ಇದಕ್ಕೊಂದು ಪರ್ಯಾಯ ಹುಡುಕಬೇಕಲ್ಲವೆ ? ದಲಿತರೂ ನಮ್ಮ ದೇಶದ ಪ್ರಜೆಗಳು, ಅವರೂ ಮನುಷ್ಯರು, ಅವರಿಗೂ ಬದುಕಿರುವ ಹಕ್ಕಿದೆ ಎಂದು ನಾವು ತಿಳಿಯುವುದು ಯಾವಾಗ, ರಣವೀರ ಸೇನೆಯನ್ನು ಜೈಲಿಗೆ ತಳ್ಳುವುದು ಯಾವಾಗ ? ಅಲನ್ ಪೇಟನ್ ದಕ್ಷಿಣ ಆಫ್ರಿಕದ ಬಗ್ಗೆ ಅರವತ್ತು ವರ್ಷಗಳ ಹಿಂದೆ ಹೇಳಿದ್ದ : 'ಓ ನನ್ನ ದೇಶವೆ, ನೀನು ಅಳುವುದನ್ನು ಕಲಿ.' ನಾವಿಂದು ಅದನ್ನೇ ಮಾಡಬೇಕಾಗಿದೆ.

* * *

'ಫೈಲಿನ್' ಚಂಡಮಾರುತ ಒಡಿಶಾ ಮತ್ತು ಆಂಧ್ರಪ್ರದೇಶದ ತೀರದಲ್ಲಿ ಬಡಿದು ಸಾಕಷ್ಟು ಅನಾಹುತವುಂಟುಮಾಡಿತು. ನಿರಂತರವಾಗಿ ಹೊಯ್ದಮಳೆ, ನೂರಾರು ಕಿಲೋಮೀಟರ್ ವೇಗದಲ್ಲಿ ಬೀಸಿದ ಗಾಳಿಯಿಂದ ಜನಜೀವನ ಅಸ್ತವ್ಯಸ್ತ, ಪ್ರಾಣಹಾನಿ, ಅಪಾರ ಪ್ರಮಾಣದಲ್ಲಿ ಆಸ್ತಿಪಾಸ್ತಿ ನಷ್ಟ. ಇದು ಪ್ರಕೃತಿ ವಿಕೋಪದಿಂದ ಸಂಭವಿಸಿದ ದುರ್ಘಟನೆ. ಚಂಡಮಾರುತ, ಪ್ರವಾಹ, ಉರಿಬಿಸಿಲಿನ ಬೇಗೆ ಇವೆಲ್ಲ ಈ ಪ್ರದೇಶದಲ್ಲಿ ಹಾಗೂ ಭಾರತದ ಇತರ ಕಡೆಗಳಲ್ಲಿ ಹೊಸದೇನಲ್ಲ. ಹಾಗೆಯೇ ಮಾನವಕೃತ, ರಾಜಕೀಯ ಪ್ರೇರಿತ ಅನಾಹುತಗಳಿಗೇನೂ ಕಮ್ಮಿ ಇಲ್ಲ ನಮ್ಮ ದೇಶದಲ್ಲಿ. 'ಜನಜೀವನ ಅಸ್ತವ್ಯಸ್ತ' ಎನ್ನುವ ಮಾತು ಪತ್ರಿಕೆಗಳಲ್ಲಿ, ಮಾಧ್ಯಮಗಳಲ್ಲಿ ಯಾವತ್ತೂ ಇದ್ದದ್ದೆ.

'ಫೈಲಿನ್' ಚಂಡಮಾರುತಕ್ಕಿಂತ ಆಂಧ್ರಪ್ರದೇಶದಲ್ಲಿ ತೆಲಂಗಾಣ ಹಾವಳಿಯಿಂದಾಗಿರುವ, ಆಗುತ್ತಿರುವ ಅನಾಹುತ ವಿಪರೀತದ್ದು. ತೆಲಂಗಾಣ ಪ್ರತ್ಯೇಕ ರಾಜ್ಯ ನಿರ್ಮಾಣಕ್ಕಾಗಿ ಹೋರಾಟ, ಹಾರಾಟ, ಬಂದ್‌ಗಳು ವರ್ಷಗಟ್ಟಲೆ ನಡೆದು ಉಂಟುಮಾಡಿದ ನಷ್ಟ ಅಂದಾಜಿಗೆ ಸಿಗುವುದಿಲ್ಲ. ಸಾರ್ವಜನಿಕ, ಆಸ್ತಿಪಾಸ್ತಿಗಳ ಧ್ವಂಸ ಯಾವುದೇ ಕಾರಣಕ್ಕಾದರೂ ನಮ್ಮ ದೇಶದಲ್ಲಿ ಶತಸಿದ್ಧ. ಟೈರ್‌ಗಳಿಗೆ ನಡುರಸ್ತೆಯಲ್ಲಿ ಬೆಂಕಿ, ಕಂಡಲ್ಲಿ ನಿಂತ ಸಾರಿಗೆ ವಾಹನದ ಭಸ್ಮ, ಗಾಜುಗಳು ಪುಡಿಗುಟ್ಟುವುದು, ಪೊಲೀಸರ ಲಾಠಿ ಪ್ರಹಾರ, ಗೋಲಿಬಾರು ಇವೆಲ್ಲ ನಡೆಯದಿದ್ದರೆ ಅದೆಂಥ ಹೋರಾಟ ? ಜನಜೀವನ ಅಸ್ತವ್ಯಸ್ತ. ಕೇಳುವವರು ತಾನೆ ಯಾರು ? ತರಾತುರಿಯಲ್ಲಿ, ಮುಂಬರುವ ಲೋಕಸಭಾ ಚುನಾವಣೆಯನ್ನು ಗಮನದಲ್ಲಿಟ್ಟುಕೊಂಡು ಕಾಂಗ್ರೆಸ್ ಹೈಕಮಾಂಡ್ ಅಳೆದೂ ಸುರಿದೂ ತೆಲಂಗಾಣ ಪ್ರತ್ಯೇಕತೆಗೆ ಅಸ್ತು ಎಂದಿದ್ದಾಯಿತು. ಈಗ ಅದನ್ನು ವಿರೋಧಿಸಿ, 'ವಿಶಾಲಾಂಧ್ರ' ಉಳಿಸಿಕೊಳ್ಳಲು ಸೀಮಾಂಧ್ರದ ಜನರಿಂದ ಆಂದೋಳನ. ಮೊನ್ನೆ ಮನಮೋಹನ್ ಸಿಂಗ್ ನೇತೃತ್ವದ ಯುಪಿಎ ಸರಕಾರ ಕಾಂಗ್ರೆಸ್ಸಿನ ತೀರ್ಮಾನಕ್ಕೆ ಅಂಗೀಕಾರದ ಮುದ್ರೆ ಒತ್ತಿದ ಮೇಲೆ ಇಡೀ ಸೀಮಾಂಧ್ರ ಹೊತ್ತಿ ಉರಿಯತೊಡಗಿದೆ. ಈ ಕಿತ್ತಾಟದಲ್ಲಿ ಬಡಜನರ ಜೀವನ ದುಸ್ತರ. ಇದು ರಾಜಕಾರಣದ, ಸಂದರ್ಭ ಸಾಧಕತನದ ಸುಂಟರ ಗಾಳಿ. ಲೋಕಸಭೆಯ ಕೆಲ ಸ್ಥಾನಗಳ ಗಳಿಕೆ ಲೆಕ್ಕಾಚಾರದಲ್ಲಿ ಕಾಂಗ್ರೆಸ್ ಪಕ್ಷ ಸೃಷ್ಟಿಸಿರುವ ಅವಾಂತರ. ಈಗ ಸೀಮಾಂಧ್ರ ಜಿಲ್ಲೆಗಳಲ್ಲಿ ನಡೆಯುತ್ತಿರುವ ವಿದ್ಯಮಾನಗಳು ಸ್ವಯಂಪ್ರೇರಿತವೋ, ರಾಜಕೀಯ ಪ್ರೇರಿತವೋ ಎನ್ನುವ ಜಿಜ್ಞಾಸೆ ಬೇಕಿಲ್ಲ. ಇದುವರೆಗೆ ತೆಲಂಗಾಣ ಪ್ರತ್ಯೇಕತೆಗೆ ಮೌನ ಸಮ್ಮತಿ ನೀಡಿದ್ದ ರಾಜಕೀಯ ನಾಯಕರೆಲ್ಲ ಎಚ್ಚೆತ್ತುಕೊಂಡಿದ್ದಾರೆ. ಆದಷ್ಟು ರಾಜಕೀಯ ಲಾಭ ಪಡೆದುಕೊಳ್ಳಲು ಪೈಪೋಟಿ ನಡೆಸಿದ್ದಾರೆ. ಕಾಂಗ್ರೆಸ್ ಹೈಕಮಾಂಡ್‌ನ ಮುಂದೆ ಕೈಜೋಡಿಸಿ, ಮಂಡಿಯೂರಿದ್ದ ಕಾಂಗ್ರೆಸ್ ನಾಯಕರು ಈಗ ಒಬ್ಬೊಬ್ಬರಾಗಿ ಹಿಂದೆ ಸರಿಯುತ್ತಿದ್ದಾರೆ. ಆಂಧ್ರ ಕಾಂಗ್ರೆಸ್ಸಿನ ಕೆಲ ಕೇಂದ್ರ ಸಚಿವರುಗಳು ರಾಜೀನಾಮೆ ನೀಡಿದ್ದಾರೆ. ಆಂಧ್ರ ಕಾಂಗ್ರೆಸ್ಸಿನಲ್ಲಿ ಬಿರುಗಾಳಿ ಎದ್ದಿದೆ. ಇದುವರೆಗೆ ಇವರೆಲ್ಲ ಯಾಕೆ ಮೌನವಾಗಿದ್ದರೋ ? ಇನ್ನು ತೆಲುಗುದೇಶಂ ಪಕ್ಷದ ಚಂದ್ರಬಾಬು ನಾಯಿಡು, ವೈ. ಎಸ್. ಆರ್. ಕಾಂಗ್ರೆಸ್ಸಿನ ಜಗನ್ ರೆಡ್ಡಿ, ಸಿನಿಮಾ ನಟ, ರಾಜಕೀಯ ಪಟು ಚಿರಂಜೀವಿ, ವಗೈರ, ವಗೈರ ಎಲ್ಲ ಸೀಮಾಂಧ್ರ ತಳಮಳದ ಲಾಭ ಪಡೆದುಕೊಳ್ಳಲು ಮುಂದಾಗಿದ್ದಾರೆ. ಉಪವಾಸ ಕೂತು ಈಗ

ವನವಾಸ ಅನುಭವಿಸುತ್ತಿದ್ದಾರೆ. ಒಟ್ಟಿನಲ್ಲಿ ಆಂಧ್ರಪ್ರದೇಶದ ಹಾಗೂ ಕಾಂಗ್ರೆಸ್ಸಿನ ಫಜೀತಿ ಇತ್ತ ದರಿ ಅತ್ತ ಪುಲಿ ಎನ್ನುವಂತಾಗಿದೆ. ಇದರಿಂದ ಪಾರಾಗುವುದಕ್ಕೆ ಕಾಂಗ್ರೆಸ್ ಹೈಕ್ ಇನ್ನೇನು ಸರ್ಕಸ್ ಮಾಡುವುದೋ ನೋಡಬೇಕು. ಈ ಹತ್ತಿಕೊಂಡಿರುವ ಬೆಂಕಿ ಬೇಗ ಆರುವುದಿಲ್ಲ ಎನ್ನುವುದಂತೂ ಗ್ಯಾರಂಟಿ.

✶ ✶ ✶

ನಮ್ಮ ದೇಶದಲ್ಲಿ ನಡೆದುಕೊಂಡು ಬಂದಿರುವ ಕೆಲವು ಕೆಟ್ಟ ಧಾರ್ಮಿಕ ಆಚರಣೆಗಳು, ಆಡಂಬರಗಳು, ಅಂಧಶ್ರದ್ಧೆ, ಮೂಢನಂಬಿಕೆ ಇತ್ಯಾದಿ, ಇತ್ಯಾದಿಗಳೆಲ್ಲ ಇನ್ನೆಷ್ಟು ಕಾಲ ಉಳಿದುಕೊಂಡಿರುವುವೋ "ಆ ಭಗವಂತನೇ ಬಲ್ಲ"! ಅವು ಹೋಗಲು ಇನ್ನೆಷ್ಟು ಶತಮಾನಗಳು ಬೇಕೊ! ಇಪ್ಪತ್ತೊಂದನೇ ಶತಮಾನದ ಎರಡನೇ ದಶಕದಲ್ಲಿ ಅಡಿಯಿರಿಸಿದ್ದರೂ ಮಧ್ಯ ಯುಗದ ಸಂಪ್ರದಾಯಗಳು ಅಳಿಯುವ ಲಕ್ಷಣ ಕಾಣುತ್ತಿಲ್ಲ. ಸ್ವಾತಂತ್ರ್ಯಾನಂತರ ಅನುಮೋದನೆಯಾದ ಸಂವಿಧಾನವು ಅಸ್ಪಷ್ಟವಾಗಿ ಮೂಢನಂಬಿಕೆಯನ್ನು ಸ್ಪಷ್ಟವಾಗಿ ತಿರಸ್ಕರಿಸಿ, ವೈಜ್ಞಾನಿಕ ಮನೋಧರ್ಮದ ಬೆಳವಣಿಗೆಗೆ ಒತ್ತು ನೀಡಿದ್ದಾಗ್ಯೂ ಅದು ಕಾಗದದ ಮೇಲೆ ಉಳಿದಿರುವುದು ಬೇಸರದ ಸಂಗತಿ. ರಾಜಕೀಯ ಇಚ್ಛಾಶಕ್ತಿಯ ಕೊರತೆಯೇ ಇಂಥ ಶೋಚನೀಯ ಸ್ಥಿತಿಗೆ ಕಾರಣ. ಎಲ್ಲದರಲ್ಲೂ ಲಾಭ ಪಡೆಯುವ, ವೋಟ್ ಬ್ಯಾಂಕ್ ಸೃಷ್ಟಿಸಿಕೊಳ್ಳುವ ಎಲ್ಲ ಬಣ್ಣಗಳ ರಾಜಕಾರಣಿಗಳೂ ಮೂಢನಂಬಿಕೆ ಬೆಳೆಸುವುದರಲ್ಲಿ ನಾ ಮುಂದು, ತಾ ಮುಂದು ಎಂದು ಹಲ್ಲುಕಿರಿಯುವವರೆ. ಸೆಕ್ಯುಲರ್ (ಧರ್ಮ ನಿರಪೇಕ್ಷ) ಎಂಬುದಾಗಿ ಹೇಳಿಕೊಂಡು ತಮ್ಮ ಕಚೇರಿಗಳಲ್ಲಿ ಹೋಮ ಹವನ ಮಾಡುವ, ಕಾವಿ ಧರಿಸಿರುವ ಸ್ವಾಮಿಗಳ ಪಾದಕ್ಕೆ ಬೀಳುವ, ರಾಹುಕಾಲ, ಗುಳಿಕಕಾಲ ನೋಡಿ ಲಗ್ನ ನಿಷ್ಕರ್ಷೆ ಮಾಡಿ ಪ್ರಮಾಣ ವಚನ ಸ್ವೀಕರಿಸುವ ಸಚಿವರುಗಳನ್ನು ನೋಡುತ್ತ ಬಂದಿದ್ದೇವಲ್ಲ ನಾವು. ಬೆಳಿಗ್ಗೆ ಎದ್ದು ಕಾಫಿ ಸೇವನೆ ಮಾಡಿ ಜ್ಯೋತಿಷಿಯ ಬೆನ್ನುಹತ್ತಿ ಹೋಗುವುದರಲ್ಲಿ ನಿಸ್ಸೀಮರಾಗಿರುವ ರಾಜಕಾರಣಿಗಳಿಂದ, ಅಧಿಕಾರಿಗಳಿಂದ ವೈಜ್ಞಾನಿಕ ಮನೋಧರ್ಮ ಅಪೇಕ್ಷಿಸುವುದು ನಮ್ಮ ಮೂಢನಂಬಿಕೆ ಅಷ್ಟೆ. ತಿರುಪತಿಗೆ ಹೋಗಿ ತಿಮ್ಮಪ್ಪನ ದರ್ಶನ ಮಾಡಿ ಕ್ಷಿಪಣಿ ಉಡಾವಣೆಗೆ ಸಿದ್ಧವಾಗುವಂಥ ವಿಜ್ಞಾನಿಗಳಿರುವಾಗ ಬೇರೆಯವರ ಪಾಡೇನು ಪಾಪ!

'ರಾಮಜನ್ಮ ಭೂಮಿ' ವಿವಾದದ ಮೊಕದ್ದಮೆಯಲ್ಲಿ ತೀರ್ಪು ನೀಡಿದ ಸರ್ವೋಚ್ಚ ನ್ಯಾಯಾಲಯ ಕೂಡ ನಂಬಿಕೆಗೆ ಆದ್ಯತೆ ನೀಡಿದೆ ಅಂದಮೇಲೆ ಸಂವಿಧಾನದ ಅಭಿಲಾಷೆ ಯಾವ ಮೂಲೆಗೆ? ಇಷ್ಟೆಲ್ಲ ಯಾಕೆ ಪೀಠಿಕೆ ಅಂತ ನಿಮಗನ್ನಿಸಬಹುದು. ಇವತ್ತಿನ ಪರಿಸ್ಥಿತಿ ಹಾಗಿದೆ. ಮಾಧ್ಯಮಗಳ ಹಾವಳಿಯಿಂದ ನಾವು ಈ ಮೂಢನಂಬಿಕೆಯ ಪ್ರಪಾತಕ್ಕೆ ಜಾರ ತೊಡಗಿದ್ದೇವೆ. ಅದರಿಂದ ಮೇಲೇಳಲು ತವಕ. ಅದರ ವಿರುದ್ಧ ಹೋರಾಡಲು ಮುಂದೆ ಬರಬೇಕು. ಮೊನ್ನೆ ಬಲಿಯಾದ ಮಹಾರಾಷ್ಟ್ರದ ವಿಚಾರವಾದಿ ದಾಭೋಲ್ಕರರ ಥರ ಇನ್ನೆಷ್ಟು ಜನರ ಆಹುತಿ ಆಗಬೇಕೊ! ನಮ್ಮ ರಾಜ್ಯದಲ್ಲಿ. ಚಿಕ್ಕಮಗಳೂರಿನ ದತ್ತಪೀಠದ ಪ್ರಕರಣದಲ್ಲಿ ಸರಕಾರ ಎಡವಿದ್ದನ್ನು ನಾವು ನೋಡಿದ್ದೇವೆ. ಹಾಗೆಯೇ ಸುಬ್ರಹ್ಮಣ್ಯ ದೇವಾಲಯದಲ್ಲಿ ಎಂಜಲೆಲೆಯ ಮೇಲೆ ಉರುಳುವ ಅಸಹ್ಯಕರ ಪದ್ಧತಿ ವಿಚಾರದಲ್ಲಿ ಸರಕಾರ ಹಿಂದೇಟು ಹಾಕುತ್ತಿರುವುದನ್ನು ಕಂಡಿದ್ದೇವೆ. ಜನರ ನಂಬಿಕೆಯ ನೆಪವೊಡ್ಡಿ ಜಾರಿಕೊಳ್ಳುವ ರೂಢಿ ನಮ್ಮವರಿಗೆ ಒಗ್ಗಿ ಹೋಗಿದೆ. ಸದ್ಯ, ಮಠಾಧೀಶರಿಗೆ ಸರಕಾರಿ ಬೊಕ್ಕಸದಿಂದ ಕೋಟಿಗಟ್ಟಲೆ ಹಣದ ಹೊಳೆ ಹರಿಯುವ ಕೆಟ್ಟ ಚಾಳಿ ಹೋಯಿತಲ್ಲ. ಇಚ್ಛಾಶಕ್ತಿ ಇದ್ದರೆ ಏನು ಬೇಕಾದರೂ ಮಾಡಬಹುದು.

ಅರಿವಿಲ್ಲದಿರುವುದೇ ತಾಪತ್ರಯ. ಸ್ವಾಮಿಗಳ 'ಅಡ್ಡಪಲ್ಲಕ್ಕಿ' ಉತ್ಸವಕ್ಕೆ ಸರಕಾರ ಒತ್ತಡಕ್ಕೆ ಮಣಿದು ಪರವಾನಗಿ ನೀಡಿದೆ. ಕೆಲ ದಿನಗಳಿಂದ ಇದರ ಬಗ್ಗೆ ದೊಡ್ಡ ವಿವಾದ ಸೃಷ್ಟಿಯಾಗಿತ್ತು. ಹಲವು ಮಠಾಧೀಶರು ಈ ಅನಿಷ್ಟ ಪದ್ಧತಿಯನ್ನು ವಿರೋಧಿಸಿದರು. ಪೇಜಾವರ ಶ್ರೀಯವರು ಮಾಮೂಲಿನಂತೆ ತಮ್ಮ ಬ್ರಾಹ್ಮಣ್ಯ ಪ್ರದರ್ಶಿಸಿ ನುಣುಚಿಕೊಂಡದ್ದು ಬೇರೆ ವಿಷಯ. 'ರ್‍ಯಾಷನಲಿಸ್ಟ್', ವಿಚಾರವಾದಿ ಎಂದು ಕರೆದುಕೊಳ್ಳುವ ಸಿದ್ದರಾಮಯ್ಯ ನವರ ಸರಕಾರ 'ಅಡ್ಡಪಲ್ಲಕ್ಕಿ' ಉತ್ಸವಕ್ಕೆ ತೆರೆ ಎಳೆಯುವ ಬದಲು, ಆಚರಣೆಗೆ ಅಸ್ತು ಎಂದು ಹಸಿರು ನಿಶಾನೆ ತೋರಿಸಿರುವುದು ನಿಜವಾಗಿಯೂ ಖಂಡನೀಯ. ವಿಚಾರಶೀಲರು ಖಂಡಿತ ಇದನ್ನು ಸಮ್ಮತಿಸುವುದಿಲ್ಲ. ಇಂಥ ಅರೆಮನಸ್ಸಿನ ಕ್ರಮಗಳೇ ಮೂಢನಂಬಿಕೆಗೆ ಪೋಷಣೆ! ದಸರಾ ಪೂಜೆ ಪುನಸ್ಕಾರ, ಶೃಂಗೇರಿ ಮಠದ ದರ್ಬಾರು ನೋಡುತ್ತಿದ್ದೇವಲ್ಲ.

✶ ✶ ✶

ದಿನಕಳೆದ ಹಾಗೆ ಚುನಾವಣೆಗಳು ಸಮೀಪಿಸುತ್ತಿವೆ. ಮನಮೋಹನ ಸಿಂಗ್ ನೇತೃತ್ವದ ಯುಪಿಎ–೨ ಸರಕಾರದ ಕೊನೆಗಾಲ ಸಮೀಪಿಸಿದೆ. ಇನ್ನು ಆರು ತಿಂಗಳು ಅಷ್ಟೆ ಚುನಾವಣೆಗೆ. ಈಗ ಸದ್ಯಕ್ಕೆ ಐದು ರಾಜ್ಯಗಳಲ್ಲಿನ ಶಾಸನ ಸಭೆಗಳಿಗೆ ಚುನಾವಣೆ ಘೋಷಣೆಯಾಗಿದೆ. ಡಿಸೆಂಬರ್ ಅಂತ್ಯದ ವೇಳೆಗೆ ಅವುಗಳ ಹಣೆಬರಹ ಇತ್ಯರ್ಥ ವಾಗಲಿದೆ. ಇದು ಎಲ್ಲರಿಗೂ ಗೊತ್ತಿರುವ ವಿಷಯ. ಕರ್ನಾಟಕದಲ್ಲಿ ಕಾಂಗ್ರೆಸ್ ಗರಿಗೆದರಿಕೊಂಡು ಲೋಕಸಭಾ ಚುನಾವಣೆಗೆ ಸಿದ್ಧತೆ ಪ್ರಾರಂಭಿಸಿದೆ. ಭಿನ್ನಮತದ ಹೊಗೆ ಎದ್ದಿದ್ದಾಗ್ಯೂ ಅದನ್ನು ಕಡೆಗಣಿಸಿ, ಅದುಮಿ ಐಕ್ಯತೆಯ ಪ್ರದರ್ಶನ ಮಾಡುತ್ತಿದೆ. ಪ್ರತಿಪಕ್ಷಗಳು ಶಾಸನಸಭಾ ಚುನಾವಣೆಗಳಿಂದ ಇನ್ನೂ ಚೇತರಿಸಿಕೊಂಡಿಲ್ಲ. ವಿರೋಧಪಕ್ಷದ ಸ್ಥಾನದಲ್ಲಿರುವ ದೇವೇಗೌಡರ ಜನತಾದಳ (ಸೆಕ್ಯುಲರ್) ಹೈಕೋರ್ಟ್ ತೀರ್ಪಿನಿಂದ ಕಚೇರಿಯನ್ನೇ ಕಳೆದುಕೊಳ್ಳುವ ಸ್ಥಿತಿಯಲ್ಲಿದೆ. ಮೊನ್ನೆ ನಡೆದ ಉಪಚುನಾವಣೆಗಳ ಸೋಲು ಅವರನ್ನು ಕಂಗೆಡಿಸಿದೆ. ಭಾಜಪ ಅಧಿಕಾರ ಕಳೆದುಕೊಂಡ ಮೇಲೆ ಅಸಹಾಯಕ ಸ್ಥಿತಿಯಲ್ಲಿದೆ. ಹಳೆಯ ನಾಯಕ ಯಡಿಯೂರಪ್ಪನವರನ್ನು ತಮ್ಮ ಕಡೆಗೆ ಸೆಳೆದುಕೊಳ್ಳಲು ಪ್ರಯತ್ನ ನಡೆದಿದೆ. ಈ ಪ್ರಯತ್ನ ಸಫಲವಾಗುವ ಸೂಚನೆಗಳೂ ಇವೆ. ಈಗಾಗಲೇ ಕೆಲ ಕೆಜೆಪಿ ಸದಸ್ಯರು ಭಾಜಪ ಸೇರಿಕೊಂಡದ್ದಾಗಿದೆ. ಮುಂಬರುವ ದಿನಗಳಲ್ಲಿ ರಾಜಕೀಯ ಪಕ್ಷಗಳಲ್ಲಿ ಏನೇನು ಬೆಳವಣಿಗೆಗಳಾಗುವುವೋ ನೋಡಬೇಕು. ರಾಜ್ಯದಲ್ಲಿ ಪ್ರಗತಿಪರಶಕ್ತಿಗಳು ಮುಖ್ಯವಾಗಿ ಎಡಪಕ್ಷಗಳು ದುರ್ಬಲವಾಗಿರುವುದರಿಂದ ಜನರಿಗೆ ಆಯ್ಕೆ ಇಲ್ಲದಂತಾಗಿದೆ. ಆದರೂ ತೃತೀಯರಂಗದ ಸ್ಥಾಪನೆಗೆ ಚಾಲನೆ ದೊರೆತಿರುವುದು ಗಮನಾರ್ಹ. ಈಚೆಗೆ ಕಮ್ಯುನಿಸ್ಟ್ ಪಕ್ಷಗಳು ಕಲೆತು ಈ ವಿಷಯದಲ್ಲಿ ಸಮಾಲೋಚನೆ ನಡೆಸುತ್ತಿರುವುದು, ಸಂಯುಕ್ತವಾಗಿ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಸ್ವಾಗತಾರ್ಹ. ಈ ಮಧ್ಯೆ ಮಾಜಿ ಪೊಲೀಸ್ ಮಹಾಧಿಕಾರಿಯೊಬ್ಬರು ರಾಜಕೀಯ ಅಖಾಡಕ್ಕೆ ಧುಮುಕಿ ಕಕ್ಕಾಬಿಕ್ಕಿಯಾಗಿದ್ದಾರೆ. ಮುಲಾಯಮ್ ಸಿಂಗ್ ಜೊತೆ ಕೈ ಜೋಡಿಸಿ ಸೈಕಲ್ ಸವಾರಿಗೆ ಹೊರಟು ಅತ್ತಲೂ ಇಲ್ಲ ಇತ್ತಲೂ ಇಲ್ಲ ಎಂದು ದಾರಿಕಾಣದಾಗಿದ್ದಾರೆ. ಭಾಜಪ, ಕಾಂಗ್ರೆಸ್ ಪಕ್ಷಗಳ ಕದ ತಟ್ಟಿ ಮುಖಭಂಗ ಮಾಡಿಕೊಂಡ ಈತ ಈಗ ಹೊಸ ಪ್ರಾದೇಶಿಕ ಪಕ್ಷ ಕಟ್ಟಲು ಹೊರಟಿದ್ದಾರೆ. ಅಂತೂ ಈ ಸಲ ಪಾರ್ಲಿಮೆಂಟ್ ಚುನಾವಣೆಗಳು ಭಾರಿ ಕುತೂಹಲಕರವಾಗಿರುವುದಂತೂ ಖಚಿತ.

✶ ✶ ✶

ಬೆಳ್ತಂಗಡಿಯ ಸೌಜನ್ಯ ಕೊಲೆ ಪ್ರಕರಣದ ತನಿಖೆಯನ್ನು ಒಂದು ವರ್ಷವಾದರೂ ಮುಗಿಸದ ತನಿಖಾಧಿಕಾರಿಗಳು ತನಿಖಾವರದಿ ತಯಾರಿಗೆ ಮುನ್ನವೇ ಧರ್ಮಸ್ಥಳದ ವೀರೇಂದ್ರ ಹೆಗ್ಗಡೆ ಕುಟುಂಬದವರು ನಿರಪರಾಧಿಗಳು ಎಂದು ಸರ್ಟಿಫಿಕೇಟು ಕೊಟ್ಟಿದ್ದಾರೆ. ಮಗಳನ್ನು ಕಳೆದುಕೊಂಡ ಸೌಜನ್ಯಳ ಪಾಲಕರು ಹಾಗೂ ಪ್ರಗತಿಪರ ಸಂಘಟನೆಗಳು ಸಿ.ಬಿ.ಐ. ತನಿಖೆಗೆ ಒತ್ತಾಯಿಸಿವೆ.

ಸಿ.ಬಿ.ಐ. ತನಿಖೆಗೆ ಒತ್ತಡ ಹೆಚ್ಚಾದ ತಕ್ಷಣವೇ ಕಾಂಗ್ರೆಸ್, ಬಿಜೆಪಿ, ಜೆಡಿಎಸ್ ಪಕ್ಷಗಳ ನಾಯಕರು ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ ಅವರ ರಕ್ಷಣೆಗೆ ಟೊಂಕಕಟ್ಟಿ ನಿಂತಿದ್ದಾರೆ. ಹೆಗ್ಗಡೆ ಅವರು ರಾಜ್ಯ ಸರಕಾರದ ಮೇಲೆ ಪ್ರಭಾವ ಬೀರುವ ಶಕ್ತಿ ಉಳ್ಳವರು, ಕಾರಣ ರಾಜ್ಯ ಸರಕಾರದಡಿಯಲ್ಲಿನ ತನಿಖಾ ಸಂಸ್ಥೆ ನಿಷ್ಪಕ್ಷಪಾತವಾಗಿ ತನಿಖೆ ಮಾಡಲಿಕ್ಕಿಲ್ಲ ಎಂಬ ಅನುಮಾನ ಸಹಜವಾದದ್ದೇ. ಇಂಥ ಸಂದರ್ಭದಲ್ಲಿ ಸಿ.ಬಿ.ಐ. ತನಿಖೆಗೆ ಒತ್ತಾಯ ಮಾಡಿದರೆ ತಪ್ಪೇನು. ಇದು ಧರ್ಮಸ್ಥಳ ಕ್ಷೇತ್ರದ ಬಗ್ಗೆಯಾಗಲೀ, ಮಂಜುನಾಥ ಸ್ವಾಮಿಯ ಬಗ್ಗೆಯಾಗಲೀ ಅನುಮಾನ ಅಥವಾ ಅವಮಾನವಲ್ಲ. ಸೌಜನ್ಯ ಎಂಬ ವಿದ್ಯಾರ್ಥಿನಿಯ ಕೊಲೆಯ ತನಿಖೆ ನಿಖರವಾಗಿ ಆಗಲಿ ಎಂಬ ಆಶಯ ಮಾತ್ರ. ಅಷ್ಟಕ್ಕೇ ಧರ್ಮಾಧಿಕಾರಿಯ ಬೆಂಬಲಕ್ಕೆ ನಿಂತು ಬೀದಿಗಿಳಿದ ಆಡಳಿತ, ವಿರೋಧ ಪಕ್ಷಗಳ ನಾಯಕರು, ಕೆಲವು ಸಾಹಿತಿ, ಚಿತ್ರನಟರು ಚಳುವಳಿಗಾರರ ಮೇಲೆ 'ಕಿಡಿ' ಕಾರಿದ್ದಾರೆ. ಸಿ.ಬಿ.ಐ. ತನಿಖೆ ಧರ್ಮಸ್ಥಳದ ಮಂಜುನಾಥನಿಗೇ ಅಪಚಾರ ಎಂಬಂತೆ ಬಿಂಬಿಸುತ್ತಿದ್ದಾರೆ. ನಿಜವಾದ ಅರ್ಥದಲ್ಲಿ ಧರ್ಮಸ್ಥಳ ಕ್ಷೇತ್ರವನ್ನು, ಮಂಜುನಾಥ ದೇವರನ್ನೂ ಅನಾವಶ್ಯಕವಾಗಿ ಈ ಕೊಲೆ ಕೇಸಿನಲ್ಲಿ ಸಿಲುಕಿಸುತ್ತಿರುವವರು ಇವರೇ. ●




**ಪ್ರತಿಕ್ರಿಯೆಯೊಂದಿಗೆ ಪರ್ಯಾಯ**

ಸಂಪಾದಕೀಯ ಪ್ರಧಾನಿ ಅಭ್ಯರ್ಥಿ ಘೋಷಣೆ ಕುರಿತು, ಯುಪಿಎ ಮತ್ತು ಎನ್‌ಡಿಎ, ಮೋದಿ v/s ರಾಹುಲ್ ಕುರಿತಂತೆ ಇತ್ಯಾದಿ ಉತ್ತಮ ವಿಮರ್ಶೆ, ವಿಶ್ಲೇಷಣೆಯಿಂದ ಕೂಡಿದ್ದು ತರ್ಕಬದ್ಧವಾಗಿತ್ತು.

ಭವ್ಯ ಪಿ. ಅವರ ಕವನ 'ಸುಮ್ಮನೆ ಕೂರುತ್ತೇನೆ' ಚೆನ್ನಾಗಿದೆ. 'ಜಾಗತೀಕರಣ ಮತ್ತು ಕನ್ನಡ ಭಾಷೆಯ ಸವಾಲುಗಳು' ಲೇಖನ ವರ್ತಮಾನದ ವಿಚಾರ ವಾಗಿದ್ದು ಜಾಗೃತಿ ಮೂಡಿಸುವಂತಿದೆ. ಹೆಚ್. ಕೆ. ರಾಮಚಂದ್ರ ಬರೆದ ಗಣಿತಜ್ಞ, ಜಿ. ಹೆಚ್. ಹಾರ್ಡಿ ಕುರಿತಂತೆ ಬರೆದ ಲೇಖನ ಚೆನ್ನಾಗಿತ್ತು.

*ಹಿರೇಹಾರಕ, ಶಿವಮೊಗ್ಗ* **ಎಂ. ಎಸ್. ಮಂಜುನಾಥ್**

೨೦೧೩ರ ಸೆಪ್ಟೆಂಬರ್ 'ಹೊಸತು' ಸಂಚಿಕೆಯಲ್ಲಿನ ಸಂಪಾದಕೀಯ 'ತೆಲಂಗಾಣ ರಾಜ್ಯ ಸ್ಥಾಪನೆ : ಸಾಧಕ ಬಾಧಕಗಳು' ಅತ್ಯಂತ ಕುತೂಹಲದಿಂದ ಓದಿದೆ. ತೆಲಂಗಾಣ ರಚನೆ ದೇಶದ ಹಲವು ಕಡೆ "ಪ್ರತ್ಯೇಕತಾ ವಾದ"ಕ್ಕೆ ನಾಂದಿ ಹಾಡಿದೆ ಎಂದು ವಾದಿಸಲಾಗಿದೆ. ಇದು "ಪ್ರತ್ಯೇಕತಾವಾದ"ವಾಗಿರದೆ ವೈವಿಧ್ಯತೆಯ ಈ ದೇಶ ಎಲ್ಲಾ ವರ್ಗಗಳ ಪ್ರದೇಶಗಳ ಅಸ್ಮಿತೆ ಕಾಪಾಡಲು ಇಂದು ವಿವಿಧ ಸಣ್ಣ ರಾಜ್ಯಗಳು ಅನಿವಾರ್ಯ ವೆನಿಸುತ್ತಿದೆ. ಇದನ್ನು ತಪ್ಪಿಸಬೇಕಾದರೆ ಜನರಲ್ಲಿ ಭಾರತೀಯರೆಂಬ ಭಾವನೆಯ ಜೊತೆಗೆ ಆರ್ಥಿಕ ಭದ್ರತೆ ತರಬೇಕಾದ ಜರೂರು ಹೆಚ್ಚಾಗಿದೆ. ಇದಕ್ಕಾಗಿ ಶಿಕ್ಷಣ ರಾಷ್ಟ್ರೀಕರಣಗೊಂಡು ಏಕರೂಪದ, ಉಚಿತ, ಸಾರ್ವತ್ರಿಕ ವಿದ್ಯಾಭ್ಯಾಸ ನೀಡಬೇಕಾದ ತುರ್ತು ಇದೆ.

ವಿಚಾರವಾದಿ ದಾಭೋಲ್ಕರ್ ಹತ್ಯೆ ಖಂಡನೀಯ. ಸಂವಿಧಾನವೇ ವೈಜ್ಞಾನಿಕ ಮನೋಭಾವ ಬೆಳೆಸಲು ಕರೆ ನೀಡಿರುವಾಗ ನಾವು ಪ್ರಜಾಪ್ರಭುತ್ವದ ಅಡಿಯಲ್ಲಿ ಮೌಢ್ಯತೆ ಪೋಷಿಸುತ್ತಿದ್ದೇವೆ.

*ಸೇಡಂ* ***ಬಿ. ಆರ್. ಅಣ್ಣಾಸಾಗರ***

ಇಂಗ್ಲಿಷ್ ಭಾಷೆಯು ಎಲ್ಲ ಕ್ಷೇತ್ರಗಳಲ್ಲಿ ಬೆಳೆದಂತೆ ಕನ್ನಡ ಭಾಷೆ ಬೆಳೆಯದೇ ಕೇವಲ ಹಲವು ಬೆರಳೆಣಿಕೆ ಯಷ್ಟು ಕ್ಷೇತ್ರದಲ್ಲಿ ಮಾತ್ರ ಬೆಳೆದುದರಿಂದ ಇಂಗ್ಲಿಷ್‌ನ ಪ್ರಾಧಾನ್ಯತೆ ಇಂದು ಎಲ್ಲೆಡೆ ರಾರಾಜಿಸುತ್ತಿದೆ. ಕನ್ನಡವನ್ನು ಇಂಗ್ಲಿಷನಷ್ಟು ಎತ್ತರವಾಗಿ ನಮ್ಮ ಕನ್ನಡಿಗರು




ಬೆಳೆಸಲಿಲ್ಲ, ಬೆಳೆಸಬೇಕಾಗಿತ್ತು. ಕನ್ನಡಿಗರಲ್ಲಿ ಕನ್ನಡ ಭಾಷೆಯ ಬಗ್ಗೆ ತುಂಬಾ ಕಡಿಮೆ ಅಭಿಮಾನವಿದೆ. ಬಿಟ್ಟಿ ಉಪದೇಶ ಮಾಡುವಲ್ಲಿ ನಿಷ್ಣಾವಂತರು. ಸಾಹಿತ್ಯ, ಸಮಾಜ ವಿಜ್ಞಾನ, ಆಡಳಿತ ಕ್ಷೇತ್ರಗಳಲ್ಲಿ ಮಾತ್ರ ಕನ್ನಡ ಭಾಷೆ ಬೆಳೆದರೆ ವಿಜ್ಞಾನ, ತಾಂತ್ರಿಕ, ವೈದ್ಯವಿಜ್ಞಾನ... ಮುಂತಾದ ಕ್ಷೇತ್ರಗಳಲ್ಲಿ ಹೇಳಿಕೊಳ್ಳುವ ಮಟ್ಟದಲ್ಲಿ ಬೆಳೆದಿಲ್ಲ. ತಮಿಳುನಾಡಿನಲ್ಲಿ ವೈದ್ಯಪದ್ಧತಿಯಲ್ಲಿ ಪದವಿ ಪರೀಕ್ಷೆ ಬರೆಯಬಹುದಾದರೆ ನಮ್ಮ ರಾಜ್ಯದಲ್ಲಿ ಈ ವ್ಯವಸ್ಥೆ ಏಕೆ ಸಾಧ್ಯವಾಗುತ್ತಿಲ್ಲ. ಕನ್ನಡ ಅಷ್ಟರಮಟ್ಟಿಗೆ ಹಿಂದಿದೆ. ಇಂದು ಹಲವಾರು ಕನ್ನಡ ಸಾಹಿತಿಗಳು, ಕನ್ನಡ ಪರ ಹೋರಾಟಗಾರರು, ಕನ್ನಡ ಪರ ಉದ್ದುದ್ದ ಭಾಷಣ ಮಾಡುವವರು, ಕನ್ನಡ ಉಪನ್ಯಾಸಕರು, ಮಂತ್ರಿಗಳು.. ಮುಂತಾದವರು ತಮ್ಮ ಕುಡಿಗಳನ್ನು ಇಂಗ್ಲಿಷ್ ಮಾಧ್ಯಮದ ಶಾಲೆಯಲ್ಲಿ ಓದಿಸುತ್ತಿದ್ದಾರೆ. ಇವರಿಂದ ಕನ್ನಡ ಭಾಷೆ ಉದ್ಧಾರ/ಬೆಳೆಸಲು ಸಾಧ್ಯವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಲ್ಲ ಎಂದೇ ಹೇಳಬಹುದು.

*ತುಮಕೂರು* ***ವಾಮನ ರಾವ್***

**ಕನಸಿನ ಚಿನ್ನ – ಸರಕಾರಿ ಮೌಢ್ಯ**

ಮಹಾರಾಷ್ಟ್ರದ ಅಂಧಶ್ರದ್ಧಾ ನಿರ್ಮೂಲನಾ ಹೋರಾಟಗಾರ ನರೇಂದ್ರ ದಾಭೋಲ್ಕರ್ ಅವರ ಹತ್ಯೆಯ ನಂತರ ವಿಚಾರವಾದಿ ಚಳುವಳಿ ಚುರುಕು ಪಡೆದಿದೆ. ದೇಶದ ವಿವಿಧ ರಾಜ್ಯಗಳಲ್ಲಿ ಅಂಧಶ್ರದ್ಧೆ ನಿರ್ಮೂಲನೆಗಾಗಿ ಕಾನೂನು ತರುವ ಚಿಂತನೆ ನಡೆದಿದೆ. ಇಂಥ ಸಂದರ್ಭದಲ್ಲಿ ಉತ್ತರ ಪ್ರದೇಶ ರಾಜ್ಯದ ದೌಂಡಿಯಾ ಖೇಡಾಕೋಟೆ ಬಳಿ ಚಿನ್ನದ ನಿಧಿಗಾಗಿ ಪುರಾತತ್ವ ಇಲಾಖೆಯ ನಾಯಕತ್ವದಲ್ಲಿ ಶೋಧ ನಡೆದಿದೆ. ಅಲ್ಲಿನ ಭೂಮಿಯಾಳದಲ್ಲಿ ಚಿನ್ನದ ನಿಧಿ ಇದೆ ಎಂದು ಸಾಧು ಶೋಭನ್ ಎಂಬವನ ಕನಸನ್ನೇ ನಂಬಿ ಸರಕಾರ ನಿಧಿ ಶೋಧನೆಗೆ ಇಳಿದಿದೆ. ಒಂದು ರಾಜ್ಯದ ಪುರಾತತ್ವ ಇಲಾಖೆ ಒಬ್ಬ ಸನ್ಯಾಸಿಯ ಕನಸನ್ನು ನಂಬಿ ಕ್ರಿಯೆಗಿಳಿಯುವುದು, ಉತ್ತರ ಪ್ರದೇಶ ಸರಕಾರ ಅದನ್ನು ಬೆಂಬಲಿಸುವುದು, ಇವನ್ನೆಲ್ಲ ನೋಡಿದರೆ ನಮ್ಮ ಸಾಮಾಜಿಕ ವಿಕಾಸ ಮುಮ್ಮುಖವೋ, ಹಿಮ್ಮುಖವೋ ಅನುಮಾನ ಬರುತ್ತದೆ. ಇವು ನಮ್ಮ ಸರಕಾರಗಳು ಎಂದು ಹೇಳಲು ನಾಚಿಕೆಯಾಗುತ್ತದೆ.

*ಧಾರವಾಡ* ***ಶಂಕರ ಹಲಗತ್ತಿ***

ಬೆಂಗಳೂರಿನ ದ. ರಾ. ಬೇಂದ್ರೆ ಕಾವ್ಯಕೂಟ (ನೋಂ.)ವು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ರಾಜ್ಯಮಟ್ಟದ "ದ. ರಾ. ಬೇಂದ್ರೆ ಸ್ಮೃತಿ ಲೇಖನ ಸ್ಪರ್ಧೆ–೭"ನ್ನು ನಡೆಸುತ್ತಿದೆ. ಸ್ಪರ್ಧೆಯಲ್ಲಿ ಭಾಗವಹಿಸ ಬಯಸುವವರು ಈ ಕೆಳಗಿನ ವಿಳಾಸಕ್ಕೆ ಸಂಪರ್ಕಿಸಲು ಕೋರಲಾಗಿದೆ. ಲೇಖನ ಗಳನ್ನು ಕಳುಹಿಸುವ ಕೊನೆ ದಿನಾಂಕ ೨೦ನೇ ನವೆಂಬರ್ ೨೦೧೩.

**ಡಾ॥ ಜಿ. ಕೃಷ್ಣಪ್ಪ**
ಅಧ್ಯಕ್ಷರು, ದ. ರಾ. ಬೇಂದ್ರೆ ಕಾವ್ಯಕೂಟ (ನೋಂ.)
ಬೆಂಗಳೂರು. ಸಂಚಾರಿ : ೯೯೭೨೧೦೯೨೦೯

ಅಕ್ಟೋಬರ್ ೨೦೧೩ರ 'ಹೊಸತು' ಸಂಚಿಕೆಯ 'ಪತ್ರಗಳು' ವಿಭಾಗದಲ್ಲಿ ಶ್ರೀಮತಿ. ವಿಮಲ ರಾವ್ ಅವರು ತಾವು ವಾಸಿಸುತ್ತಿರುವ ಬೆಂಗಳೂರು ನಗರದ ಸದಾಶಿವನಗರದಲ್ಲಿ ಭೂ ಕಬಳಿಕೆಗೆ ಸಂಚು ನಡೆದಿರುವುದನ್ನು ವಿಶದವಾಗಿ ವಿವರಿಸಿದ್ದಾರೆ. ಅಲ್ಲಿಯ ಜನತಾ ಬಜ಼ಾರ್‌ಅನ್ನು ಮುಚ್ಚಿ ಹಾಕಿ, ಕಟ್ಟಡವನ್ನು ಉರುಳಿಸಿ, ಅಲ್ಲಿ ಶ್ರೀಮಂತರಿಗೆ ಕ್ಲಬ್ ಮತ್ತು ವಾಹನ ನಿಲ್ದಾಣ ನಿರ್ಮಿಸಬೇಕೆಂಬ ಹುನ್ನಾರ ಬಹಿರಂಗವಾಗಿ ನಡೆಯುತ್ತಿದೆಯೆಂಬುದನ್ನು ತಿಳಿಸಿಕೊಟ್ಟಿದ್ದಾರೆ. ರಾಜ್ಯದ ಮುಖ್ಯಮಂತ್ರಿಗಳಿಗೆ ಅಕ್ಟೋಬರ್, 'ಹೊಸತು' ಸಂಚಿಕೆಯನ್ನು ಕಳಿಸಿ ಅವರಿಗೆ ಈ ಪ್ರಕರಣದ ಬಗ್ಗೆ ತಿಳಿಸಲಾಗಿದೆ. ಪತ್ರಿಕೆಯ ಓದುಗರು ಮುಖ್ಯಮಂತ್ರಿಗಳಿಗೆ ಪೋಸ್ಟ್ ಕಾರ್ಡ್ ಬರೆದು ಈ ಅಕ್ರಮ ವನ್ನು ತಡೆಯಬೇಕೆಂದು ಮತ್ತು ಸಂಬಂಧ ಪಟ್ಟವರ ವಿರುದ್ಧ ಕ್ರಮ ಜರುಗಿಸಬೇಕೆಂದು ಆಗ್ರಹಿಸಬೇಕಾಗಿ ವಿನಂತಿಸುತ್ತೇವೆ. ನಮ್ಮ ನೇರ ಪಾಲ್ಗೊಳ್ಳುವಿಕೆಯು ಅಗತ್ಯ.

***– ಸಂ.***

# ಋಗ್ವೇದ ಪ್ರವೇಶಿಕೆ
# ಐತಿಹ್ಯ ಮತ್ತು ವಾಸ್ತವ



ಜಿ. ರಾಮಕೃಷ್ಣ

ಪ್ರಕೃತಿ ನಿಯಮವನ್ನು ವಿಜ್ಞಾನವು ಇಂದು ಪರಿಪೂರ್ಣವಾಗಿ ತಿಳಿದಿದೆಯೆಂದು ಯಾವ ನೈಜ ವಿಜ್ಞಾನಿಯೂ ನಂಬಿಲ್ಲ; ತಿಳಿಯ ಬೇಕಾದದ್ದು ತಿಳಿದಿರುವುದಕ್ಕಿಂತಲೂ ಅಗಾಧವಿರಬೇಕು. ತಿಳಿಯುತ್ತಲೇ ಹೋಗಬೇಕು, ಅದು ನಿರಂತರವಾಗಿ ಸಾಗುವ ಪ್ರಕ್ರಿಯೆ. ಪ್ರಾಚೀನ ಕಾಲದಲ್ಲಾಗಲೇ ಅದರ ಅರಿವಿನತ್ತ ದಾಪುಗಾಲು ಹಾಕಿದ್ದುದನ್ನು ಋಗ್ವೇದದ 'ಋತ'ವು ತೋರಿಸಿಕೊಡುತ್ತದೆ. ಅದು ಸ್ವಾಯತ್ತವಾದ್ದು, ಯಾವ ದೇವತೆಯ ಅಧೀನದಲ್ಲೂ ಇಲ್ಲದಿರುವುದು, ಅಬಾಧಿತವಾದ್ದು ಮತ್ತು ಸಾರ್ವಕಾಲಿಕವಾದ್ದು. ಅದನ್ನು ತಿಳಿದು ಪ್ರಯೋಜನ ಹೊಂದಬಹುದು, ಆದರೆ ತಣಿಸಿ ಬೇಕಾದ್ದನ್ನೆಲ್ಲಾ ಪಡೆದುಕೊಳ್ಳಲಾಗುವುದಿಲ್ಲ. ಪ್ರಕೃತಿ ನಿಯಮಕ್ಕೆ ಹೊರತಾದುದನ್ನು ಯಾವುದೋ ದೇವತೆಯನ್ನೋ ಭೂತವನ್ನೋ ಪೂಜಿಸಿ ಪಡೆಯಬಹುದೆಂಬುದು ಮೂಢನಂಬಿಕೆಯೇ ವಿನಾ ವೇದ-ನಂಬಿಕೆಯಲ್ಲ. ಆಚರಣೆಗಳಲ್ಲೊಂದಾದ ಯಜ್ಞದಿಂದ ಸಹ ದೇವತೆಯನ್ನು ತಣಿಸಿ ಏನನ್ನೂ ಪಡೆಯಲಾಗುವುದಿಲ್ಲ. ಅದು ಭಾರತೀಯ ದರ್ಶನಗಳಲ್ಲಿ ಒಂದಾದ ಪೂರ್ವ ಮೀಮಾಂಸೆಯ ತತ್ತ್ವ. ಹಾಗೇನಾದರೂ ಪಡೆಯುವುದಿದ್ದರೆ ಅದು ವೇದಮಂತ್ರದ ಶಕ್ತಿಯಿಂದ, ಅದರ ಪದಗಳ ಶಕ್ತಿಯಿಂದ. ಮಂತ್ರಕ್ಕೆ ಅಂತಹ ಶಕ್ತಿಯುಂಟೆಂದು ಪೂರ್ವಮೀಮಾಂಸಾ ದರ್ಶನವು ನಂಬುತ್ತದೆ. ವೈಜ್ಞಾನಿಕ ಪದ್ಧತಿಗೆ ಮೂಲಾಧಾರದಂತೆ ನಿರೂಪಿಸಲಾಗಿರುವ ಋತವು ಯಾವ ಆಮಿಷವನ್ನೂ ಒಡ್ಡಿ ಆಚರಣೆಗಳನ್ನು ಪ್ರೋತ್ಸಾಹಿಸುವುದಿಲ್ಲ. ಅದು ತಿಳಿವಳಿಕೆ-ಮಧ್ಯಪ್ರವೇಶ-ಆಶಯದ ಪೂರೈಕೆ ಎಂಬ ಸೂತ್ರವನ್ನವಲಂಬಿಸುತ್ತದೆ. ಮೂಢನಂಬಿಕೆಗಳಿಗೆ ನಿಷ್ಠರಾದವರು ವೈದಿಕ ಚಿಂತನೆಯಿಂದ ಸಂಬಂಧ ಕಡಿದುಕೊಂಡಿರುತ್ತಾರೆ. ಪ್ರಕೃತಿಯ ವಿಸ್ಮಯವನ್ನು ಬೇರೆ ಸಂಸ್ಕೃತಿಗಳು ಕೂಡ ಗುರುತಿಸಿವೆ, ಅದರಿಂದ ಪುಳಕಗೊಂಡಿವೆ, ಅಚ್ಚರಿ ಅನುಭವಿಸಿವೆ, ಆಚರಣೆಗಳನ್ನು ಬೆಳೆಸಿಕೊಂಡಿವೆ, ದಾರ್ಶನಿಕ ನೆಲೆಯತ್ತ ಹೆಜ್ಜೆ ಹಾಕಿವೆ. ಅಂತಹ ಪೂರಕ ಪರಿಕಲ್ಪನೆಗಳ ಪರಿಚಯವು ಮಾನವ ಸಮುದಾಯದ ಚಿಂತನೆ ಮತ್ತು ಆಶಯಗಳನ್ನು ಅರ್ಥೈಸಿಕೊಳ್ಳಲು ಸಹಕಾರಿಯಾಗಿರುತ್ತದೆ. ಪ್ರಸ್ತುತ ಲೇಖನವು ಈ ಮಾಲಿಕೆಯಲ್ಲಿ ಐದನೆಯ ಕಂತು.

ಮಾನವರಲ್ಲಿ ಭಿನ್ನತೆಗಳಿವೆ. ಒಂದೊಂದು ಸನ್ನಿವೇಶದಲ್ಲಿ ಒಂದೊಂದು ಸಮುದಾಯ. ಬೆಟ್ಟಗುಡ್ಡಗಳಲ್ಲಿ ಕೆಲವರು, ನದೀ ತಟಗಳಲ್ಲಿ ಕೆಲವರು, ವಿಶಾಲ ಬಯಲುಗಳಲ್ಲಿ ಕೆಲವರು, ಕಾಡುಗಳಲ್ಲಿ ಕೆಲವರು, ದ್ವೀಪಗಳಲ್ಲಿ ಕೆಲವರು, ಹೀಗೆ ಭೂಮಿಯ ಮೇಲೆ ಜನ ಹಂಚಿಹೋಗಿದ್ದಾರೆ. ಆದರೆ ಅವರಲ್ಲೆಲ್ಲಾ ಕೆಲವಾದರೂ ಸಮಾನಾಂಶಗಳಿವೆ, ಇಲ್ಲವೆ ಅಂತಹ ಅಂಶಗಳಿಗೆ ಬೇಕಾದ ಅಡಿಪಾಯವಿದೆ. ವಾಸಸ್ಥಳದ ಮೇಲ್ಮೈ ಲಕ್ಷಣಗಳಲ್ಲಿ ಮತ್ತು ವಾಯುಗುಣದಲ್ಲಿ ಎಷ್ಟೇ ವ್ಯತ್ಯಾಸವಿರಲಿ, ನಮ್ಮ ಭೂಮಿಮಾತೆಯು ಅನೇಕ ವಿಷಯಗಳನ್ನು ಎಲ್ಲರಿಗೂ ಏಕಪ್ರಕಾರದಲ್ಲಿ ಅನುಭವಕ್ಕೆ ಬರುವಂತೆ ಮಾಡುತ್ತಾಳೆ. ಸೂರ್ಯ ಎಲ್ಲೆಡೆ ಉದಯಿಸುತ್ತಾನೆ – ಅಸ್ತಮಿಸುತ್ತಾನೆ, ಎಲ್ಲೆಡೆ ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತವೆ, ಎಲ್ಲೆಡೆ ಚಂದ್ರನ ಕಾಂತಿ ಕ್ಷೀಣಿಸುತ್ತದೆ



ಮತ್ತು ವೃದ್ಧಿಸುತ್ತದೆ. ದೀರ್ಘವೋ ಹ್ರಸ್ವವೋ, ಅಂತೂ ಎಲ್ಲೆಡೆ ದಿನ-ರಾತ್ರಿಗಳು ಸತತವಾಗಿ ಮರುಕಳಿಸುತ್ತಿರುತ್ತವೆ. ಪೆಟ್ಟು ಬೀಳುವುದು, ಅನಾರೋಗ್ಯ ಪೀಡಿಸುವುದು, ಎಲ್ಲರಿಗೂ ಸಾಮಾನ್ಯ. ರೋಗವನ್ನು ನಿಗ್ರಹಿಸಲಾಗದೆ ಮಾನವ ಕಂಗಾಲಾಗುವುದು ಯಾವುದೇ ಒಂದು ಪ್ರದೇಶಕ್ಕೆ ಸೀಮಿತವಲ್ಲ. ಅಂದರೆ, ಪ್ರಕೃತಿಯು ಎಲ್ಲರಿಗೂ ಒಂದೇ ರೀತಿಯಲ್ಲಿ ಅನಾವರಣಗೊಳ್ಳುತ್ತದೆ, ಮಾನವನ ಅನುಭವವು ಸಮಾನವಾಗಿ ಇರುತ್ತದೆ. ಇದರ ಪರಿಣಾಮವಾಗಿ ಮಾನವನು ಎಲ್ಲೆಡೆ ಪ್ರಕೃತಿಯ ಅರ್ಥೈಸುವಿಕೆಗೆ ಕೈಹಾಕಿದ್ದಾನೆ, ಒಂದಷ್ಟು ಜ್ಞಾನ ಸಂಪಾದಿಸಿಕೊಂಡಿದ್ದಾನೆ, ಜೀವನದ ಏರುಪೇರುಗಳನ್ನು ಕಂಡಿದ್ದಾನೆ. ಭಿನ್ನತೆ ಕರಗಿಹೋಗುವುದಿಲ್ಲ, ನಿಜ; ಆದರೆ ಮಾನವನ ಅವಲೋಕನ ಮತ್ತು ಕಲಿಕೆಯಲ್ಲಿ ಬೇಕಾದಷ್ಟು ಸಮಾನಾಂಶಗಳಿರುತ್ತವೆ. ಆದ್ದರಿಂದ ಒಂದು ಸಂಸ್ಕೃತಿಯಲ್ಲಿ ಋತದ ಪರಿಕಲ್ಪನೆ ಇದ್ದರೆ, ಅದಕ್ಕೆ ಸಂವಾದಿಯಾದ ಬೇರೇನೋ ಒಂದು ಪರಿಕಲ್ಪನೆ ಇತರ ಸಂಸ್ಕೃತಿಗಳಲ್ಲೂ ವಿಕಸಿಸುವುದು ಸಹಜ. ಒಂದರಿಂದ ಇನ್ನೊಂದು ಹುಟ್ಟಿತೆಂದು ಅಥವಾ ಪ್ರಭಾವಿತವಾಯಿತೆಂದು ಇದರರ್ಥವಲ್ಲ. ಎರಡೂ ಪ್ರತ್ಯೇಕವಾಗಿ, ಆದರೆ ಒಂದೇ ಹಾದಿಯಲ್ಲಿ, ಬೆಳೆದು ಬರುತ್ತವೆ. ವಿಷ್ಣುವಿನಂತಹ ಕ್ಷೀರಸಾಗರ ನಿವಾಸಿಯು ಎಲ್ಲ ದೇಶಗಳ ಸಂಸ್ಕೃತಿಗಳಲ್ಲೂ ಇಲ್ಲ, ನಿಜ; ಆದರೆ ಎಲ್ಲ ಸಂಸ್ಕೃತಿಗಳಲ್ಲೂ ಧ್ರುವ ನಕ್ಷತ್ರದ ಗುರುತಿಸುವಿಕೆ, ಸಪ್ತರ್ಷಿ ಮಂಡಲದ ಚಲನೆಯ ಬಗೆಗಿನ ತಿಳಿವು, ಯಾವ ಋತು ಯಾವುದರ ನಂತರ ಎಂಬ ಪರಿಜ್ಞಾನ, ಬೆಳೆದೇ ಇರುತ್ತದೆ. ಅಂತೆಯೇ, ಅಮೂರ್ತ ತತ್ವಗಳ ಚಿಂತನೆ, ತಾರ್ಕಿಕ ಪದ್ಧತಿ, ನೈತಿಕ ಮತ್ತು ಮತಧಾರ್ಮಿಕ ದೃಷ್ಟಿಗಳು, ಎಲ್ಲವೂ ಅಭಿವ್ಯಕ್ತಗೊಂಡಿರುತ್ತವೆ. ಹೀಗಾಗಿ ಋತವಾಗಲಿ, ದ್ಯಾವಾಪೃಥಿವೀ ದೇವತೆಗಳಾಗಲಿ, ವಿಶ್ವವು ಅಸ್ತಿತ್ವಕ್ಕೆ ಬಂದಿರುವ ಬಗೆಗಿನ ವಿಸ್ಮಯವಾಗಲಿ, ಕೇವಲ ಋಗ್ವೇದದಲ್ಲಿ ಮಾತ್ರವೇ ಕಂಡುಬರುವುದಿಲ್ಲ. "ಋಗ್ವೇದದಲ್ಲಿ ಸಕಲ ಜ್ಞಾನವೂ ಅಡಗಿದೆ" ಎನ್ನುವವರು ಕೂಡ ಹಲವು ಜನಾಂಗಗಳ ಹಲವು "ವೇದ"ಗಳನ್ನು ಗಮನಿಸಿ ಆದರಿಸಬೇಕಾಗುತ್ತದೆ. ಅವುಗಳಲ್ಲಿ ಯಾವೊಂದೂ ತಾನೇ ಅತಿಶ್ರೇಷ್ಠ, ಅನನ್ಯ, ದೇವವಾಣಿ ಎಂದು ಗರ್ವಿಸುವ ಸಂದರ್ಭವಿಲ್ಲ. ಸ್ವಾರಸ್ಯದ ವಿಷಯವೆಂದರೆ ವೇದದಲ್ಲಿ ಆಧುನಿಕ ಜ್ಞಾನವನ್ನೆಲ್ಲಾ ಕಂಡುಕೊಳ್ಳುವ ನಮ್ಮ ಕೆಲವು 'ಧೀಮಂತ'ರಂತೆ ಬೇರೆ ಜನಾಂಗಗಳ ಪುರಾತನ ಗ್ರಂಥಗಳಲ್ಲೂ ಆಧುನಿಕ ಜ್ಞಾನವನ್ನು ಕಾಣುವ ಆಯಾ ಜನಾಂಗಗಳ ಧೀಮಂತರಿದ್ದಾರೆ. "ಭಗವಂತನ ನುಡಿ"ಯೆಂದು ಕರೆಯಲಾದ ಗ್ರಂಥಗಳಲ್ಲಿ ಆಧುನಿಕ ಜ್ಞಾನವೂ ಇಲ್ಲದಿದ್ದರೆ ಅದನ್ನು ನುಡಿದವನು ಅದೆಂತಹ ಭಗವಂತನೆಂಬ ಅನುಮಾನ ಬಂದೀತೆಂಬ ಕಾರಣದಿಂದೇನಾದರೂ ಹೀಗೆ ಮಾಡುವ ಸಂಪ್ರದಾಯ ಬೆಳೆದಿದೆಯೋ ಏನೋ! ಅದಿರಲಿ, ನಾವು ಋತ ಮತ್ತು ಅದರ ಸಂವಾದೀ ಪರಿಕಲ್ಪನೆಗಳಿಗೆ ಹಿಂದಿರುಗೋಣ.

ಮಾನವನ ಸುತ್ತ ಇರುವ ವಿಶ್ವದ ಸಂಗತಿಗಳಲ್ಲಿ ಅಡಕವಾಗಿರುವ ಲಕ್ಷಣವನ್ನು ಋತದಲ್ಲಿ ಕಾಣುವಂತೆ ಬೇರೆ ಸಂಸ್ಕೃತಿಗಳಲ್ಲಿ ಅದೇ ಲಕ್ಷಣವನ್ನು ಸೂಚಿಸುವಂತಹ ಪರಿಕಲ್ಪನೆಗಳನ್ನು ಋಗ್ವೇದದಂತೆಯೇ ಪುರಾತನವಾದ ಗ್ರಂಥಗಳಲ್ಲಿ ನಾವು ಅರಸಬಹುದು. ಅಂಥವುಗಳಲ್ಲಿ ಮೊದಲು ನಮ್ಮ ಗಮನ ಸೆಳೆಯುವುದು ಅವೆಸ್ತಾದಲ್ಲಿನ 'ಅಶ' ಎಂಬ ಪರಿಕಲ್ಪನೆ. ಅವೆಸ್ತಾ ಪ್ರಾಚೀನ ಪರ್ಷಿಯಾದ ಆದಿಗ್ರಂಥ. ಋಗ್ವೇದದಲ್ಲಿ ವಸಿಷ್ಠ ಮುಂತಾದವರು ರಚಿಸಿದ ಸೂಕ್ತಗಳಿರುವಂತೆ ಅವೆಸ್ತಾದಲ್ಲಿ ಝುರತುಷ್ಟ್ರನದೆಂದು ಹೇಳಲಾಗುವ ಸೂಕ್ತಗಳಿವೆ. ಋಗ್ವೇದದ 'ಅಸುರ ವರುಣ' ಇರುವಂತೆ ಅವೆಸ್ತಾದ 'ಅಹುರ ಮಾಜ್ದ' ಇದ್ದಾನೆ. 'ಅಶ' ಎಂಬುದನ್ನು ಅಲ್ಲಿ 'ಎರೆತ' ಎಂದೂ ಕರೆಯಲಾಗಿದೆ. ಈ ಪದವು 'ಋತ' ಎಂಬ ಪದಕ್ಕೆ ಎಷ್ಟು ಹತ್ತಿರವಾಗಿದೆಯೆಂಬುದನ್ನು ಸುಲಭವಾಗಿ ತಿಳಿಯಬಹುದು. 'ಅರತ' ಎಂಬುದಕ್ಕೆ 'ವೆಸ್ತ' ಎಂಬ ಸಮಾನಾರ್ಥಕ ಪದವೊಂದಿದೆ. ಹಾಗೆಂದರೆ "ಶೋಭಿಸುವುದು" ಮತ್ತು "ವೃದ್ಧಿ ಹೊಂದುವುದು" ಎಂದರ್ಥ. ಈ ಅರ್ಥವನ್ನು 'ಋತ'ಕ್ಕೂ ಕೊಡಲಾಗಿದೆ. ಜೊತೆಗೆ, ಋಗ್ವೇದ ಮತ್ತು ಅವೆಸ್ತಾ ಹೆಚ್ಚುಕಡಿಮೆ ಒಂದೇ ಕಾಲಮಾನಕ್ಕೆ ಸೇರುತ್ತವೆ ಯಲ್ಲದೆ ಭಾಷೆಯ ದೃಷ್ಟಿಯಿಂದಲೂ ಸಾಮ್ಯತೆ ಹೊಂದಿವೆ. 'ಋತ' ಮತ್ತು 'ಅಶ' ಹೇಗೆ ಪರಸ್ಪರ ಸಂಬಂಧ ಹೊಂದಿವೆ ಎಂಬುದನ್ನು ಐ.ಜೆ.ಎಸ್. ತಾರಾಪೊರೆವಾಲ ವಿವರಿಸಿರುವುದು ಹೀಗೆ: "ಅಶ ಎಂಬ ಪದವು ಅವೆಸ್ತಾದಲ್ಲಿ ವಿವಿಧ ರೂಪಗಳಲ್ಲಿ ಬಂದಿದೆ. ಅರ್ಶ್, ಎರೆಶ್, ಅರ್ತ, ಎರೆತ, ಇತ್ಯಾದಿ. ಈ ಪಟ್ಟಿಯಲ್ಲಿ ಕಡೆಯದಾದ 'ಎರೆತ' ಪದವು 'ಋತ'ಕ್ಕೆ ಭಾಷಾ ಶಾಸ್ತ್ರದ ನೆಲೆಯಲ್ಲೂ ಬಹಳ ಹತ್ತಿರವಾದ್ದು. ಒಂದೇ ಪದವು ಎರಡು ಪ್ರಾಚೀನ ಗ್ರಂಥಗಳಲ್ಲೂ ಒಂದೇ ಅರ್ಥವ್ಯಾಪ್ತಿಯನ್ನು ಹೊಂದಿದೆ. ಇಡೀ ವಿಶ್ವವನ್ನು ಎತ್ತಿಹಿಡಿದು ನಿಯಂತ್ರಿಸುವ 'ಋತ'ದಂತೆ 'ಅಶ'ವೂ ಅದನ್ನೇ ಸೂಚಿಸುತ್ತದೆ."

ಸಿ.ಎಂ ಮಧ್ಯಪ್ರವೇಶ:
ವಸ್ತ್ರ ಸಂಹಿತೆ ರದ್ದು
ಕಚೇರಿ
ಹಳ್ಳಿ ಮಂದಿ ಅಲ್ಲ.. ನಮ್ಮ ಸಾಹೇಬರು ಸಭ್ಯಾ ಉಡುಪು ಧರಿಸಿ ಬರ್‍ತಾ ಇದ್ದಾರೆ..

ಪ್ರಾಚೀನ ಇಂಡೋ-ಇರಾನಿಯನ್ ಬುಡಕಟ್ಟುಗಳು ನೆಲೆಸಿದ್ದ ಪ್ರದೇಶದಿಂದ ಋಗ್ವೇದದ ರಚನೆ ಮಾಡಿದ ವೈದಿಕ ಬುಡಕಟ್ಟುಗಳವರು ಪೂರ್ವದಿಕ್ಕಿನಲ್ಲಿ ಪ್ರಯಾಣಿಸಿದರೆಂದೂ, ಹಾಗೆ ಪ್ರಯಾಣಿಸುತ್ತಾ ಋಗ್ವೇದವನ್ನು ರಚಿಸುತ್ತಿದ್ದರೆಂದೂ ಪ್ರತಿಪಾದಿಸುವ ಕೆಲವು ವಿದ್ವಾಂಸರಿದ್ದಾರೆ. ಅದನ್ನು ಭಾಗಶಃ ಮಾತ್ರ ಒಪ್ಪುವ ಬೆಟ್ಟಿ ಹೈಮನ್ ಎಂಬಾಕೆ "ಅವೆಸ್ತಾದ 'ಅರ್ತ' ಅಥವಾ 'ಅಶ' ಹಾಗೂ ಋಗ್ವೇದದ 'ಋತ' ಭಾಷೆಯ ನೆಲೆಯಲ್ಲಿ ಬಹಳ ಹತ್ತಿರವೇ ಆದರೂ ಅವು ಸೂಚಿಸುವ ಅರ್ಥಗಳಲ್ಲಿ ಅಂತರವಿದೆ" ಎನ್ನುತ್ತಾಳೆ. ಋಗ್ವೇದದ 'ಋತ'ದಷ್ಟು ವ್ಯಾಪಕ ಅರ್ಥವನ್ನು ಹೊಂದಿರದ 'ಅಶ', ಹೆಚ್ಚಾಗಿ ಯಜ್ಞದಂತಹ ಆಚರಣೆಗಳಿಗೆ ಸಂಬಂಧಿಸಿದಂತೆ ಅರ್ಥವನ್ನು ಸೂಚಿಸುತ್ತದೆ ಎಂಬುದು ಆಕೆಯ ಅಭಿಪ್ರಾಯ. ಯಜ್ಞದ ಕಟ್ಟುನಿಟ್ಟಾದ ವಿಧಾನವನ್ನು 'ಋತ' ಸಹ ಸೂಚಿಸುತ್ತದೆಂದು ನಾವೀಗಾಗಲೇ ಗಮನಿಸಿದ್ದೇವೆ. 'ಅಶ' ಎಂಬುದು ಅಹುರ ಮಾಜ್ದನ ಆರು ಶಕ್ತಿಗಳಲ್ಲಿ ಒಂದು; ಕೆಡುಕನ್ನು ಎದುರಿಸಲು ಅವನು ಈ ಶಕ್ತಿಗಳನ್ನು ಪ್ರಯೋಗಿಸುತ್ತಾನೆ. ಮಾಜ್ದನು 'ಸ್ಪೆಂತ ಮೈನ್ಯು' (ಅಂದರೆ, ಪವಿತ್ರ ಚೈತನ್ಯ ಅಥವಾ ಮಹಾನ್ ವಿವೇಕಿ); ಅವನೊಂದಿಗಿನ ಆರು ಶಕ್ತಿಗಳೆಂದರೆ ವೋಹು ಮನೋ (ಒಳ್ಳೆಯ ಚಿಂತನೆ), ಅಶ, ಖ್ಷತ್ರ ವೈರ್ಯ (ಅತ್ಯುಚ್ಚ ಸಾಮ್ರಾಜ್ಯ), ಸ್ಪೆಂತ ಅರ್ಮೈತಿ (ಪವಿತ್ರ ವ್ಯಕ್ತಿತ್ವ), ಹೌರ್ವತಾತ್ (ಆರೋಗ್ಯ), ಮತ್ತು ಅಮೆರೆತಾತ್ (ಅಮೃತತ್ವ). ಇದಕ್ಕೆ ಹೋಲಿಸಿದರೆ ಋಗ್ವೇದದ ವರುಣನಿಗೆ 'ಋತ' ಮತ್ತು 'ಪಾಶ' ಎರಡೇ ಸಾಮಗ್ರಿಗಳು ಸಾಕಾಗಿವೆ. ಪ್ರಮುಖವಾಗಿ ಗಮನಿಸಬೇಕಾದ್ದು ಇಷ್ಟೇ: 'ಋತ'ಕ್ಕಿರುವ ಎಲ್ಲ ಅರ್ಥವ್ಯಾಪ್ತಿಯೂ 'ಅಶ'ಕ್ಕಿದೆ, ಎಂಬುದು; ಮತ್ತು, ವರುಣನ ಲಕ್ಷಣಗಳೆಲ್ಲವೂ ಅಹುರ ಮಾಜ್ದನಿಗೂ ಇವೆ, ಎಂಬುದು. ವರುಣನಂತೆ ಅಹುರ ಮಾಜ್ದ ಸಹ ಎಲ್ಲವನ್ನೂ ತಿಳಿದವನು (ವಿಶ್ವ-ಅಕಶ್), ಸರ್ವಶಕ್ತ (ವಿಶ್ವ-ತುಬಸ್), ಸಾರ್ವಭೌಮ (ವಿಶ್ಪನ್-ಖ್ಶುದ್ರೈ), ಎಲ್ಲವನ್ನೂ ಕೊಡುವವ (ವಿಶ್ವ-ಸುತ್), ಮತ್ತು ವಿಶ್ವಾತ್ಮಕ (ವಿಶ್ಪನ್-ವಿಶ್ಪ). ಅಷ್ಟೇ ಏಕೆ, ಅವೆಸ್ತಾದಲ್ಲಿ ಅಹುರ ಮಾಜ್ದನನ್ನು ಕುರಿತ ಹಲವು ಸೂಕ್ತಗಳು ಋಗ್ವೇದದಲ್ಲಿ ವರುಣನನ್ನು ಕುರಿತ ಸೂಕ್ತಗಳಂತೆಯೇ ಇವೆ. ಪಾಲ್ ಥೈಮ್ ಉದಾಹರಿಸುವ ಒಂದು ಪ್ರಸಂಗವನ್ನು ಮಾತ್ರ ಇಲ್ಲಿ ಪರಿಚಯಿಸಲು ಸಾಧ್ಯ. ಮಿತ್ರನೊಂದಿಗಿರುವ ವರುಣನು (ಮಿತ್ರಾ-ವರುಣರು) 'ವ್ರತ' ಮತ್ತು 'ಸತ್ಯ'ಗಳ ಪರಿಪಾಲಕ (ಋ.೫.೬೩.೭: ವ್ರತಾ ರಕ್ಷೇಥೇ ಅಸುರಸ್ಯ ಮಾಯಯಾ; ಋತೇನ ವಿಶ್ವಂ ಭುವನಂ ವಿ ರಾಜಥಃ). ಅಹುರ ಮಾಜ್ದನೂ ಅದನ್ನೇ ಮಾಡುತ್ತಾನೆ (ಅವೆಸ್ತಾ ೨.೧೨: ಮಿಥ್ರ-ಅಹುರ ಬರಜಂತ; ಐಥ್ಯಜನ್ಹ ಅಶಾವಾನ; ಯಜಮೈದೇ).

ಇಷ್ಟೆಲ್ಲಾ ಸಾಮ್ಯಗಳ ನಡುವೆಯೂ 'ಋತ' ಮತ್ತು 'ಅಶ' ಒಂದು ನೆಲೆಯಲ್ಲಿ ಸ್ವಲ್ಪ ಭಿನ್ನತೆ ಪ್ರದರ್ಶಿಸುತ್ತವೆ. ಋತಕ್ಕಿರುವಷ್ಟು ಔನ್ನತ್ಯ ಅಶಕ್ಕೆ ಇಲ್ಲ. ಎಲ್ಲ ದೇವತೆಗಳಿಗಿಂತಲೂ ಋತ ಹಿರಿದು; ಆದರೆ ಅಶ ಎಂಬುದು ಅಹುರ ಮಾಜ್ದನ ಅಧೀನದಲ್ಲಿದೆ. ಎರಡನೆಯದಾಗಿ, ಋತವು ಹೊಂದಿರುವ ಸರ್ವಾಂಗೀಣ ದ್ಯೋತಕಶಕ್ತಿಯು ಅಶಕ್ಕೆ ಇಲ್ಲ. ಋತವು ಭೌತಿಕ, ನೈತಿಕ, ಮತ್ತು ಆಚರಣೆಯ ಸಂಬಂಧಿ ನಿರ್ದಿಷ್ಟ ನಿಯಮಗಳನ್ನು ಒಳಗೊಂಡಿದೆ, ಆದರೆ ಅಶವು ಪ್ರಮುಖವಾಗಿ ನೈತಿಕ ಸಂಬಂಧಿ ಪರಿಕಲ್ಪನೆಯಾಗಿದೆ. ಮೂರನೆಯದಾಗಿ, 'ಅಶ'ಕ್ಕೆ ಆಗಾಗ್ಗೆ ದೇವತಾಸ್ಥಾನ ಕಲ್ಪಿಸಿರುವುದು ಉಂಟು; ಆದರೆ 'ಋತ'ವು ದೇವತೆಗಳನ್ನೆಲ್ಲಾ ಮೀರಿದ ಸ್ಥಾನ ಹೊಂದಿದೆ. ಬ್ಯಾಬಿಲೋನಿಯಾದ ಮಾರ್ಡುಕ್ ಮತ್ತು ಋಗ್ವೇದದ ವರುಣ ಅನೇಕ ಸಮಾನಾಂಶಗಳನ್ನು ಹೊಂದಿದ್ದಾರೆ. ಅಂತೆಯೇ, ವರುಣನ 'ಋತ' ಮತ್ತು ಮಾರ್ಡುಕ್‌ನ

‘ಇಶ್ತರ್’ ಒಂದೇ ಪ್ರಕಾರದ ಕಲ್ಪನೆಗಳು. ಅದನ್ನು ಇಲ್ಲಿ ವಿಸ್ತರಿಸುವುದು ಬೇಡ.

ಚೀಣಾದ ತತ್ವಶಾಸ್ತ್ರ ಪರಂಪರೆಯಲ್ಲಿ ತವೋ–ವಾದ ಎಂಬ ಒಂದು ಪ್ರಮುಖ ಶಾಖೆ ಇದೆ. ಲಾವೋ ತ್ಸೆ ಅಥವಾ ಲಾವೋ ತ್ಸು ಅದರ ಪ್ರವರ್ತಕ ಎನ್ನುತ್ತಾರೆ. ಅವನ ತತ್ವವು, ವಿಶ್ವದಲ್ಲಿ ವಸ್ತುಗಳು ಬದಲಾಗುವ ವಿಧಾನವನ್ನು ಕುರಿತಾದದ್ದು. ಅದರಲ್ಲೊಂದು ನಿರ್ದಿಷ್ಟ ನಿಯಮವಿದೆಯೆಂಬುದು ಅವನ ಅಭಿಮತವೂ ಆಗಿದೆ. “ವಸ್ತುಗಳು ಬದಲಾಗುತ್ತವೆ, ಆದರೆ ಬದಲಾವಣೆಯ ಹಿಂದಿನ ನಿಯಮವು ಬದಲಾಗುವುದಿಲ್ಲ; ಈ ನಿಯಮವನ್ನು ತಿಳಿದು, ವ್ಯಕ್ತಿಯು ತನ್ನ ನಡವಳಿಕೆಗೆ ಅದನ್ನು ನಿಯಮವನ್ನಾಗಿಸಿಕೊಂಡಾಗ ಎಲ್ಲವೂ ಅವನ ಹಿತವನ್ನು ಕಾಯುವಂಥವೇ ಆಗಿರುತ್ತವೆ.” ತವೋ ಸಿದ್ಧಾಂತದ ಮೂಲ ಪರಿಕಲ್ಪನೆ ಇದೆಂದು ಫುಂಗ್ ಯು–ಲಾನ್ ಸಂಗ್ರಹಿಸಿದ್ದಾನೆ. ಋತದ ವ್ಯಾಪ್ತಿಯಲ್ಲಿ ಇದು ಸೇರಿದೆಯೆಂದು ನಾವೀಗಾಗಲೆ ತಿಳಿದಿದ್ದೇವೆ. ‘ತವೋ’ ಎಂದರೆ “ಹಾದಿ.” ಅದೇ ಅರ್ಥವು ಋತದ್ದೂ ಆಗಿದೆ. ಎರಡೂ ನೈತಿಕ ಆಯಾಮವನ್ನು ಒಳಗೊಂಡ ಕಲ್ಪನೆಗಳೂ ಆಗಿವೆ.

ಖ್ಯಾತ ಮನೋವಿಜ್ಞಾನಿ ಸಿ. ಜಿ. ಯುಂಗ್ ತವೋ ಕಲ್ಪನೆಯ ಬಗ್ಗೆ ತನ್ನ *Psychological Types or the Psychology of Individuation* (ಅನುವಾದ : ಎಚ್. ಗಾಡ್ವಿನ್ ಬೇನ್ಸ್; ಲಂಡನ್, ೧೯೨೩, ಪು. ೨೬೪–೨೬೫) ಎಂಬ ಗ್ರಂಥದಲ್ಲಿ ಹೇಳಿರುವುದಿದು : “ತವೋ ಕಲ್ಪನೆಯು ವೈದಿಕ ಸಾಹಿತ್ಯದ ಋತಕ್ಕೆ ಸಮಾನವಾದದ್ದು. ತವೋ ಶಬ್ದಕ್ಕೆ ಈ ಕೆಳಗಿನ ಅರ್ಥಗಳಿವೆ : ಮಾರ್ಗ, ವಿಧಾನ, ತತ್ವ, ಪ್ರಕೃತಿ, ಶಕ್ತಿ, ಪ್ರಕೃತಿಯ ನಡತೆಯ ನಿಯಮ, ವಿಶ್ವವನ್ನು ಸೂಚಿಸುವ ಕಲ್ಪನೆ. ಪ್ರಕೃತಿಯ ಎಲ್ಲ ಸಂಗತಿಗಳಿಗೂ ಮೂಲ ಕಾರಣವೆಂದು ಗುರುತಿಸಲಾಗುವುದು ಸತ್ಯ, ಶಿವ, ಅಮರವಾದ ನೈತಿಕ ನಿಯಮ. ಕೆಲವು ಅನುವಾದಕರು ‘ತವೋ’ ಶಬ್ದವನ್ನು ‘ದೇವರು’ ಎಂದೂ ಅರ್ಥೈಸುತ್ತಾರೆ. ಅದು ಸರಿಯೂ ಹೌದು. ಏಕೆಂದರೆ, ‘ಋತ’ ಶಬ್ದಕ್ಕಿರುವಂತೆ ‘ತವೋ’ ಶಬ್ದಕ್ಕೆ ಸಹ ಗೋಚರಾನುಭವಗಳಿಗೆ ಆಧಾರವಾಗುವಂತಹ ವಾಸ್ತವಿಕ ಅಸ್ತಿತ್ವ ಎಂಬ ಛಾಯೆಯಿದೆ.” ತನ್ನ ಈ ಮಾತನ್ನು ರುಜುವಾತು ಮಾಡಲು ಯುಂಗ್ “ತವೋ–ತೇ–ಕಿಂಗ್” ಗ್ರಂಥದಿಂದ ಹಲವಾರು ಭಾಗಗಳನ್ನು ಉದ್ಧರಿಸಿ ಅವುಗಳನ್ನು ವ್ಯಾಖ್ಯಾನಿಸಿದ್ದಾನೆ. ಈ ಭಾಗಗಳಲ್ಲಿನ ಮಾತುಗಳು ‘ತವೋ’ ಮತ್ತು ‘ಋತ’ಗಳ ಸಮಾನ ವ್ಯಾಪ್ತಿಯನ್ನು ಹೇರಳವಾಗಿ ಪ್ರದರ್ಶಿಸುತ್ತವೆ. ಭಾರತೀಯ ತತ್ವಶಾಸ್ತ್ರದಲ್ಲಿ ಯಾವುದನ್ನು ‘ಧರ್ಮ’ ಎಂದು ಪರಿಗಣಿಸಲಾಗುತ್ತದೋ ಅದನ್ನು ಚೀಣಾದ ತತ್ವಶಾಸ್ತ್ರದಲ್ಲಿ ‘ತವೋ’ ಎಂದು ಕರೆಯಲಾಗಿದೆ. ಪದಾರ್ಥದ ‘ಧರ್ಮ’ ಎನ್ನುವುದು ‘ತವೋ.’ ಭಾರತೀಯ ಗ್ರಂಥಗಳನ್ನು ಚೀನೀ ಭಾಷೆಗೆ ಅನುವಾದಿಸುವಾಗ ‘ಧರ್ಮ’ ಎಂಬ ಪದವನ್ನು ‘ತವೋ’ ಎಂದು ಭಾಷಾಂತರಿಸುವುದು ಸರ್ವೇಸಾಮಾನ್ಯ. ವೈದಿಕ ಸಾಹಿತ್ಯದ ‘ಋತ’ ಸೂಚಿಸುವ ಅನೇಕ ಅರ್ಥಗಳನ್ನು ನಂತರದ ‘ಧರ್ಮ’ ಎಂಬ ಶಬ್ದವೂ ಅಳವಡಿಸಿಕೊಂಡಿದೆ ಎಂಬುದನ್ನಿಲ್ಲಿ ಗಮನಿಸಬಹುದು.

‘ತವೋ’ ಕಲ್ಪನೆಯ ಬೆಳವಣಿಗೆಯಲ್ಲಿ ಅನೇಕ ವಿರೋಧಾಭಾಸದ (ಅಂದರೆ, ಅಸಂಬದ್ಧವಾಗಿ ತೋರುವ, ಆದರೆ ನಿಜಕ್ಕೂ ಅಸಂಬದ್ಧವಲ್ಲದ) ಉಕ್ತಿಗಳು ಹೆಣೆದುಕೊಂಡಿವೆ. ಋತದ ಬೆಳವಣಿಗೆಯಲ್ಲಾದರೋ ಇದಕ್ಕೆ ಅವಕಾಶವಿಲ್ಲ. ಏಕೆಂದರೆ ಋತದ ವಿವಿಧಾರ್ಥಗಳನ್ನು ಸೂಚಿಸುವಂತಹ ಅನೇಕ ನೂತನ ಪದಗಳು ಹಾಗೂ ಕಲ್ಪನೆಗಳು ನಂತರದ ಸಾಹಿತ್ಯದಲ್ಲಿ ಪ್ರಯೋಗಕ್ಕೆ ಬಂದಿವೆ. ‘ತವೋ’ ಪದವನ್ನು ಕೈಬಿಡದೆಯೇ ಅದರ ಅರ್ಥವ್ಯಾಪ್ತಿಯನ್ನು ಬೆಳೆಸಿರುವುದು ಆ ಪದದ ಸಂದರ್ಭದಲ್ಲಿ ವಿರೋಧಾಭಾಸೋಕ್ತಿಗಳಿಗೆ ಎಡೆಮಾಡಿಕೊಟ್ಟಿದೆ ಎನ್ನಬಹುದು.

ಹಿಂದೆಯೇ ಪ್ರಸ್ತಾಪಿಸಿದ್ದಂತೆ, ಪ್ರಾಚೀನ ಸಮಾಜಗಳ ಸ್ವರೂಪವನ್ನು ಮೋರ್ಗನ್ ತನ್ನ “ಪ್ರಾಚೀನ ಸಮಾಜ” ಎಂಬ ಗ್ರಂಥದಲ್ಲಿ ಆಮೂಲಾಗ್ರವಾಗಿ ಪರಿಶೀಲಿಸಿ ಸಮರ್ಥವಾಗಿ ಪ್ರತಿಪಾದಿಸಿದ್ದಾನೆ. ಫ್ರೆಡರಿಕ್ ಎಂಗೆಲ್ಸ್ ತನ್ನ “ಕುಟುಂಬ, ಖಾಸಗಿ ಆಸ್ತಿ ಮತ್ತು ಪ್ರಭುತ್ವಗಳ ಉಗಮ” ಎಂಬ ಗ್ರಂಥದಲ್ಲಿ ಮೋರ್ಗನ್ನನ ಅಧ್ಯಯನಗಳ ಆಧಾರದ ಮೇಲೆ ಕೆಲವೊಂದು ಸಿದ್ಧಾಂತಗಳನ್ನು ಮಂಡಿಸುತ್ತಾ ಪ್ರಾಚೀನ ಬುಡಕಟ್ಟು ಸಮಾಜಗಳಲ್ಲೆಲ್ಲ ಎದ್ದುಕಾಣುತ್ತಿದ್ದ ಒಂದು ಗುಣವನ್ನು ಗುರುತಿಸಿದ್ದಾನೆ. ಅದನ್ನವನು “ಪ್ರಾಚೀನ ಕುಲೀನ ಸಮಾಜದ ಸರಳ ನೈತಿಕ ಗಾಂಭೀರ್ಯ” ಎಂದು ಬಣ್ಣಿಸಿದ್ದಾನೆ. ಋತ, ಅಶ ಮತ್ತು ತವೋ ಅಂತಹ ಗಾಂಭೀರ್ಯಸೂಚಕ ಪರಿಕಲ್ಪನೆಗಳು. ವಿಸ್ತೃತಾರ್ಥದಲ್ಲಿ ಈ ಮೂರು ಕಲ್ಪನೆಗಳೂ ಬೇರೆ ಅನೇಕ ತತ್ವಗಳನ್ನು ತಮ್ಮಲ್ಲಿ ಒಳಗೊಂಡರೂ ಮೂಲಭೂತವಾಗಿ ಅವು ಸೂಚಿಸಿದ್ದು ‘ಸರಳ ನೈತಿಕ ಗಾಂಭೀರ್ಯ’ವನ್ನು.

ಋತದಷ್ಟು ಪ್ರಧಾನ ಪರಿಕಲ್ಪನೆಯಲ್ಲದಿದ್ದರೂ ಪ್ರಾಚೀನ ಗ್ರೀಸಿನ ‘ಮೋಯಿರ’ ಎಂಬುದು ಅದರೊಡನೆ ಹೋಲಿಕೆಗೆ ಯೋಗ್ಯವಾಗಿದೆ. ಗ್ರೀಸಿನ ಸಾಹಿತ್ಯ ಹಾಗೂ ತತ್ವಶಾಸ್ತ್ರಗಳೆರಡರಲ್ಲೂ ಇದು ಸಾಕಷ್ಟು ಮಹತ್ವದ ಸ್ಥಾನ ಹೊಂದಿದೆ. ಒಂದರ್ಥದಲ್ಲಿ ‘ಮೋಯಿರ’ ಎಂಬುದು ಋತಕ್ಕಿಂತಲೂ ಪೂರ್ವ ಕರ್ಮಫಲದ ಕಲ್ಪನೆಗೆ ಹೆಚ್ಚು ಹತ್ತಿರವೆಂಬುದು ನಿಜ; ಏಕೆಂದರೆ, ಪ್ರಮುಖವಾಗಿ ಅದು ವ್ಯಕ್ತಿಯ ಜೀವನದಲ್ಲಿ ಅನಿವಾರ್ಯವಾಗಿ ಘಟಿಸಲೇ ಬೇಕಾದ ಸಂಗತಿಯನ್ನು ನಿರ್ದೇಶಿಸುತ್ತದೆ. ಗ್ರೀಸಿನ ಪ್ರಾಚೀನ ಸಾಹಿತ್ಯದಲ್ಲಿ ‘ಮೋಯಿರ’ ಹಲವು ವಿಧಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದ್ದರೂ ಅದರ ಮತ್ತು ದೇವತೆಗಳ ಪರಸ್ಪರ ಸಂಬಂಧವು ಖಚಿತವಾಗಿ ತಿಳಿಯುವುದಿಲ್ಲ. ಯಾವುದು ಬಲವತ್ತರ, ದೇವತೆಯ ಆಜ್ಞೆಯೋ ಅಥವಾ ‘ಮೋಯಿರ’ವೋ ? ಅಥವಾ, ಮೋಯಿರ ಸ್ವಾಯತ್ತವೋ ? ಹೆನ್ರಿ ಆಸ್ಬರ್ನ್ ಟೇಲರ್ ಗುರುತಿಸಿರುವಂತೆ ಕೆಲವೊಮ್ಮೆ ಮೋಯಿರ, ಇನ್ನು ಕೆಲವೇಳೆ ಝ್ಯೂಸ್ ದೇವತೆ ಹಿರಿಯ ಸ್ಥಾನ ಪಡೆಯುವುದುಂಟು. ‘ಮೋಯಿರ’ ಝ್ಯೂಸ್ ದೇವತೆಯ ಸಾಧನ ವೆಂಬಂತೆ ಚಿತ್ರಿತವಾಗಿರುವುದೂ ಉಂಟು. ವರುಣ ಮತ್ತು ಋತದ ಸಂದರ್ಭದಲ್ಲಿ ಇಂತಹ ಪ್ರಶ್ನೆಯೇ ಅಪ್ರಸ್ತುತ, ಏಕೆಂದರೆ ಋತವು ಯಾರ ಅಂಕೆಯಲ್ಲೂ ಇಲ್ಲ ಎಂಬುದನ್ನು ಋಗ್ವೇದದಲ್ಲಿ ಪದೇ ಪದೇ ಒತ್ತಿಹೇಳಲಾಗಿದೆ. ಬೆಟ್ಟಿ ಹೈಮನ್ ಹೇಳುವಂತೆ, ಹೋಮರನ ಮುಂಚಿನ ಚಿಂತಕರು ‘ಮೋಯಿರ’ ಎಂದರೆ ‘ಅಬಾಧಿತ ವಿಶ್ವ ನಿಯಮ’ ಎಂಬರ್ಥದಲ್ಲಿಯೇ ಅದನ್ನು ಬಳಸಿದ್ದಾರೆ. ಆಕೆ ಹೇಳುತ್ತಾಳೆ, “ಮೋಯಿರ ಆಗಲಿ, ಪ್ರಕೃತಿಯ ನಿಶ್ಚಿತ ನಡೆಯನ್ನು ಸೂಚಿಸುವ ‘ಅನಾಂಕೆ’ ಎಂಬುದಾಗಲಿ ಝ್ಯೂಸ್ ದೇವತೆಯ ಪರಿಧಿಗೆ ಸೇರುವುದಿಲ್ಲ” ಎಂದು. ಟೇಲರ್ ಪ್ರಕಾರ ಪ್ಲೇಟೋ, ತಿಯೋಗ್ನಿಸ್, ಪಿಂಡಾರ್ ಮುಂತಾದ ಪ್ರಾಚೀನ ಚಿಂತಕರು ‘ಮೋಯಿರ’ ಎಂಬುದು ದೇವತೆಗಳನ್ನು ಸಹ ನಿರ್ಬಂಧಿಸುವ ತತ್ವ ಎಂದೇ ಪ್ರತಿಪಾದಿಸಿದ್ದಾರೆ. ಋಗ್ವೇದದಲ್ಲಿ ‘ಋತ’




# ಫಕೀರನೊಬ್ಬನ ವ್ಯಥೆ

ಹುಚ್ಚೆದ್ದು ಕುಣಿವ ಫಕೀರನ ನಡುವೆ
ನನ್ನದೇನಿಲ್ಲವೆಂದು ಅಂದುಕೊಂಡಿಲ್ಲ
ಫಕೀರನೋ ಎಲ್ಲ ಹುಚ್ಚರನು ಕಂಡು
ತಬ್ಬಿಬ್ಬಾಗಿ ನಕ್ಕಿದ್ದನ್ನು ಕಂಡೆ

ಅವನಲ್ಲಾಗುವ ಬದಲಾವಣೆ ಲೋಕವನೆ
ತಿಳಿದಂತಾಗುತ್ತಿತ್ತು ಆತನ ದೃಷ್ಟಿಗೆ
ಒಳಗೊಳಗೆ ಏನೋ ಗೊಣಗಿದಂತೆ
ಒಮ್ಮೆ ಗಂಭೀರವಾಗಿ ಇನ್ನೊಮ್ಮೆ ಮುಗುಳ್ನಗುತ್ತಿದ್ದ

ಆಡಂಬರದ ಜೀವನ ಅಣಕಿಸುತ್ತ
ಲಾಭವು ಲವಲೇಶವು ಸುಖ
ಇರದ ಬದುಕು ಅಪ್ಪಿಕೊಳ್ಳುವುದ ಕಂಡು
ಬೇಸರಿಸುತ್ತಿದ್ದ

ಜಾತಿ–ವಿಜಾತಿಗಳ ವಿಂಗಡಿಸುವ ವಿಧಾನಕೆ
ಕೆಂಪುಸೂರ್ಯನ ಛಾಯೆ ಕಣ್ಣೊಳಗೆ
ಮೂಗು ಕಿವಿಗಳ ತುಂಬ ಬಿಸಿಯ ಹೊಗೆ
ಹೊರ ಹಾಕುತ್ತಿದ್ದ

ಬದುಕು ಅರ್ಥವಾಗದ ಜೀವನ ಕಲಿಯದ
ಪ್ರಪಂಚದಲ್ಲಿ ಕಣ್ಣು ತೆರೆಯದ ಈ ಮನುಷ್ಯರ
ಮತಿಗೆ ಮೌನದಲು ದುಃಖಿಸುತ್ತಿದ್ದ

ಹುಟ್ಟಬಾರದಿತ್ತು;
ಇಲ್ಲಿನ ಕಲ್ಲುಬಂಡೆ ಬೆಟ್ಟದ ಹಾಗೆ
ನಾನು ಒಬ್ಬನಾಗಿರಬೇಕಿತ್ತು
ಗಾಳಿ ನದಿ ನೀರಾಗಿಯಾದರೂ ಹರಿಯಬೇಕಿತ್ತು.

**ಅಕ್ಬರ್ ಸಿ. ಕಾಲಿಮಿರ್ಚಿ**, ಅಂಚೆ : ಭಾಗ್ಯನಗರ–೫೮೩೨೩೮ ಕೊಪ್ಪಳ ತಾಲೂಕು, ಜಿಲ್ಲೆ

ಎಂಬುದನ್ನೆಲ್ಲೂ ವಿಧಿ, ಪೂರ್ವ ನಿರ್ಧಾರಿತ ಭವಿಷ್ಯ, ಎಂಬರ್ಥದಲ್ಲಿ ಪ್ರಯೋಗಿಸಲಾಗಿಲ್ಲ. ಹಣೆಬರಹದ ಕಲ್ಪನೆಯು ಋಗ್ವೇದಕ್ಕೆ ಹೊರತಾದದ್ದು. ಹಾಗಿದ್ದರೆ ಇವೆರಡರ ಸಾಮ್ಯ ಏನು ? "ವಿಶ್ವದಲ್ಲಿ ನಿಯಮಿತವಾಗಿ, ಅಗತ್ಯವಾಗಿ, ಜರುಗುವ ವಿದ್ಯಮಾನ" ಎಂಬುದು ಎರಡೂ ತತ್ವಗಳ ಸಾರವೆಂಬುದೇ ಅವೆರಡರ ನಡುವಣ ಸಾಮ್ಯ. ಋತವು ಪ್ರಮುಖವಾಗಿ ವಿಶ್ವದ ನಡೆಗೆ ಅನ್ವಯಿಸುತ್ತದೆ, ಆದರೆ ಮೋಯಿರ ಅದನ್ನೂ ಒಳಗೊಂಡು, ಮಾನವ ಜೀವನ ಮತ್ತು ಅಲ್ಲಿಯ ಘಟನೆಗಳಿಗೆ ಸಹ ಅನ್ವಯವಾಗುತ್ತದೆ. ಪ್ರಕೃತಿಯ ನಿಯಮಬದ್ಧತೆಯನ್ನು ಋತವು ಸೂಚಿಸುವಷ್ಟು ಗಾಢವಾಗಿ ಮೋಯಿರ ಸೂಚಿಸುವುದಿಲ್ಲ. ಪ್ರಕೃತಿಯಲ್ಲಿನ ಚಲನೆ ಸಹ 'ವಿಧಿ'ಯ ಆಣತಿಯೇ ಆಗಿದೆ ಯೆಂಬಂತೆ ಮೋಯಿರಾದ ವ್ಯಾಪ್ತಿಯನ್ನು ಕೆಲವೇಳೆ ಹಿಗ್ಗಿಸಲಾಗಿರುವುದು ಗ್ರೀಸ್‌ನ ತತ್ವಶಾಸ್ತ್ರದ ವಿಶೇಷ; ಇದಕ್ಕೆ ಸರ್ವಥಾ ಅಪವಾದವೆಂದರೆ ಋತ ಎನ್ನಬಹುದು, ಏಕೆಂದರೆ ಅದೊಂದು ಸ್ವಾಯತ್ತ ಭೌತಿಕ ತತ್ವವನ್ನು ಸೂಚಿಸುವಂಥದು. ಜ್ಯೂಸ್ ಮತ್ತು ಮೋಯಿರ ನಡುವಣ ಸಂಬಂಧವು ವರುಣ ಮತ್ತು ಋತದ ಸಂಬಂಧಕ್ಕೆ ಸಮಾನವಾದುದೆಂದು ಟೇಲರ್ ತರ್ಕಿಸಿರುವುದು ಅಬದ್ಧವಾದುದೇನಲ್ಲ; ಏಕೆಂದರೆ ಮೋಯಿರ ಎಂಬುದಕ್ಕೆ ಪ್ರಕೃತಿ ನಿಯಮ, ಸರಿಯಾದ ಹಾದಿ, ನೈತಿಕ ನಡಾವಳಿ, ಎಂಬರ್ಥಗಳೂ ಇವೆ. ಹೋಮರನ ಇಲಿಯಡ್‌ನಲ್ಲಿ ಮಾತೊಂದು ಹೀಗಿದೆ (I. ೨೮೬) : "ಮೋಯಿರಕ್ಕೆ ಅನುಗುಣವಾಗಿ ಮಾತನಾಡುವುದೆಂದರೆ ಯಾವುದು ಸರಿಯೋ, ನ್ಯಾಯಯುತವೋ, ಅದನ್ನು ಹೇಳುವುದು." ಓಡಿಸ್ಸಿಯಲ್ಲಿ (IX. ೩೫೨) ಒಡಿಸ್ಸಿಯಸ್ ಪಾಲಿಫೀಮಸ್‌ನನ್ನು ಛೇಡಿಸುವಾಗ ಅವನು ತನ್ನ ಅಧೀನದಲ್ಲಿರುವವರನ್ನು ಹೀನಾಯವಾಗಿ ನಡೆಸಿಕೊಳ್ಳುತ್ತಾನೆಂದು ದೂಷಿಸುತ್ತಾನೆ; ಪಾಲಿಫೀಮಸ್‌ನ ನಡತೆಯು ಮೋಯಿರಕ್ಕೆ ವಿರುದ್ಧವಾದುದೆಂದು ಅವನೆನ್ನುತ್ತಾನೆ. ಅಂತಹ ನಡತೆಯನ್ನು ಋಗ್ವೇದವು 'ಋತ ವಿರೋಧಿ' ಎನ್ನುತ್ತದೆ. ಎರಡೂ ಪ್ರಸಂಗಗಳಲ್ಲಿ ಪ್ರಾಚೀನ ಬುಡಕಟ್ಟು ನೀತಿಯ ಪ್ರತಿಫಲನವಿದೆ ಎಂಬುದನ್ನು ಗಮನಿಸಬಹುದು.

ಪ್ರಾಚೀನ ಗ್ರೀಸ್‌ನ ಸಾಹಿತ್ಯ ಮತ್ತು ತತ್ವಶಾಸ್ತ್ರಗಳಲ್ಲಿ 'ಲೋಗಸ್' ಎಂಬ ಇನ್ನೊಂದು ಪರಿಕಲ್ಪನೆಯ ಪ್ರಸ್ತಾಪ ಬರುತ್ತದೆ. ಮೋಯಿರದಷ್ಟು ಗಾಢವಾಗಿ ಅಲ್ಲದಿದ್ದರೂ ಅದು ಸಹ ಋತದೊಡನೆ ಸ್ವಲ್ಪ ಸಾಮ್ಯವನ್ನು ಹೊಂದಿದೆ. ಮತಧರ್ಮ ಮತ್ತು ನೈತಿಕತೆಯ ವಿಶ್ವಕೋಶ (ಸಂ. ಜೆ. ಹೇಸ್ಟಿಂಗ್ಸ್, ಎಡಿನ್‌ಬರೊ)ದಲ್ಲಿ ನೀಡಲಾಗಿರುವ 'ಲೋಗಸ್' ಕುರಿತ ವಿವರಣೆಯ ಸಾರಾಂಶವನ್ನಿಲ್ಲಿ ದಾಖಲಿಸುವುದು ಉಚಿತವೆನಿಸುತ್ತದೆ : ವರ್ಡ್ಸ್‌ವರ್ತ್ ತನ್ನ ಒಂದು ಕವನದಲ್ಲಿ (Ode to Duty) 'ಕರ್ತವ್ಯ' ಎಂಬುದನ್ನು ಅತಿ ವ್ಯಾಪಕವಾಗಿ ವ್ಯಾಖ್ಯಾನಿಸುವಾಗ ಅದು "ನಕ್ಷತ್ರಗಳನ್ನು ಅವುಗಳ ಆಯಾಯ ಪಥಗಳಲ್ಲಿ ನಿರ್ದಿಷ್ಟವಾಗಿ ಚಲಿಸುವಂತೆ ಮಾಡುವ ನಿಯಮ ಅಥವಾ ತತ್ವ" ಎಂದಿದ್ದಾನೆ. ವಿಶ್ವದ ಅನೇಕ ಸಂಘರ್ಷಗಳ ನಡುವೆಯೂ ಒಂದು ಗುಪ್ತ ಸಾಮರಸ್ಯ ಅಡಕವಾಗಿದೆ. ಅದು 'ಲೋಗಸ್.' ಹೆರಾಕ್ಲಿಟಸ್‌ನಂತಹ ತತ್ವಜ್ಞಾನಿಯು ಯಾವ ಅಪರೋಕ್ಷ ದೇವತೆಯನ್ನೂ ಕಲ್ಪಿಸಿಕೊಳ್ಳಲಿಲ್ಲ. ಹಾಗೇನಾದರೂ ದೇವತೆ ಇದ್ದರೆ, 'ಲೋಗಸ್' ಅವನ ಅಥವಾ ಅವಳ ನಿಯಂತ್ರಣದಲ್ಲಿ ಇರುವಂಥದಲ್ಲ. ...ಅನಾಕ್ಸಗೋರಸ್ ಎಂಬ ತತ್ವಜ್ಞಾನಿಯು 'ಲೋಗಸ್' ಎಂದರೆ 'ವಿಶ್ವವನ್ನು ನಿಯಂತ್ರಿಸುವ ನಿಯಮ' ಎನ್ನುತ್ತಾನೆ ಮತ್ತು ಅದು ದೇವತೆ ಮತ್ತು ವಿಶ್ವದ ನಡುವಣ ತತ್ವವೆಂದು ನಿರೂಪಿಸುತ್ತಾನೆ. ಅವನ ಪ್ರಕಾರ ಅದು 'ದಿವ್ಯ ಪ್ರಜ್ಞೆ.' ಸ್ಟೋಬಿಯಸ್ ಎಂಬ ತತ್ವಜ್ಞಾನಿಯು ಹೇಳುವಂತೆ 'ವಿಶ್ವದ ಲೋಗಸ್ ಏನಿದೆಯೋ ಅದೇ ಮೋಯಿರ.' ಅದನ್ನು ಪ್ರಕೃತಿಯ ಸತ್ಯ, ಪ್ರಕೃತಿಯು ಅವಶ್ಯವಾಗಿ ಅನುಸರಿಸುವ ನಿಯಮ, ಎಂಬರ್ಥದಲ್ಲಿ ಕ್ರೆಸಿಪಸ್ ಬಳಸುತ್ತಾನೆ. ಇದು ಋತಕ್ಕೆ ಸಾಕಷ್ಟು ಹತ್ತಿರವೆನಿಸುವ ತತ್ವವೆಂದರೆ ತಪ್ಪಾಗದು.

ಪ್ರಕೃತಿಯ ತತ್ವವನ್ನು ಋಗ್ವೇದವು ಎಷ್ಟು ಪ್ರಮುಖವೆಂದು ಮನಗಂಡಿದೆ ಎಂಬುದು 'ಋತ'ದ ಬಹುಮುಖೀ ಪರಿಕಲ್ಪನೆಯಲ್ಲಿ ಅಡಕಗೊಂಡಿದೆ. ವಿಸ್ಮಯದಿಂದ ವಿಜ್ಞಾನದತ್ತ ಹೆಜ್ಜೆ ಹಾಕಲು 'ಋತ' ಒಂದು ಸಾಧನೆ. ಪ್ರಕೃತಿ ಯೊಡನೆ ಬಾಳುವೆ ನಡೆಸಲು ಆರಂಭವಾದಾಗಲೇ ವಿಜ್ಞಾನವೂ ಅಂಕುರಿಸುತ್ತದೆ. ಋಗ್ವೇದದಲ್ಲಿ ಅಂತಹ ಅನುಭವದ ಕಾಣ್ಕೆ ಇದೆ, ಅದು ಋತದಿಂದ ಪ್ರತಿನಿಧಿಸಲ್ಪಟ್ಟಿದೆ.

ಮುಂದಿನ ಕಂತಿನಲ್ಲಿ ನೇರವಾಗಿ ನಾವು ಮತ್ತೆ ಋಗ್ವೇದಕ್ಕೆ ಹಿಂದಿರುಗೋಣ.

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಕರ್ನಾಟಕ ಏಕೀಕರಣ ಚಳವಳಿಯ ಹಿನ್ನೆಲೆಯಲ್ಲಿ ಇಂದು ಕರ್ನಾಟಕದ ಸ್ಥಿತಿಗತಿ

ಕರ್ನಾಟಕ ಏಕೀಕರಣವಾಗುವುದಕ್ಕಿಂತ ಮುಂಚೆ, ಭಾರತಕ್ಕೆ ಸ್ವಾತಂತ್ರ್ಯ ಬರುವುದಕ್ಕಿಂತ ಹಿಂದೆ ಕನ್ನಡ ಮಾತನಾಡುವ ಜನರು ಬ್ರಿಟಿಷ್ ಕರ್ನಾಟಕ ದೇಶೀಯ ಸಂಸ್ಥಾನಗಳಲ್ಲಿ ಕನ್ನಡೇತರ ಭಾಷೆಗಳ ಪ್ರಾಬಲ್ಯದಲ್ಲಿದ್ದ ಭಿನ್ನ–ಭಿನ್ನ ಆಡಳಿತೆಯ ಕೆಳಗೆ ಛಿದ್ರ ವಿಚ್ಛಿದ್ರವಾಗಿದ್ದ ಭೂ ಭಾಗಗಳನ್ನು ಒಂದುಗೂಡಿಸಿ ಮಾತೃಭಾಷೆಯಲ್ಲಿಯೆ ಶಿಕ್ಷಣ ಪಡೆಯುವ, ಆಡಳಿತ ನಡೆಸುವ ಕನ್ನಡಿಗರ ಆರ್ಥಿಕ ಅಭಿವೃದ್ಧಿಯನ್ನು, ಜೀವನೋಪಾಯಗಳನ್ನು ಪಡೆದುಕೊಳ್ಳುವುದಕ್ಕಾಗಿ ಏಕೀಕರಣ ಚಳವಳಿ ಪ್ರಾರಂಭಿಸಲಾಗಿತ್ತು.

ಬ್ರಿಟಿಷ್ ಆಡಳಿತೆ ಕನ್ನಡಿಗರ ಈ ಬೇಡಿಕೆಗೆ ಅಷ್ಟೇನೂ ಗಮನ ಕೊಡಲಿಲ್ಲ. ಆದರೂ ಅದು ಕನ್ನಡಿಗರು ಮಾತೃಭಾಷೆಯಲ್ಲಿ ಶಿಕ್ಷಣ ಪಡೆಯ ಬೇಕೆಂಬ ಅವರ ಬೇಡಿಕೆಯ ಔಚಿತ್ಯವನ್ನು ಗಮನಿಸಿದರು. ಬ್ರಿಟಿಷ್ ಆಡಳಿತೆಯ ಕಾಲದಲ್ಲಿ ಪ್ರಾಥಮಿಕ ಶಿಕ್ಷಣವನ್ನು ಮಾತೃಭಾಷೆಯಲ್ಲಿಯೆ ಕೊಡುವ ತಕ್ಕಮಟ್ಟಿಗೆ ಉತ್ತಮವಾದ ಪದ್ಧತಿಯನ್ನು ಆಚರಣೆಯಲ್ಲಿ ತಂದಿದ್ದರು. ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ವಿವಿಧ ಜನಾಂಗದಿಂದ ಕೂಡಿದ ಪ್ರಾಂತ್ಯಗಳಲ್ಲಿ ಅವರವರ ಭಾಷೆಯಲ್ಲಿ ಆಜ್ಞೆ, ಪರಿಪತ್ರ ಇತ್ಯಾದಿಗಳನ್ನು ಕೊಡುತ್ತಿದ್ದರು. ಆದರೂ ಅದು ಸಮರ್ಪಕವಾಗಿರಲಿಲ್ಲ. ಅಧಿಕಾರಶಾಹಿತ್ವವೂ ತಮ್ಮ ಮಾತೃಭಾಷೆಯಲ್ಲಿಯೆ ಆಡಳಿತೆಯನ್ನು ಮುಂದುವರಿಸಿದ್ದವು. ಕನ್ನಡಿಗರಿಗೆ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿರಲಿಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಭಾರತೀಯರಲ್ಲೂ, ಕನ್ನಡಿಗರಲ್ಲೂ ಭಾಷಾವಾರು ಪ್ರಾಂತರಚನೆಗಳ ಬಗ್ಗೆ ತೀವ್ರತರವಾದ ಚಳವಳಿ, ಆಂದೋಲನ ನಡೆಯಲಿಲ್ಲ. ಏಕೆಂದರೆ ಆಗಿನ ಅತ್ಯಂತ ತುರ್ತು ಅಗತ್ಯ ಭಾರತದ ಸ್ವಾತಂತ್ರ್ಯ ಆಗಿದ್ದರಿಂದ ಸ್ವಾತಂತ್ರ್ಯಪೂರ್ವದಲ್ಲಿ ಭಾಷಾವಾರು ಪ್ರಾಂತ್ಯಗಳು ರಚನೆಯಾಗಲಿಲ್ಲ. ಹಾಗಾದರೆ ಸ್ವಾತಂತ್ರ್ಯಾ ನಂತರ ಭಾಷಾವಾರು ಪ್ರಾಂತ್ಯಗಳಾಗುವುದಕ್ಕೆ ಅಡ್ಡಿಯೇಕೆ? ಆಗ ಭಾಷಾವಾರು ಪ್ರಾಂತ್ಯ ರಚನೆ ಚಳವಳಿ, ತತ್ರಾಪಿ ಕರ್ನಾಟಕ ಏಕೀಕರಣ ಚಳವಳಿ ಉಗ್ರಸ್ವರೂಪ ತಳೆಯಿತು. ತತ್ಪರಿಣಾಮ ೧೯೫೬ನೇ ನವೆಂಬರ್ ೧ರಂದು ಭಾಷಾವಾರು ಪ್ರಾಂತ್ಯ ರಚನೆಗಳಾದವು. ಕನ್ನಡ ಮಾತನಾಡುವ ಜನರ ಪ್ರದೇಶಗಳನ್ನು ಒಂದುಗೂಡಿಸಿ ಒಂದು ರಾಜ್ಯ ರಚನೆ ಮಾಡಿದರೂ ಅದು ಕರ್ನಾಟಕವೆಂದೆನಿಸಿಕೊಳ್ಳಲಿಲ್ಲ. 'ಮೈಸೂರು' ಎಂಬ ಹೆಸರಿನಲ್ಲಿ ಅಸ್ತಿತ್ವಕ್ಕೆ ಬಂತು. ಈ ಪ್ರದೇಶಕ್ಕೆ 'ಕರ್ನಾಟಕ'ವೆಂದು ನಾಮಕರಣ ಮಾಡಲು ೧೮ ವರ್ಷ ಹಿಡಿಯಿತು. ಹೆಸರೇನೊ ಕರ್ನಾಟಕ ವಾಯಿತು. ಆದರೆ ಸಂಪೂರ್ಣವಾಗಿ ಕನ್ನಡ ಉಸಿರಾಗಲಿಲ್ಲ. ಸ್ವಾತಂತ್ರ್ಯದ ನಂತರ ಕನ್ನಡಿಗರಿಗೆ ಬಂದ ಸಂಕಟ ಇದು. ಅಂದರೆ ಒಂದು ಅರ್ಥದಲ್ಲಿ ಕರ್ನಾಟಕ ಏಕೀಕರಣದ ಪೂರ್ವದಲ್ಲಿ ಕನ್ನಡ ಭಾಷೆ, ಕನ್ನಡ ಶಿಕ್ಷಣಕ್ಕಿದ್ದ ದುಸ್ಥಿತಿಯೇ ಮುಂದುವರಿಯುತ್ತಾ ಬಂತು.

ಮೊಟ್ಟಮೊದಲು ಪ್ರಾಥಮಿಕ ಶಿಕ್ಷಣ ಹಂತದಲ್ಲಿ ಸಂಪೂರ್ಣವಾಗಿ ಕನ್ನಡ ಬರಲಿಲ್ಲ. ಅಷ್ಟೆ ಅಲ್ಲ, ಕಳೆದ ಎರಡು ವರ್ಷಗಳಿಂದ ಇದ್ದ ಕನ್ನಡ ಶಾಲೆಗಳನ್ನೆ ಮುಚ್ಚ ಬೇಕೆಂದು ಕರ್ನಾಟಕ ಸರ್ಕಾರವೆ ನಿರ್ಧರಿಸಿದೆ. ಅಂದ ಮೇಲೆ ಕರ್ನಾಟಕ ಏಕೀಕರಣವಾದದ್ದು ಯಾವ ಸಂಪತ್ತಿಗೆ? ಏಕೀಕರಣದ ಮುಖ್ಯೋದ್ದೇಶವನ್ನು ಈಡೇರಿಸಿಕೊಳ್ಳಲು ಕನ್ನಡಿಗರ ಏಕಮಾತ್ರ ಪ್ರಾತಿನಿಧಿಕ ಸಂಸ್ಥೆಯಾದ 'ಕನ್ನಡ ಸಾಹಿತ್ಯ ಪರಿಷತ್ತು' ಆಗಲಿ, ಅದರ ೧.೯ ಲಕ್ಷ ಜನ ಸದಸ್ಯರಾಗಲಿ ಪ್ರತಿವರ್ಷ ಕರ್ನಾಟಕ ಸರ್ಕಾರದಿಂದ ೫ ಕೋಟಿ ಧನ ಸಹಾಯ ಪಡೆಯುತ್ತಿರುವ, ಬೃಹದಾಕಾರವಾಗಿ ಬೆಳೆದಿರುವ ಸಂಸ್ಥೆ ಪ್ರಾಥಮಿಕ ಶಿಕ್ಷಣದ ಅವಶ್ಯಕತೆ ಬಗ್ಗೆ ಏನು ಕೆಲಸ ಮಾಡಿದೆ? ದಿನಾಂಕ ೨೯–೦೯–೨೦೧೩ರ ಸಂದರ್ಭದಲ್ಲಿ ಪ್ರಕಟಿಸಿದ '೯೭ನೆಯ ವಾರ್ಷಿಕಾಧಿವೇಶನದ ವಾರ್ಷಿಕ ವರದಿಯ' ೧೬೬ ಪುಟಗಳ ಸುದೀರ್ಘ ವರದಿಯಲ್ಲಿ ಕನ್ನಡ ಪ್ರಾಥಮಿಕ ಶಿಕ್ಷಣದ ಬಗ್ಗೆ ಕೈಗೊಂಡ ಪ್ರಯಾಸದ ಕಥನ ಎಲ್ಲಿಯೂ ಕಂಡು ಬರುವುದಿಲ್ಲ. ಸರ್ಕಾರದ ಧನ ಸಹಾಯದಿಂದ ನಡೆಯುವ ಈ ಸಂಸ್ಥೆಯು ಸರ್ಕಾರದ ವಿರುದ್ಧವಾಗಿ ಮಾತೆತ್ತುವುದು, ಒತ್ತಾಯ ಮಾಡುವುದು ಅಸಾಧ್ಯ. ಏನಿದ್ದರೂ ಖಾಸಗಿ ಸಂಘ–ಸಂಸ್ಥೆಗಳು ಈ ಕೆಲಸವನ್ನು ಮಾಡಬೇಕು. ಆದರೆ ಕನ್ನಡ, ಕರ್ನಾಟಕದ ದುರ್ದೈವ ಇದೂ ಸಾಧ್ಯವಾಗಿಲ್ಲ. ಕರ್ನಾಟಕದಲ್ಲಿ ಪ್ರತಿವರ್ಷ

**ಕೋ. ಚೆನ್ನಬಸಪ್ಪ**

ರಾಜ್ಯೋತ್ಸವವನ್ನು ವಿಜೃಂಭಣೆಯಿಂದ ಅದ್ಧೂರಿಯಿಂದ ಆಚರಿಸಲಾಗುತ್ತಿದೆ. ಬೀದಿಗೊಂದು 'ರಾಜ್ಯೋತ್ಸವ ಸಮಿತಿ'ಗಳು ಸ್ಥಾಪನೆಯಾಗಿ ಅದರ ಮೂಲಕ ಸಾಹಿತಿಗಳ ಮತ್ತು ಕಲಾವಿದರ ಸನ್ಮಾನ ನಡೆಯುತ್ತಿದೆ. ನಟ–ನಟಿಯರ ಸನ್ಮಾನ, ಪುತ್ಥಳಿ ಸ್ಥಾಪನೆ, ಸಮಾಧಿ ನಿರ್ಮಾಣ ಅಪಾರ ವೆಚ್ಚದಲ್ಲಿ ಸರ್ಕಾರದ ಸಹಾಯದಿಂದ ನಡೆಯುತ್ತಿದೆ. ಆದರೆ ಈ ಸಂಘ–ಸಂಸ್ಥೆಗಳು ಕನ್ನಡ ಶಿಕ್ಷಣ ಮಾಧ್ಯಮದಲ್ಲಿ ಎಷ್ಟು ಶಾಲೆಗಳನ್ನು ಸ್ಥಾಪಿಸಿದ್ದಾರೆ ? ಎಷ್ಟು ವಿದ್ಯಾರ್ಥಿಗಳನ್ನು ಶಾಲೆಗೆ ಕರೆತಂದಿದ್ದಾರೆ ? ಎಷ್ಟು ಸೌಕರ್ಯ ಕಲ್ಪಿಸಿದ್ದಾರೆ ಎಂಬುದರ ಮಾಹಿತಿ ಯಾರಿಗೂ ಕಿಂಚಿತ್ತೂ ಸಿಗುತ್ತಿಲ್ಲ. ಇದು ಖಾಸಗಿ ಸಂಘ–ಸಂಸ್ಥೆಗಳ ಕನ್ನಡಪರ ಸೇವೆಯ ದುರಂತ. ಈ ಸಂಘ–ಸಂಸ್ಥೆಗಳಲ್ಲಿ ನನಗೆ ತಿಳಿದಮಟ್ಟಿಗೆ ಬೆಂಗಳೂರಿನಲ್ಲಿರುವ ಕನ್ನಡಪರ ಸಂಘ–ಸಂಸ್ಥೆಗಳು ಧನಸಂಗ್ರಹ ಕಾರ್ಯದಲ್ಲಿಯೆ ತೊಡಗಿವೆ. ಈ ಸಂಘ–ಸಂಸ್ಥೆಗಳು ತೃಪ್ತಿಕರವಾಗಿ ಮಾಡದ ಕೆಲಸವನ್ನು ನಾನು–ತಾನೆಂದು ವಿಜೃಂಭಿಸುವ ಮಹಾ ಸಾಹಿತಿಗಳಿಂದಾಗಲಿ, ಖಾಸಗಿ ವಿದ್ಯಾಸಂಸ್ಥೆಗಳಿಂದಾಗಲಿ ನೆರವೇರಿದೆಯೆ ? ಖಾಸಗಿ ವಿದ್ಯಾಸಂಸ್ಥೆಗಳು ಕರ್ನಾಟಕದಲ್ಲಿ, ಅದರಲ್ಲಿಯೂ ಬೆಂಗಳೂರಿನಲ್ಲಿ ಇತ್ತೀಚೆಗೆ ಜಿಲ್ಲಾ ಕೇಂದ್ರಗಳಲ್ಲಿ, ತಾಲ್ಲೂಕು ಕೇಂದ್ರಗಳಲ್ಲಿ, ಹೋಬಳಿ ಮಟ್ಟದಲ್ಲಿ ಇಂಗ್ಲಿಷ್ ಮಾಧ್ಯಮದ ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸಿ ಅದರಿಂದ ಶ್ರೀಮಂತರಾಗುವ ವಿದ್ಯಾವರ್ತಕ (ವಿದ್ಯಾವರ್ಧಕವಲ್ಲ) ಸಂಸ್ಥೆಗಳೆ ಆಗಿವೆ. ಅಂಥ ಶಾಲೆಗಳನ್ನು ನಡೆಸುವವರಲ್ಲಿ ಕನ್ನಡೇತರರೆ ಬೆಂಗಳೂರಿನಲ್ಲಿ ಬಹುಸಂಖ್ಯಾತರಾಗಿರುವುದು ಎಲ್ಲರಿಗೂ ಗೊತ್ತಿರುವ ವಿಚಾರ. ಕೆಲವರು ಕರ್ನಾಟಕದ ರಾಜಕೀಯ ಮುಖಂಡರು ಇದ್ದಾರೆ. ಮಠಾಧೀಶರು ಇದ್ದಾರೆ. ಆದರೂ ಕನ್ನಡ ಉಸಿರುಕಟ್ಟಿ ಗೊರಗೊರ ಎಂಬ ಸ್ಥಿತಿ ಮುಟ್ಟಿದೆ. ಇದು ಕರ್ನಾಟಕದಲ್ಲಿ ಕನ್ನಡಕ್ಕೊದಗಿದ ದುಸ್ಥಿತಿ.

ಹಾಗಾದರೆ ಕನ್ನಡ ಶಿಕ್ಷಣ ಉದ್ಧಾರಕ್ಕಾಗಿಯೆ ರಚನೆಯಾದ ಕರ್ನಾಟಕ ಸರ್ಕಾರವಾದರೂ ಕನ್ನಡವನ್ನು ಉಳಿಸುವ ಪ್ರಯತ್ನ ಏಕೆ ಮಾಡಬಾರದು ? ಇದು ನಮ್ಮ ಪ್ರಶ್ನೆ. ಈ ಪ್ರಶ್ನೆಗೆ ಉತ್ತರವನ್ನು ಹುಡುಕುವುದು ಕೇವಲ ವ್ಯರ್ಥ ಸಾಹಸ. ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಶಿಕ್ಷಣ ಮಾಧ್ಯಮದ ವಿಚಾರವಾಗಿ ಆಂಗ್ಲ ಅಧಿಕಾರಿ ಗಳಿಗೆ ಅಥವಾ ಕನ್ನಡೇತರ ಮಂತ್ರಿಗಳಿಗೆ ವಿನಂತಿಯನ್ನು ಕಳಿಸಿದಾಗ ಅವರು ಮನವಿ ಮಾಡಿಕೊಂಡವರಿಗೆ ಖುದ್ದಾಗಿ ಉತ್ತರಗಳನ್ನು – ಇಂತಹ ಕ್ರಮಕೈಗೊಳ್ಳಲಾಗಿದೆ ಅಥವಾ ಏಕೆ ಕೈಗೊಳ್ಳಲಾಗುವುದಿಲ್ಲ ಎಂಬುದನ್ನು ಮನವಿದಾರರಿಗೆ ತಿಳಿಸುತ್ತಿದ್ದರು. ಆದರೆ ಕರ್ನಾಟಕದ ಉದ್ಧಾರಕ್ಕಾಗಿಯೆ ಅಸ್ತಿತ್ವದಲ್ಲಿ ಬಂದ ಸರ್ಕಾರ ಮನವಿ ಮಾಡಿಕೊಂಡವರಿಗೆ ತಾವೆ ಉತ್ತರ ಕೊಡುವುದಿಲ್ಲ. ತಮ್ಮ ಕಚೇರಿಯ ಗುಮಾಸ್ತರ ಮೂಲಕ ಉತ್ತರ ಕಳಿಸುತ್ತಾರೆ. ಆ ಉತ್ತರದಲ್ಲಿಯಾದರೂ ಏನಿದೆ ? 'ನಿಮ್ಮ ಮನವಿಯನ್ನು ಇಂಥ ಕಾರ್ಯದರ್ಶಿಗಳಿಗೆ/ಆಯುಕ್ತರಿಗೆ/ಅಧಿಕಾರಿಗಳಿಗೆ ಪರಿಶೀಲನೆಗಾಗಿ ಕಳಿಸಲಾಗಿದೆ. ಮುಂದೆ ಅವರನ್ನು ಸಂಪರ್ಕಿಸಿ.' ಇದು ಮಂತ್ರಿ ಮಹೋದಯರ ಪ್ರಸಾದ ವಾಣಿ. ಈ ಉತ್ತರವನ್ನು ನೋಡಿದಾಗ ಇದು ಕರ್ನಾಟಕವನ್ನು ಉಳಿಸುವ ಸರ್ಕಾರವೊ ? ಕನ್ನಡವನ್ನು ಉರುಳಿಸುವ ಸರ್ಕಾರವೋ ಎಂಬುದು ತಿಳಿಯುವುದಿಲ್ಲ. ಇದನ್ನು ನೆನೆದಾಗ ಕನ್ನಡಕ್ಕಾಗಿ ಪ್ರಾಣ ತೆತ್ತವರ ತ್ಯಾಗ ವ್ಯರ್ಥವಾಯಿತಲ್ಲ ಎಂಬ ವ್ಯಥೆ. ಇದು ಕರ್ನಾಟಕ ರಾಜ್ಯ ನಿರ್ಮಾಣೋತ್ತರ ಸರ್ಕಾರದ ಧೋರಣೆ.

ಕರ್ನಾಟಕದಲ್ಲಿಯೆ ಕನ್ನಡದ ಪರಿಸ್ಥಿತಿ ಹೀಗಿರುವಾಗ ಕರ್ನಾಟಕದ ಹೊರಗಿರುವ ಕನ್ನಡಿಗರ ಸ್ಥಿತಿಗತಿ ಏನೆಂಬುದನ್ನು ಹೇಳುವುದೆ ಬೇಡ. ಹಿಂದೆ ಕರ್ನಾಟಕದ ಗಡಿಯಲ್ಲಿ ಕೆಲಸ ಮಾಡುವ ಕಾರ್ಯಕರ್ತರು ಅನುಭವಿಸುತ್ತಿದ್ದ ವ್ಯಥೆಯನ್ನು ಈಗ ಅನಂತಪುರ ಜಿಲ್ಲೆಯಲ್ಲಿರುವ, ಆಗ ಬಳ್ಳಾರಿ ಜಿಲ್ಲೆಯ ತಾಲ್ಲೂಕು ಆಗಿದ್ದ 'ರಾಯದುರ್ಗ'ದಲ್ಲಿ ಕೆಲಸ ಮಾಡುತ್ತಿದ್ದ ಮುಕುಂದಪ್ಪನವರು ಬರೆದ ಒಂದು ಪತ್ರದ ವಾಕ್ಯ ಹೀಗಿದೆ :

On 3rd Dec. myself ond Mr. Nippani set on foot and covered the above villages returning to Rayadrug night 9 P.M. from Badanahalu station a distance of about 15 miles in all. ..........................

We request you to kindly cause the supply of a Cycle so that we finish the work more quickly.

Yours Sincerely,
(Sd) Mukundappa

ಅದೇ ಮುಕುಂದಪ್ಪನವರು ದಿನಾಂಕ ೨೭–೧೨–೧೯೪೭ರಂದು ಬರೆದ ಪತ್ರ ಹೀಗಿದೆ :

ರಾಯದುರ್ಗ
೨೭–೧೨–೪೭

**ಮ॥ರಾ॥ರಾ॥ ಶ್ರೀ ಕೋ. ಚೆನ್ನಬಸಪ್ಪನವರಿಗೆ ವಂದನೆಗಳು.**

ತಾವು ಹೇಳಿದ ಪ್ರಕಾರ ಮೀಟಿಂಗಿಗೆ ತಯಾರು ಮಾಡಿ ನೋಟೀಸುಗಳನ್ನು ಹಂಚಿ, ೭ ಘಂಟೆಗೆ ಏರ್ಪಾಟು ಮಾಡಿ ೮ ಘಂಟೆಯವರೆಗೆ ನೋಡಿದೆವು. ನೀವು ಬರಲಿಲ್ಲ. ಜನರು ಬಹಳ ಕಲೆತಿದ್ದರು. ಆದರೆ ಬಹಳ ನಿರುತ್ಸಾಹಪಟ್ಟರು. ತಾ॥ ೧೦–೧೨–೪೭ ದಿನ ಪಲ್ಲೆವಿಲ್ಲಿ, ಯಲ್ಲಾಪುರಕ್ಕೆ ಹೋಗಿ ಮನೆ ಮನೆಗೆ ಹೋಗಿ ಲೆಕ್ಕ ನೋಡಿದರೂ ಇನ್ನು ೨, ೩ ಜನ ಕನ್ನಡದವರು ಕಡಿಮೆ ಬರುವರು. ೧೧–೧೨–೪೭ ಕಾತಲೂರು ಹಡಗಲಿಗೆ ಹೋಗಿ ಲೆಕ್ಕ ತೆಗೆಸಿದರೆ ೪ ಜನ ಮಾತ್ರ ಜಾಸ್ತಿ ಬಂದರು. ೧೨–೧೨–೪೭ ದಿನ ರಾಯದುರ್ಗಕ್ಕೆ ಬಂದೆನು. ೧೪–೧೨–೪೭ ಚದಂ ಆಶ್ರಮಕ್ಕೆ ಹೋಗಿ ರಾತ್ರಿ ೮ ಗಂಟೆಗೆ ಬಂದೆನು. ತಾ॥ ೧೬–೧೨–೪೭ ದಿನ ೭೪ ವುಡೆಗೋಳಕ್ಕೆ ಮತ್ತು ೧೭–೧೨–೪೭ ದಿನ ಆಯತಪಲ್ಲಿಗೆ ಹೋಗಿ ಬಂದೆನು ಈ ಪಟ್ಟಿಯನ್ನು ಕಳಿಸುತ್ತೇನೆ.

ಇಂತಿ ನಿಮ್ಮ,
**ಡಿ. ಯನ್. ಮುಕುಂದಪ್ಪ**

ಆಗ ಕನ್ನಡಿಗರು ಕನ್ನಡಕ್ಕಾಗಿ ಎಷ್ಟು ಕಷ್ಟಪಟ್ಟಿದ್ದರು ಎಂಬುದನ್ನು ಇಂದು ನಾವು ಗ್ರಹಿಸಬೇಕು. ಆಗ ಕನ್ನಡ ಕಾರ್ಯಕರ್ತರು ಕಾಲ್ನಡಿಗೆಯಲ್ಲಿ ಹಳ್ಳಿ–ಹಳ್ಳಿಗೆ ಹೋಗಿ ಕರಪತ್ರಗಳನ್ನು ಹಂಚಿ, ಸಭೆಗಳನ್ನು ಏರ್ಪಡಿಸಿ ಮಧ್ಯರಾತ್ರಿಯವರೆಗೆ ಕಾದಿರುತ್ತಿದ್ದರು. ಅವರು ಅಂದಿನ ಕನ್ನಡ ಕಾರ್ಯಕರ್ತರು. ಆದರೆ ಈಗ ? ಒಂದಾನೊಂದು ಹಳ್ಳಿಯಲ್ಲಾದರೂ ಕನ್ನಡ ಸಾಹಿತ್ಯ ಪರಿಷತ್ತಿನ ೧ ಲಕ್ಷ ೯೫ ಸಾವಿರ ಜನ ಸದಸ್ಯರಲ್ಲಿ ಒಬ್ಬರಾದರೂ ಕಾಲ್ನಡಿಗೆಯಲ್ಲಿ ಹಳ್ಳಿಗಳಿಗೆ ಹೋಗಿ ಕನ್ನಡಕ್ಕಿರುವ ಕಷ್ಟವೇನೆಂಬುದನ್ನು ತಿಳಿಯಲು ಪ್ರಯತ್ನಿಸಿದ್ದಾರೆಯೆ ? ಅವರ ಪ್ರಯತ್ನದ ವರದಿಯನ್ನು ಮಾತೃಸಂಸ್ಥೆಗೆ ಕಳಿಸಿದ್ದಾರೆಯೆ ? ಇದು ಇಂದಿನ ಕನ್ನಡ ಕಾರ್ಯಕರ್ತರ ಅಮೋಘ ಸೇವೆ. ಈಗಿನ ಕನ್ನಡ ಕಾರ್ಯಕರ್ತರು ಕಾರುಗಳಿಲ್ಲದೆ ಮುಂದೆ ಹೆಜ್ಜೆ ಇಡುವುದೆ ಇಲ್ಲ. ಅಂಥವರಿಗೆ ಪ್ರಯಾಣ ಭತ್ಯೆ ಕೊಡುವವರು ಯಾರಿದ್ದಾರೆ ? ಹಾಗಾದರೆ ಕನ್ನಡ ಉಳಿಯುವುದು ಹೇಗೆ ?

ಕರ್ನಾಟಕದಲ್ಲಿ ಕನ್ನಡ, ಪ್ರಾಥಮಿಕ ಶಾಲೆಗಳಲ್ಲಾದರೂ ಉಳಿಯಬೇಕೆಂದು ಪ್ರಯತ್ನಿಸುತ್ತಿರುವುದು ಈಡೇರಲಾಗದ ಸಮಸ್ಯೆ ಎಂದೇಕಾಣುತ್ತದೆ. ಹಳ್ಳಿಗಳಲ್ಲೂ ಇಂಗ್ಲಿಷಿನಲ್ಲಿ ಕಲಿತರೆ ಅನ್ನ ಗಳಿಸುವ ಉಪಾಯವೆಂಬ ಭಾವನೆ, ಅತ್ಯಂತ ಬಡವರ ಮತ್ತು ತಳವರ್ಗದ ಜನರ ಅಭಿಲಾಷೆಯಾಗಿದೆ. ಪರಿಸ್ಥಿತಿ ಹೀಗಿರುತ್ತಿರುವಾಗ ಕನ್ನಡ ವನ್ನು ಕಡ್ಡಾಯವಾಗಿ ಕಲಿಸುವುದು ಸರ್ಕಾರದಿಂದಲೂ ಸಾಧ್ಯವಾಗುತ್ತಿಲ್ಲ. ಪ್ರಾಥಮಿಕ ಹಂತದಲ್ಲಿ ಮಾತೃಭಾಷೆ ಶಿಕ್ಷಣ ಮತ್ತು ಶಿಕ್ಷಣ ಮಾಧ್ಯಮ ಆಗಿರಬೇಕೆಂದು ಉಚ್ಚ ನ್ಯಾಯಾಲಯ, ಸರ್ವೋಚ್ಚ ನ್ಯಾಯಾಲಯ ತೀರ್ಮಾನಿಸಿದ್ದರೂ ಅದು ಕಾರ್ಯಗತ ವಾಗದಂತೆ ಇಂಗ್ಲಿಷ್ ವ್ಯಾಮೋಹಿಗಳು ಮತ್ತು ಅವರನ್ನು ಬೆಂಬಲಿಸುವ ಹೆತ್ತವರು ಮತ್ತು ಪೋಷಕರು ಕನ್ನಡದ ಕತ್ತು ಹಿಸುಕುವುದರಲ್ಲಿ ಯಶಸ್ವಿಯಾಗುತ್ತಿದ್ದಾರೆ. ಏಕೆಂದರೆ ಸರ್ಕಾರಿ ಕನ್ನಡ ಪ್ರಾಥಮಿಕ ಶಾಲೆಗಳಿಗೆ ಮಕ್ಕಳನ್ನೆ ಕಳಿಸದೆ ಒಂದು ತರಹದ ಅಸಹಕಾರ ಮತ್ತು ಮುಷ್ಕರ ಒಡ್ಡಿದ್ದಾರೆ. ಅದರಿಂದ ಕನ್ನಡ ಶಾಲೆಗಳು ತಾವಾಗಿಯೇ ಮುಚ್ಚಿ ಹೋಗುತ್ತಿವೆ. ಮುಚ್ಚಿರುವ ಮತ್ತು ಮುಚ್ಚಲಿರುವ ಕನ್ನಡ ಪ್ರಾಥಮಿಕ ಶಾಲೆಗಳ ಬಾಗಿಲು ತೆರೆಯುವಂತೆ ಮಾಡಲು, ಮಕ್ಕಳನ್ನು ಶಾಲೆಗೆ ಸೇರುವಂತೆ ಮಾಡಲು ಪ್ರಯತ್ನಿಸುವುದೊಂದೆ ಕನ್ನಡ ಉಳಿಸಲಿರುವ ಏಕಮಾತ್ರ ಉಪಾಯ ಮತ್ತು ಮಾರ್ಗ. ಈ ಅಸಲು ಸಮಸ್ಯೆಯನ್ನು ಬಗೆಹರಿಸುವ ಸಾಮಾನ್ಯ ಕಾರ್ಯಕರ್ತರು, ಕನ್ನಡ ಸೇವಾದುರಂಧರರು ಎಲ್ಲಿದ್ದಾರೆ ಮತ್ತು ಯಾರಿದ್ದಾರೆ ? ಅಂಥವರು ಕಾಣಿಸುತ್ತಿಲ್ಲ. ಒಟ್ಟಿಗೆ ಎಲ್ಲಿಗೆ ಬಂತು ? ಕರ್ನಾಟಕದಲ್ಲಿ ಕನ್ನಡಕ್ಕೆ ಶಿಕ್ಷಣದಲ್ಲಿ ಉಚಿತಸ್ಥಾನ ಸಿಕ್ಕಿತೆಂಬುದು ಸದ್ಯಕ್ಕೆ ಹುಸಿ. ಈಗಿನ ಕನ್ನಡ ಚಳವಳಿಯ ದುರಂತ ಕಥೆ ಇಲ್ಲಿಗೆ ಸಾಕು. ಉಳಿದುದನ್ನು ಕನ್ನಡಿಗರೆ ಊಹಿಸಿ ಕೊಂಡು ಉಸಿರು ಹಿಡಿದುಕೊಂಡಿರಬೇಕು. ಇಲ್ಲವೆ ಕೊನೆಯುಸಿರೆಳೆಯಬೇಕು.

**ಕೋ. ಚೆನ್ನಬಸಪ್ಪ**
ನಂ. ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ, ಬೆಂಗಳೂರು – ೫೬೦ ೦೮೬

# ಜರ್ಮನಿಯ ವಿದ್ಯಾರ್ಥಿ ಬಂದಿಖಾನೆಗಳು

ನನ್ನ ಉನ್ನತ ವ್ಯಾಸಂಗವನ್ನು ಜರ್ಮನಿಯಲ್ಲಿ ಮಾಡಬೇಕೆಂದು ನಾನು ನಿರ್ಧರಿಸಿದಾಗ ನಾನು ಆರಿಸಿಕೊಂಡದ್ದು ಬಾನ್ ವಿಶ್ವವಿದ್ಯಾಲಯವನ್ನು. ಬಾನ್ ಪಶ್ಚಿಮ ಜರ್ಮನಿಯಲ್ಲಿರುವ ಚಿಕ್ಕ ನಗರ. ಅದು ಹಿಂದೆ ಪಶ್ಚಿಮ ಜರ್ಮನಿಯ ರಾಜಧಾನಿಯಾಗಿತ್ತು. ಸುಂದರವಾದ ರೈನ್ ನದಿಯ ದಂಡೆಯ ಮೇಲಿರುವ ಬಾನ್ ತನ್ನ ರಾಜಧಾನಿ ಪಟ್ಟವನ್ನು ಬರ್ಲಿನ್‌ಗೆ ಬಿಟ್ಟುಕೊಟ್ಟಿದ್ದರೂ ಹಲವಾರು ಸರ್ಕಾರಿ ಕಚೇರಿಗಳು ಇನ್ನೂ ಬಾನ್‌ನಿಂದಲೇ ಕಾರ್ಯ ನಿರ್ವಹಿಸುತ್ತವೆ. ಅಲ್ಲದೆ ವಿಶ್ವ ಸಂಸ್ಥೆಯ ಹಲವಾರು ಸಂಸ್ಥೆಗಳ ಕಚೇರಿಗಳು ಇನ್ನೂ ಬಾನ್‌ನಲ್ಲಿಯೇ ಇವೆ.

ಬಾನ್‌ನಲ್ಲಿರುವ ರೈನಿಶ್ ಫ್ರೀಡ್‌ರಿಕ್ ವಿಲ್‌ಹೆಲ್ಮ್ ವಿಶ್ವವಿದ್ಯಾಲಯವು ೧೮೧೮ರಲ್ಲಿ ಆರಂಭವಾದದ್ದು. (ಕಾರ್ಲ್ ಮಾರ್ಕ್ಸ್ ಹುಟ್ಟಿದ್ದೂ ಆ ವರ್ಷದಲ್ಲೇ) ಈ ಪುರಾತನ ವಿಶ್ವವಿದ್ಯಾಲಯದಲ್ಲಿ ಹೈನ್‌ರಿಕ್ ಹರ್ಟ್ಜ್, ಕೆಕುಲೆ, ವೊಲ್ಫ್‌ಗಾಂಗ್ ಪಾಲ್, ಫಿಲಿಪ್ ಲೆನಾರ್ಡ್ (ಹಿಟ್ಲರ್ ಸಮರ್ಥಕ ಭೌತವಿಜ್ಞಾನಿ) ಮುಂತಾದ ಕೆಲವು ಸುಪ್ರಸಿದ್ಧ ಪ್ರಾಧ್ಯಾಪಕರು ಬೋಧಿಸಿದ್ದಾರೆ. ಹಾಗೆಯೇ ಜಗದ್ವಿಖ್ಯಾತ ವಿದ್ಯಾರ್ಥಿಗಳಾದ ಕಾರ್ಲ್ ಮಾರ್ಕ್ಸ್, ಹೈನ್‌ರಿಕ್ ಹೈನ್, ಮ್ಯಾಕ್ಸ್ ಅರ್ನ್ಸ್ಟ್, ಫ್ರೀಡ್‌ರಿಕ್ ನೀತ್ಶೆ, ಕಾನ್‌ರಾಡ್ ಅಡೆನಾವರ್ ಮುಂತಾದವರು ಸಹ ಸೇರುತ್ತಾರೆ. ಇಂತಹ ದಿಗ್ಗಜರು ಓದಿದ, ಒಡನಾಡಿದಂತಹ ವಿಶ್ವವಿದ್ಯಾಲಯದಲ್ಲಿ ನನಗೂ ಓದುವ ಅವಕಾಶ ಸಿಕ್ಕಿದ್ದು ನನಗೆ ಅತೀವ ಮುದ ನೀಡಿದಂತಹ ಸಂಗತಿ.

ಬಾನ್ ವಿಶ್ವವಿದ್ಯಾಲಯದ ಆವರಣದಲ್ಲೇ ಅಲ್ಲಲ್ಲಿ ಕೆಲವೊಂದು ಪ್ರಾಚೀನ ಕಾಗದಪತ್ರಗಳನ್ನು ಪ್ರದರ್ಶನಕ್ಕೆಂದು ಗಾಜಿನ ಕೇಸ್‌ಗಳಲ್ಲಿ ಇಟ್ಟಿದ್ದಾರೆ. ಅಲ್ಲಿ ಓಡಾಡುತ್ತಿದ್ದಾಗ ನನ್ನ ಕಣ್ಣಿಗೆ ಬಿದ್ದ ಕೆಲವು ಕಾಗದ ಪತ್ರಗಳು ನನ್ನಲ್ಲಿ ಕುತೂಹಲವನ್ನು ಹುಟ್ಟಿಸಿ ಗಮನ ಸೆಳೆದವು. ಅವುಗಳ ಜೊತೆಗೆ ಕೆಲವು ಚಿತ್ರಗಳೂ ಇದ್ದವು. ಇವು ಮೊದಲ ಮತ್ತು ಎರಡನೇ ಮಹಾಯುದ್ಧದ ಕಾಲಕ್ಕೆ ಸಂಬಂಧಿಸಿದ ಪತ್ರಗಳು. ಅಲ್ಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿ ಬಂದಿಖಾನೆಗೆ ಸಂಬಂಧಪಟ್ಟ ಕಾಗದಗಳನ್ನು ಮತ್ತು ಚಿತ್ರಗಳನ್ನು ಪ್ರದರ್ಶನಕ್ಕೆಂದು ಇಡಲಾಗಿತ್ತು. ಅನೇಕ ವಿದ್ಯಾರ್ಥಿಗಳು ಆಗಾಗ್ಗೆ ಅಲ್ಲಿ ಪ್ರವೇಶ ಪಡೆದಿದ್ದಾರೆ. ಆ ಬಂದಿಖಾನೆಯ ಅತಿಥಿ ಯಾಗಿದ್ದವರ ಪೈಕಿ ಯಾರಿದ್ದರು ಗೊತ್ತೆ, ಮತ್ತಾರೂ ಅಲ್ಲ, ಖ್ಯಾತ ತತ್ವಶಾಸ್ತ್ರಜ್ಞ ಕಾರ್ಲ್ ಮಾರ್ಕ್ಸ್. ೧೮೩೫ರಿಂದ ೧೮೩೬ರ ಅವಧಿಯಲ್ಲಿ ಮಾರ್ಕ್ಸ್ ಹತ್ತು ತಿಂಗಳ ಕಾಲ ಬಾನ್ ವಿಶ್ವವಿದ್ಯಾಲಯದಲ್ಲಿ ಕಾನೂನು ಶಾಸ್ತ್ರದ ವಿದ್ಯಾರ್ಥಿಯಾಗಿದ್ದ. ಯುವ ವಿದ್ಯಾರ್ಥಿ ಮಾರ್ಕ್ಸ್ ಕಾನೂನಿನ ವಿದ್ಯಾಭ್ಯಾಸದಲ್ಲಿ ತೊಡಗಿದ್ದರೂ ಅವನ ಮನಸ್ಸು ಆ ಕಾಲಕ್ಕಾಗಲೇ ತತ್ವಶಾಸ್ತ್ರದತ್ತ ಒಲಿಯಲು ಆರಂಭಿಸಿತ್ತು.

ಮಾರ್ಕ್ಸ್ ಕಲಿಕೆಗಿಂತ ಹೆಚ್ಚಾಗಿ ಇತರ ಚಟುವಟಿಕೆಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡಿದ್ದ. ಕಾರ್ಲ್ ಮಾರ್ಕ್ಸ್‌ನ ಹುಟ್ಟೂರು ಆಗಿನ ಪ್ರಷ್ಯಾ ಸಾಮ್ರಾಜ್ಯದ ಭಾಗವಾಗಿದ್ದ ಟ್ರಿಯರ್ ನಗರ. ಟ್ರಿಯರ್‌ನ ಹೆಸರಿನಲ್ಲಿ ಬಾನ್‌ನಲ್ಲಿ ಸ್ಥಾಪಿತವಾಗಿದ್ದ ಟ್ರಿಯರ್ ಟ್ಯಾವರ್ನ್ ಸಂಘದ ಸದಸ್ಯನಾಗಿದ್ದ ಮಾರ್ಕ್ಸ್. ಅಲ್ಲಿನ ಸದಸ್ಯರು ಆಗಾಗ್ಗೆ ಸೇರಿ ಒಟ್ಟಿಗೆ ಮದ್ಯಪಾನ ಮಾಡಿ ಗಲಾಟೆಯೆಬ್ಬಿ ಸುತ್ತಿದ್ದ ಸಂದರ್ಭಗಳೂ ಉಂಟು. ಅಲ್ಲದೆ ಮಾರ್ಕ್ಸ್ ಕವಿಗಳ ಸಂಘ ವೊಂದಕ್ಕೆ ಸದಸ್ಯನಾಗಿದ್ದ. ಇದು ಹೊರಗಿನಿಂದ ಕಾವ್ಯ ಪ್ರೇಮಿಗಳ ಸಂಘ ದಂತೆ ಕಂಡುಬಂದರೂ ಅವರ ಸಭೆಗಳಲ್ಲಿ ಚರ್ಚೆ ಯಾಗುತ್ತಿದ್ದ ವಿಷಯ ಗಳು ಬಹಳ ಗಹನ ವಾದುವಾಗಿದ್ದವು. ಆಗಿನ ಪ್ರಷ್ಯಾ ಸರ್ಕಾರದ ನೀತಿಗಳ ವಿರುದ್ಧ ಅನೇಕ ಚರ್ಚೆಗಳು ನಡೆಯುತ್ತಿದ್ದವು. ಆ ಹೊತ್ತಿಗಾಗಲೇ ವಿಶ್ವವಿದ್ಯಾಲಯದ ಅಧಿಕಾರಿಗಳ ಕಣ್ಣಿಗೆ ಮಾರ್ಕ್ಸ್‌ನ ಚಟುವಟಿಕೆಗಳು ಬೀಳತೊಡಗಿದ್ದವು. ರಾತ್ರಿಯ ವೇಳೆಯಲ್ಲಿ ರಸ್ತೆಯಲ್ಲಿ ಗಲಭೆಯೆಬ್ಬಿಸಿದುದಕ್ಕಾಗಿ ಜೂನ್ ೧೬, ೧೮೩೬ರಂದು ಒಂದು ದಿನದಮಟ್ಟಿಗೆ ಮಾರ್ಕ್ಸ್‌ನನ್ನು ಬಂದಿಖಾನೆಯಲ್ಲಿ ಇರಿಸಲಾಗಿತ್ತು. ಅವನನ್ನು ಅಲ್ಲಿ ಯಾರೂ ಭೇಟಿ ಮಾಡುವಂತಿರಲಿಲ್ಲ.




*ಹೈಡಲ್‌ಬರ್ಗ್ ಬಂದಿಖಾನೆಯ ವಿದ್ಯಾರ್ಥಿಗಳ ಕಲ್ಪನಾ ವಿಲಾಸ*

ಇಷ್ಟೇ ಅಲ್ಲದೆ, ಮಾರ್ಕ್ಸ್ ಮತ್ತು ಪ್ರಷ್ಯಾ ಸಾಮ್ರಾಜ್ಯದ ಬೋರಷ್ಯಾ ಸೈನಿಕರ ನಡುವೆ ಆಗಾಗ ಕಲಹಗಳು ಉಂಟಾಗುತ್ತಿದ್ದವು. ಶ್ರೀಮಂತ ವರ್ಗದವರೊಂದಿಗೆ ವಿದ್ಯಾರ್ಥಿಗಳು ವಿನಮ್ರತೆಯಿಂದ ವರ್ತಿಸಬೇಕೆಂದು ಅವರು ನಿರೀಕ್ಷಿಸುತ್ತಿದ್ದರು. ಅಂತೆಯೇ ಅವರಿಗೆ ವಿಧೇಯತೆಯ ಪಾಠವನ್ನು ಕಲಿಸಲೂ ಪ್ರಯತ್ನಿಸುತ್ತಿದ್ದರು. ಇಂತಹ ದುರ್ನಡತೆಗೆ ಗುರಿಯಾಗಲು ಇಷ್ಟಪಡದ ಮಾರ್ಕ್ಸ್ ತನ್ನನ್ನು ಸೈನಿಕರಿಂದ ರಕ್ಷಿಸಿಕೊಳ್ಳಲು ಪಿಸ್ತೂಲೊಂದನ್ನು ಇರಿಸಿಕೊಂಡಿದ್ದನು. ಒಮ್ಮೆ ಕೊಲೋನ್ ನಗರದಲ್ಲಿ ಅವನ ಬಳಿ ಪಿಸ್ತೂಲಿದ್ದದ್ದರಿಂದ ಪೊಲೀಸರಿಗೆ ಸಿಕ್ಕಿಬಿದ್ದು ಸಾಕಷ್ಟು ತೊಂದರೆಗೊಳಗಾದ ಮಾರ್ಕ್ಸ್ ತನ್ನ ತಂದೆಯ ಕೃಪೆಯಿಂದ ಜೈಲು ವಾಸವನ್ನು ತಪ್ಪಿಸಿಕೊಂಡನು. ಇನ್ನೊಮ್ಮೆ ಒಬ್ಬ ಬೋರಷ್ಯಾ ಸೈನಿಕನೊಡನೆ ಕಲಹದಲ್ಲಿ ಸಿಲುಕಿ ಲಘುವಾಗಿ ಮಾರ್ಕ್ಸ್ ಗಾಯಗೊಂಡದ್ದೂ ಉಂಟು. ಸಮಾಜದಲ್ಲಾಗುತ್ತಿರುವ ಅನ್ಯಾಯಗಳ ವಿರುದ್ಧ ದನಿಯೆತ್ತುವ ನಾಯಕನ ಕುರುಹುಗಳು ಅವನ ವಿದ್ಯಾರ್ಥಿ ಜೀವನದಲ್ಲಾಗಲೇ ಕಾಣತೊಡಗಿದ್ದವು.

ಮಾರ್ಕ್ಸ್‌ನ ಹುಟ್ಟೂರಾದ ಟ್ರಿಯರ್‌ನಲ್ಲಿ ಅವನು ಹುಟ್ಟಿದ ಮನೆಯನ್ನು ಈಗ ಸಂಗ್ರಹಾಲಯವನ್ನಾಗಿ ಪರಿವರ್ತಿಸಲಾಗಿದೆ. ಅಲ್ಲಿಗೆ ಭೇಟಿ ನೀಡಿದ್ದ ನನಗೆ ನನ್ನದೇ ವಿಶ್ವವಿದ್ಯಾಲಯದಲ್ಲಿದ್ದಾಗಿನ ಕಾಲದ ಮಾರ್ಕ್ಸ್‌ನ ಜೀವನ ಚರಿತ್ರೆಯ ತುಣುಕೊಂದನ್ನು ನೋಡಿ ಸಂತೋಷ ವಾಯಿತು. ಮಾರ್ಕ್ಸ್‌ನ ಕಾರಾಗೃಹ ವಾಸದ ವಿಷಯವನ್ನು ಮೆಲುಕು ಹಾಕುತ್ತಿದ್ದ ನನಗೆ

**ಮೈತ್ರಿ ಬೆಂಗಳೂರು**



*ಬಾನ್ ವಿಶ್ವವಿದ್ಯಾಲಯದ ಬಂದಿಖಾನೆಯ ಕಡತದಲ್ಲಿ ಮಾರ್ಕ್ಸ್‌ನ ವಾಸದ ವಿವರಗಳು. ಮಾರ್ಕ್ಸ್‌ನ ಹೆಸರಿನ ಬದಿಯಲ್ಲಿ ಕೈ ಚಿಹ್ನೆಯನ್ನು ಕಾಣಬಹುದು.*



***ಹೈಡಲ್‌ಬರ್ಗ್ ವಿಶ್ವವಿದ್ಯಾಲಯದ ಬಂದಿಖಾನೆಯ ಕೊಠಡಿಯ ಗೋಡೆಗಳ ಮೇಲೆಲ್ಲಾ ಚಿತ್ರಗಳು ಮತ್ತು ಪದ್ಯಗಳು. ಬಂದಿಖಾನೆಯಲ್ಲಿರುತ್ತಿದ್ದ ಕುರ್ಚಿ, ಮೇಜು ಹಾಗೂ ಹಾಸಿಗೆಗಳನ್ನೂ ಸಂರಕ್ಷಿಸಿ ಇಡಲಾಗಿವೆ.***

ಸೋಜಿಗದ ಮತ್ತೊಂದು ವಿಷಯವು ಕಣ್ಣಿಗೆ ಬಿತ್ತು. ಅವನ ಬಂಧನ ಸಾಮಾನ್ಯವಾದ ಕಾರಾಗೃಹದಲ್ಲಿ ಎಂದೇ ಭಾವಿಸಿದ್ದ ನನಗೆ ಜರ್ಮನಿಯ ವಿಶ್ವವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳಿಗೆಂದೇ ವಿಶೇಷವಾದ ಬಂದಿಖಾನೆಗಳಿದ್ದ ಸಂಗತಿ ಆಶ್ಚರ್ಯ ಹುಟ್ಟಿಸಿತು. ಅವುಗಳ ಆಡಳಿತದ ಸಂಪೂರ್ಣ ಜವಾಬ್ದಾರಿ ವಿಶ್ವವಿದ್ಯಾಲಯದ ಅಧಿಕಾರಿಗಳ ಕೈಯಲ್ಲೇ ಇರುತ್ತಿತ್ತು.

ವಿದ್ಯಾರ್ಥಿ ಸಮೂಹವು ವಿಶ್ವವಿದ್ಯಾಲಯದ ಅಧೀನದಲ್ಲಿದ್ದುದರಿಂದ ಅದರ ತಪ್ಪೊಪ್ಪುಗಳೆಲ್ಲದರ ವಿಚಾರಣೆಗಳನ್ನು ಮಾಡುವ ಅಧಿಕಾರ ಕೇವಲ ವಿಶ್ವವಿದ್ಯಾಲಯದ ಅಧಿಕಾರಿ ವರ್ಗಕ್ಕೆ ಸೀಮಿತವಾಗಿರುತ್ತಿತ್ತು. ವಿದ್ಯಾರ್ಥಿಗಳ ಅಪರಾಧದ ಬಗ್ಗೆ ವಿಚಾರಣೆ ನಡೆಸಿ, ತೀರ್ಪುಕೊಡುವ ಹೊಣೆ ವಿಶ್ವವಿದ್ಯಾಲಯದ ಮುಖ್ಯಾಧಿಕಾರಿ (ರೆಕ್ಟರ್)ಯದ್ದು. ಹಾಗಾಗಿ ವಿದ್ಯಾರ್ಥಿಗಳು ಊರೊಳಗೆ ಎಂತಹ ಅಪರಾಧವನ್ನೇ ಮಾಡಲಿ, ಅವರಿಗೆ ಶಿಕ್ಷೆ ನೀಡುವ ಹಕ್ಕು ಪೊಲೀಸಿನವರಿಗಿರಲಿಲ್ಲ. ಯಾವುದಾದರೂ ಅಪರಾಧವೆಸಗಿದ ವಿದ್ಯಾರ್ಥಿಯನ್ನು ಪೊಲೀಸರು ಬಂಧಿಸಿದಾಗ ವಿದ್ಯಾರ್ಥಿಯು ತಾನು ವಿಶ್ವವಿದ್ಯಾಲಯದ ವಿದ್ಯಾರ್ಥಿ ಎಂಬುದನ್ನು ಸಾಬೀತುಪಡಿಸುವ ಪ್ರಮಾಣಪತ್ರವನ್ನು ಪೊಲೀಸರಿಗೆ ತೋರಿಸಿ, ನಂತರ ತನ್ನ ವಿಳಾಸವನ್ನು ಅವರಿಗೆ ನೀಡಬೇಕಾಗುತ್ತಿತ್ತು. ಆಗ ವಿಶ್ವವಿದ್ಯಾಲಯದಲ್ಲಿ ಆ ವಿದ್ಯಾರ್ಥಿಯ ವಿರುದ್ಧ ದೂರೊಂದು ದಾಖಲಾಗುತ್ತಿತ್ತು. ನಂತರ ಆ ದೂರಿನ ವಿಚಾರಣೆ ನಡೆದು ಅಪರಾಧದ ತೀವ್ರತೆಗೆ ಅನುಗುಣವಾಗಿ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ರಾತ್ರಿಯ ವೇಳೆಯಲ್ಲಿ ಜೋರಾಗಿ ಹಾಡುವುದು ಅಥವಾ ಪಾನಮತ್ತರಾಗಿ ಗಲಭೆಯೆಬ್ಬಿಸುವುದು, ಇಲ್ಲವೆ ರಾತ್ರಿಯ ಹೊತ್ತಿನಲ್ಲಿ ಮನೆಯಂಗಳದಲ್ಲಿ ಕಟ್ಟಿ ಹಾಕುತ್ತಿದ್ದ ಹಂದಿಗಳನ್ನು ಮುಕ್ತಗೊಳಿಸಿ ಊರಲ್ಲೆಲ್ಲ ಅವುಗಳನ್ನು ಅಟ್ಟಿಸಿಕೊಂಡುಹೋಗಿ ಗಲಾಟೆ ಮಾಡುವುದು – ಇಂಥವನ್ನೆಲ್ಲ ಚಿಕ್ಕ ಅಪರಾಧಗಳೆಂದು ಪರಿಗಣಿಸಿ ಇಂತಹ ಚಟುವಟಿಕೆಗಳಲ್ಲಿ ತೊಡಗುವವರನ್ನು ಒಂದು ದಿನದ ಕಾಲ ಬಂದಿಖಾನೆಯಲ್ಲಿ ಇರಿಸಲಾಗುತ್ತಿತ್ತು. ಪೊಲೀಸರ ಟೋಪಿಯನ್ನು ಕೋಲಿನಿಂದ ಹೊಡೆದುರುಳಿಸಿ ಅವರನ್ನು ನೋಡಿ ತಮಾಷೆ ಮಾಡಿದರಂತೂ ಪೊಲೀಸರ ಕೆಲಸಕ್ಕೆ ಅಡ್ಡಿಮಾಡಿದವರೆಂದು ಒಂದು ತಿಂಗಳ ಕಾಲ ಬಂದಿಖಾನೆಯ ಶಿಕ್ಷೆಗೆ ಗುರಿಯಾಗಬೇಕಿತ್ತು. ಪ್ರಷ್ಯಾದ ಆಡಳಿತಗಾರರ ನಿಯಮೋಲ್ಲಂಘನೆ, ಅವರ ನೀತಿಗಳ ವಿರುದ್ಧ ಮಾತನಾಡಿ ಪ್ರತಿಭಟಿಸುವುದು ಮತ್ತು ಕಾನೂನುಬಾಹಿರ ಕಲಹಗಳಲ್ಲಿ ಭಾಗಿಯಾಗುವುದು – ಮುಂತಾದ ಘಟನೆಗಳನ್ನು ಗಂಭೀರವಾದ ಅಪರಾಧಗಳೆಂದು ಪರಿಗಣಿಸಿ ಹಲವಾರು ದಿನಗಳ ಕಾಲ ಬಂದಿಖಾನೆಗೆ ವಿದ್ಯಾರ್ಥಿಗಳನ್ನು ಅಟ್ಟಲಾಗುತ್ತಿತ್ತು.

ಈ ವಿದ್ಯಾರ್ಥಿ ಬಂದಿಖಾನೆಗಳು ವಿಶ್ವವಿದ್ಯಾಲಯದ ಆವರಣದಲ್ಲೇ ಇರುತ್ತಿದ್ದವು. ಬಂಧನದ ಅವಧಿಯಲ್ಲಿ ವಿದ್ಯಾರ್ಥಿಗಳು ತರಗತಿಗಳಿಗೆ ಹೋಗಿ ವಿದ್ಯಾಭ್ಯಾಸವನ್ನು ಮುಂದುವರಿಸಬಹುದಾಗಿತ್ತು. ಆದರೆ ವಿಶ್ವವಿದ್ಯಾಲಯದ ಕಟ್ಟಡವನ್ನು ಬಿಟ್ಟು ಹೊರಹೋಗುವ ಅನುಮತಿ ಅವರಿಗಿರಲಿಲ್ಲ. ಬಂದಿಖಾನೆಯೊಳಗೆ ಅಡಿಗೆ ಮಾಡಲು ಅಥವಾ ಸ್ನಾನ ಮಾಡಲು ನೀರಿನ ವ್ಯವಸ್ಥೆ ಇರುತ್ತಿರಲಿಲ್ಲ. ಹೊರಗಿನ ಅಂಗಳದಲ್ಲಿರುವ ಬಾವಿಯಿಂದ ನೀರನ್ನು ಸೇದಿ ತಂದು ಪ್ರತಿನಿತ್ಯದ ಬಳಕೆಗೆ ಉಪಯೋಗಿಸಬೇಕಾಗುತ್ತಿತ್ತು. ಬಂದಿಖಾನೆಯ ಸಣ್ಣ ಕೋಣೆಗಳಲ್ಲಿ ಕೇವಲ ಹುಲ್ಲು ಹಾಸಿಗೆ, ಮಂಚ, ಕುರ್ಚಿ, ಮೇಜುಗಳು ಮಾತ್ರ ಇರುತ್ತಿದ್ದವು. ದಿಂಬು, ಹೊದಿಕೆಗಳು ಬೇಕಿದ್ದಲ್ಲಿ, ವಿದ್ಯಾರ್ಥಿಗಳು ಅದಕ್ಕೆ ದುಡ್ಡು ತೆರಬೇಕಿತ್ತು. ಬಂಧನಕ್ಕೊಳಗಾದ ನಂತರದ ಎರಡು ದಿನಗಳ ಕಾಲ ವಿದ್ಯಾರ್ಥಿಗಳಿಗೆ ಕೇವಲ ಬ್ರೆಡ್ ಮತ್ತು ನೀರನ್ನು ಕೊಡಲಾಗುತ್ತಿತ್ತು. ನಂತರ ವಿದ್ಯಾರ್ಥಿಗಳು ತಮಗೆ ಬೇಕಾದ ಊಟ ಹಾಗೂ ಕೆಲವೊಮ್ಮೆ ಬಿಯರ್ ಕೂಡ ಹೊರಗಿನಿಂದ ತರಿಸಿಕೊಳ್ಳಬಹುದಿತ್ತು.

೧೯ನೆಯ ಶತಮಾನದ ಅಂತ್ಯದಲ್ಲಿ ಬಂದಿಖಾನೆಯ ವಾಸ ಮೊದಲಿನಷ್ಟು ಕಠಿಣವಾಗಿರದೆ ಸ್ವಲ್ಪ ಹಗುರಾಯಿತು. ವಿದ್ಯಾರ್ಥಿ ಜೀವನದಲ್ಲೇ ಒಮ್ಮೆಯಾದರೂ ಬಂದಿಖಾನೆಯಲ್ಲಿ ವಾಸ ಮಾಡುವುದು ಹೆಮ್ಮೆಯ ವಿಷಯವೆಂದು ಪರಿಗಣಿಸುವ ಕಾಲವೂ ಬಂದಿತು. ಹಾಗೆ ಬಂಧಿತರಾಗುವ ಅವಕಾಶಗಳನ್ನು ಹುಡುಕಿಕೊಂಡು ಹೋಗಿ ವಿದ್ಯಾರ್ಥಿಗಳು ಅನಗತ್ಯವಾಗಿ ಗಲಭೆಯನ್ನೆಬ್ಬಿಸಿ ಬಂಧನಕ್ಕೊಳಗಾಗುತ್ತಿದ್ದದ್ದೂ ಉಂಟು. ಆ ಹೊತ್ತಿಗಾಗಲೇ ಬಂದಿಖಾನೆಯ ವಾಸ ಹಾಗೂ ಶಿಕ್ಷೆಗಳು ಹಗುರವಾಗಿದ್ದರಿಂದ ಸ್ನೇಹಿತರೆಲ್ಲರೂ ಒಟ್ಟಾಗಿ ಬಂಧಿತರಾಗಿ ಆ ಅನುಭವವನ್ನು ಆಸ್ವಾದಿಸುತ್ತಿದ್ದರು. ಬಂಧನದ ಅವಧಿಯನ್ನು ಹಾಡುತ್ತಲೋ, ಇಸ್ಪೀಟು ಆಡುತ್ತಲೋ ಕಳೆಯುತ್ತಿದ್ದರು. ಬಹಳಷ್ಟು ಮಂದಿಯನ್ನು ಭೇಟಿ ಮಾಡಲು ಅವರ ಚಿರಪರಿಚಿತರು ಆಗಮಿಸುತ್ತಿದ್ದುದುಂಟು. ಅಲ್ಲದೆ ಅವರು ಬಂಧಿತರಾದ ಕೊಠಡಿಯ ಗೋಡೆ ಮತ್ತು ಸೂರುಗಳ ಮೇಲೆಲ್ಲಾ ತಮಗೆ ಇಷ್ಟ ಬಂದ ಹಾಗೆ ಚಿತ್ರಗಳನ್ನು, ಪದ್ಯಗಳನ್ನು ಗೀಚುತ್ತಿದ್ದರು. ಅನೇಕ ಪ್ರಿಯತಮೆಯರ ಹೆಸರುಗಳು, ಚಿತ್ರಗಳು ಈ ಗೋಡೆಗಳನ್ನಲಂಕರಿಸಿವೆ !




***ಶೌಚಾಲಯದಲ್ಲೂ ಬರಹ : 'ತಲೆಸುತ್ತು ಬಾರದವರಿಗೆ ಮಾತ್ರ !!'***

ಜರ್ಮನಿಯ ಹಲವಾರು ವಿಶ್ವವಿದ್ಯಾಲಯಗಳಲ್ಲಿ ಇಂತಹ ವಿದ್ಯಾರ್ಥಿ ಬಂದಿಖಾನೆಗಳಿದ್ದವು. ಮಾರ್‌ಬುರ್ಗ್, ಹೈಡಲ್‌ಬರ್ಗ್, ಗಾಟಿಂಗನ್, ಟ್ಯೂಬಿಂಗನ್, ಎರ್ಲಾಂಗೆನ್, ಎರ್‌ಫುರ್ಟ್, ಲೈಪ್‌ಝಿಗ್, ಯೇನಾ ಮುಂತಾದ ಹಲವಾರು ವಿಶ್ವವಿದ್ಯಾಲಯಗಳ ಬಂದಿಖಾನೆಗಳ ಬಗ್ಗೆ ದಾಖಲೆಗಳಿವೆ. ಆದರೆ ಹತ್ತೊಂಬತ್ತನೇ ಶತಮಾನದ ಅಂತ್ಯದ ವೇಳೆಗೆ ಹಲವಾರು ಬಂದಿಖಾನೆಗಳ ಬಳಕೆ ನಿಂತುಹೋಗಿತ್ತು. ಬಾನ್ ವಿಶ್ವವಿದ್ಯಾಲಯದ ಬಂದಿಖಾನೆಯು ಅವುಗಳಲ್ಲೊಂದು. ಕೆಲವು ವಿಶ್ವವಿದ್ಯಾಲಯಗಳಲ್ಲಿ ೧೭೨೦ರಿಂದ ೧೯೩೦ರ ವರೆಗೆ ಬಂದಿಖಾನೆಗಳು ಚಾಲ್ತಿಯಲ್ಲಿದ್ದು ನಂತರದಲ್ಲಿ ಹಿಟ್ಲರನ ಆಡಳಿತದ ವೇಳೆಗೆ ಎಲ್ಲವೂ ಮುಚ್ಚಿಹೋದವು. ಅವನು ಇಡೀ ದೇಶವನ್ನೇ ಬಂದಿಖಾನೆ ಮಾಡಿಬಿಟ್ಟನಲ್ಲ, ಅದಕ್ಕಿರಬಹುದು. ಬಾನ್‌ನ ಬಂದಿಖಾನೆಯಂತೆ ಮಹಾಯುದ್ಧಗಳ ಸಮಯದಲ್ಲಿ ಹಲವಾರು ವಿಶ್ವವಿದ್ಯಾಲಯಗಳು, ಅವುಗಳ ಬಂದಿಖಾನೆಗಳು ಧ್ವಂಸವಾದವು. ಆದರೆ ಕೆಲವು ವಿಶ್ವವಿದ್ಯಾಲಯಗಳ ಬಂದಿಖಾನೆಗಳನ್ನು ಸಂರಕ್ಷಿಸಿ ಈಗ ಪ್ರವಾಸಿಗರಿಗೆ ತೆರೆದಿಡಲಾಗಿವೆ.




ನನ್ನ ವಿದ್ಯಾಭ್ಯಾಸ ಮುಗಿಸಿ ಭಾರತಕ್ಕೆ ಮರಳುವ ಮುನ್ನ ಹೈಡಲ್‌ಬರ್ಗ್‌ಗೆ ಭೇಟಿ ನೀಡಬೇಕೆಂದಿದ್ದ ನನ್ನ ಬಹುದಿನದ ಆಸೆ ಈಡೇರಿತು. ಅತ್ಯಂತ ಸುಂದರವಾದ ಹೈಡಲ್‌ಬರ್ಗ್ ನಗರ ತನ್ನ ಆರುನೂರು ವರ್ಷಗಳಿಗೂ ಪ್ರಾಚೀನವಾದ ವಿಶ್ವವಿದ್ಯಾಲಯಕ್ಕೆ ಹೆಸರುವಾಸಿ. ಈ ವಿಶ್ವವಿದ್ಯಾಲಯದಲ್ಲಿರುವ ಬಂದಿಖಾನೆಯನ್ನು ಅತ್ಯಂತ ಜತನದಿಂದ ಸಂರಕ್ಷಿಸಲಾಗಿದ್ದು ಬಹು ಮಂದಿ ಪ್ರವಾಸಿಗರು ಇಲ್ಲಿಗೆ ಭೇಟಿ ನೀಡುತ್ತಾರೆ. ವಿಶ್ವವಿದ್ಯಾಲಯದ ಸಭಾಂಗಣದ ಪಕ್ಕದಲ್ಲಿಯೇ ಈ ಬಂದಿಖಾನೆಯಿದೆ. ವಿದ್ಯಾರ್ಥಿ ಗಳನ್ನು ಬಂಧಿಸಿಡುತ್ತಿದ್ದ ಕೊಠಡಿಗಳನ್ನು ವೀಕ್ಷಿಸಲು ಇಕ್ಕಟ್ಟಾದ ಮೆಟ್ಟಿಲುಗಳನ್ನೇರಿ ಹೊರಟರೆ ಗೋಡೆಯ ತುಂಬ ಬಣ್ಣ ಬಣ್ಣದ ಚಿತ್ರಗಳು ಕಾಣಿಸುತ್ತವೆ. ಕಠಿಣ ಸಜೆಗೆ ಗುರಿಯಾದ ವಿದ್ಯಾರ್ಥಿಗಳನ್ನು ಅತ್ಯಂತ ಇಕ್ಕಟ್ಟಾದ ಕೋಣೆಗಳಲ್ಲಿ ಇಡುತ್ತಿದ್ದರು. ಅವುಗಳಿಗೆ ವಿದ್ಯಾರ್ಥಿಗಳು ನೀಡುತ್ತಿದ್ದ ವಿವಿಧ ಹೆಸರುಗಳು 'ಕಿಂಗ್ಸ್ ಥ್ರೋನ್', 'ಪ್ಯಾಲೆ ರಾಯಾಲ್', 'ಚೇಂಬರ್ ಆಫ್ ಹಾರರ್ಸ್' ಮುಂತಾದವು.

ಶಿಕ್ಷಣ ಸಂಸ್ಥೆಗಳಲ್ಲಿ ಶಿಕ್ಷೆಯನ್ನು ನೀಡುವುದಕ್ಕಾಗಿ ಇದ್ದ ಈ ವ್ಯವಸ್ಥೆ ನಿಜಕ್ಕೂ ಅಚ್ಚರಿ ಹುಟ್ಟಿಸುತ್ತದೆ. ನಮ್ಮ ಆಧುನಿಕ ಸಮಾಜದ ಬದುಕಿಗೆ ಒಗ್ಗಿಕೊಂಡಿರುವ ನನಗೆ ಚರಿತ್ರೆಯ ಇಂತಹ ಒಂದು ತುಣುಕಿನ ದರ್ಶನವಾದದ್ದು ನಿಜಕ್ಕೂ ವಿಸ್ಮಯವುಂಟುಮಾಡಿತು; ಹೊಸ ಲೋಕವೊಂದನ್ನು ತೆರೆಯಿತು.

**ಮೈತ್ರಿ ಬೆಂಗಳೂರು**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡ ನಗರ
ಗವೀಪುರಂ, ಬೆಂಗಳೂರು – ೫೬೦ ೦೧೯

## ಸಾದರ ಸ್ವೀಕಾರ

**ಮಕ್ಕಳ ರಂಗಭೂಮಿ : ಪ್ರದರ್ಶನ – ಪ್ರಕ್ರಿಯೆ**
*ಡಾ|| ನಿಂಗು ಸೊಲಗಿ*
**ಪುಟ : xxiv + ೩೦೪ = ೩೨೮ ಬೆಲೆ : ರೂ. ೨೦೦**
**ಚಿಲಿಪಿಲಿ ಪ್ರಕಾಶನ,** ನಂ. ೫೬, ೪ನೇ ಅಡ್ಡರಸ್ತೆ, ಶಿವಾನಂದ ನಗರ, ಧಾರವಾಡ - ೫೮೦ ೦೦೧

**ಜನರನ್ನು ಬದುಕಿಸುವ ಸಾಹಿತ್ಯ ಬೇಕು** *ಕೋಚೆ*
*ಸಂಪಾದಕರು : ಡಾ|| ಎಸ್. ಎಂ. ವೃಷಭೇಂದ್ರಸ್ವಾಮಿ*
**ಪುಟ : ೮೦ ಬೆಲೆ : ರೂ. ೬೦**
**ಶ್ರೀ ಅರವಿಂದ ಪ್ರಕಾಶನ,** ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ಬೆಂಗಳೂರು - ೫೬೦ ೦೮೬

**ನಳಿನ ಕಾಂತಿ** (ಮಲಯಾಳಂ ಕತೆಗಳು) *ಟಿ. ಪದ್ಮನಾಭನ್*
*ಕನ್ನಡಕ್ಕೆ : ಕೆ. ಕೆ. ನಾಯರ್, ಡಾ|| ಅಶೋಕ್ ಕುಮಾರ್*
**ಪುಟ : xvi + ೧೨೮ = ೧೪೪ ಬೆಲೆ : ರೂ. ೧೦೦**
**ಕನ್ನಡ ಸಂಘ ಕ್ರೈಸ್ಟ್ ಯೂನಿವರ್ಸಿಟಿ,** ಹೊಸೂರು ರಸ್ತೆ, ಬೆಂಗಳೂರು - ೫೬೦ ೦೨೯

**ಮಾತುಕತೆ** (ಹರಟೆಗಳ ಸಂಕಲನ) *ಶಾಂತಾದೇವಿ ಹಿರೇಮಠ*
**ಪುಟ : xiv + ೧೦೬ = ೧೨೦ ಬೆಲೆ : ರೂ. ೭೦**

**ನೆನಪಿನ ಬುತ್ತಿ** (ನಗೆಬರಹಗಳ ಸಂಕಲನ)
*ಶಾಂತಾದೇವಿ ಹಿರೇಮಠ*
**ಪುಟ : xxii + ೧೩೮ = ೧೬೦ ಬೆಲೆ : ರೂ. ೯೮**
*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಕುಕ್ಕೇಶ್ರೀ ಪ್ರಕಾಶನ,** ನಂ. ೨೧, ಮಾಚೋಹಳ್ಳಿ ಕಾಲೋನಿ, ವಿಶ್ವನೀಡಂ ಅಂಚೆ, ಬೆಂಗಳೂರು - ೫೬೦ ೦೯೧

**ಕರ್ನಾಟಕ ಕೇಸರಿ** (ಡಾ|| ಬಿ. ಎ. ಸನದಿಯವರ ಆಯ್ದ ಕಥೆಗಳು)
*ಸಂಪಾದಕರು : ಬಿ. ವಿ. ಶಿವಾನಂದ ರಾವ್*
**ಪುಟ : ೨೭೨ + iv ಬೆಲೆ : ರೂ. ೨೦೦**
**ಜಾಗೃತಿ ಪ್ರಿಂಟರ್ಸ್,** ನಂ. ೫೬/೧-೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆ ಪಾಳ್ಯ, ಮಾಗಡಿ ಮುಖ್ಯರಸ್ತೆ, ಬೆಂಗಳೂರು – ೫೬೦ ೦೯೧

**ಅಲೆಮಾರಿಯ ಅಂತರಂಗ** ಕುಪ್ಪೆ ನಾಗರಾಜ
**ಪುಟ : ೨೧೬ ಬೆಲೆ : ರೂ. ೧೨೫**
**ನವಕರ್ನಾಟಕ ಪಬ್ಲಿಕೇಷನ್ಸ್,** ಎಂಬೆಸಿ ಸೆಂಟರ್, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

**ಕನ್ನಡ ಎಂದರೆ ಬರಿ ನುಡಿ ಅಲ್ಲ...** (ಗೀತ ಸಂಕಲನ)
*ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ*
**ಪುಟ : ೨೦೮ ಬೆಲೆ : ರೂ. ೧೧೦**
**ಪ್ರಿಯದರ್ಶಿನಿ ಪ್ರಕಾಶನ,** ನಂ. ೧೩೮, ೭ನೇ 'ಸಿ' ಮುಖ್ಯರಸ್ತೆ, ಆರ್.ಪಿ.ಸಿ. ಬಡಾವಣೆ (ಹಂಪಿನಗರ), ವಿಜಯನಗರ ೨ನೇ ಹಂತ, ಬೆಂಗಳೂರು - ೫೬೦ ೦೪೦

**ಬರೆದಂತೆ ಹರಿದ ಚಿತ್ತ** (ಸಾಹಿತ್ಯ ವಿಮರ್ಶೆಯ ಬರಹಗಳು)
*ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ*
**ಪುಟ : ೧೦೪ ಬೆಲೆ : ರೂ. ೭೦**
**ಸಿವಿಜಿ ಬುಕ್ಸ್ ಪ್ರೈವೇಟ್ ಲಿಮಿಟೆಡ್,** ನಂ. ೨೭೭, ೫ನೇ ಅಡ್ಡರಸ್ತೆ, ವಿಧಾನಸೌಧ ಎಕ್ಸ್‌ಟೆನ್ಷನ್, ಲಗ್ಗೆರೆ, ಬೆಂಗಳೂರು - ೫೬೦ ೦೫೮

**ಪೂರ್ವಭಾಷಿ** (ಕವನ ಸಂಕಲನ) *ಆರ್. ತಾರಿಣಿ ಶುಭದಾಯಿನಿ*
**ಪುಟ : ೮೮ ಬೆಲೆ : ರೂ. ೫೦**
**ಗೀತಾಂಜಲಿ ಪುಸ್ತಕ ಪ್ರಕಾಶನ,** ಕಂದಾಯ ಭವನ, ನೂರಡಿ ರಸ್ತೆ, ರಾಜೇಂದ್ರ ನಗರ, ಶಿವಮೊಗ್ಗ - ೫೭೭ ೨೦೧

**ಅಲೆಮಾರಿ ವೈದ್ಯನ ಆತ್ಮಕತೆ** *ಡಾ|| ಎಂ. ಬಿ. ಮರಕಿಣಿ*
**ಪುಟ : ೧೮೮ + iv ಬೆಲೆ : ರೂ. ೯೫**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೆ ಮಹಡಿ, ಎಂ.ಆರ್.ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

**ಭಾರತದಲ್ಲಿ ನಡೆದ ಸ್ವಾತಂತ್ರ್ಯ ಯುದ್ಧಗಳು** (ಭಾರತ ಮಹಿಮೆಯ ವಿವಿಧ ವಿಷಯಗಳ ಲೇಖನಗಳು) *ಸಂ. : ಪಿ. ವಿಜಯಕುಮಾರ*
**ಪುಟ : ೧೧೬ ಬೆಲೆ : ರೂ. ೧೫೦**
೨೩೩, ಕವಿರಶ್ಮಿ, ರಾಮತೀರ್ಥನಗರ, ಬೆಳಗಾವಿ-೫೯೦೦೧೫

**ಕವಿತೆನೆ** *ಜಿ. ಶಂಭುಲಿಂಗಯ್ಯ*
**ಪುಟ : xxiii +೯೭ = ೧೨೦ ಬೆಲೆ : ರೂ. ೧೦೦**
**ಜಿ. ಶಂಭುಲಿಂಗಯ್ಯ ಗಾಣದಾಳ ಮಠ,** ಕವಿಸದನ, ೧೦೮, ೬ನೇ ವಾರ್ಡ್, ಕನಕದಾಸ ವೃತ್ತ ಹಿಂದೆ, ಕಾಯಿಪಲ್ಲೆ ಮಾರ್ಕೆಟ್ ಹತ್ತಿರ, ಸಿರುಗುಪ್ಪ - ೫೮೩ ೧೨೧

**ಬೆಳುವಲ** (ಶ್ರೀ ಎಚ್. ದೇವೀರಪ್ಪನವರ ಅಭಿನಂದನ ಗ್ರಂಥ)
*ಸಂ. : ಡಾ|| ಚನ್ನೇಶ್ ಹೊನ್ನಾಳಿ, ಡಾ|| ನಾ. ಕೊಟ್ರೇಶ್ ಉತ್ತಂಗಿ*
**ಪುಟ : x + ೩೨೧ = ೩೩೧ ಬೆಲೆ : ರೂ. ೩೦೦**
**ಶ್ರೀ ಎಚ್. ದೇವೀರಪ್ಪ ಜನ್ಮ ಶತಮಾನೋತ್ಸವ ಸಮಿತಿ,** ಹೊನ್ನಾಳಿ

**ಹೊಸಗನ್ನಡ ವಾಙ್ಮಯ ವಿಹಾರ** *ಡಾ|| ಜಿ. ಎನ್. ಉಪಾಧ್ಯ*
**ಪುಟ : ೨೭೨ = ೧೨೦ ಬೆಲೆ : ರೂ. ೨೦೦**
**ಡಾ|| ಜಿ. ಎನ್. ಉಪಾಧ್ಯ,** ಕನ್ನಡ ವಿಭಾಗದ ಮುಖ್ಯಸ್ಥರು, ಮುಂಬೈ ಯುನಿವರ್ಸಿಟಿ, ವಿದ್ಯಾನಗರಿ, ಮುಂಬಯಿ-೯೮

**ಕಥಾ ಸೌರಭ** (ಮಕ್ಕಳಿಗಾಗಿ ೮೭ ಕಥೆಗಳು)
**ಪುಟ : ೨೩೪ ಬೆಲೆ : ರೂ. ೧೫೦**

**ಕಥಾ ಚಂದನ** (ಮಕ್ಕಳಿಗಾಗಿ ೧೦೫ ಕಥೆಗಳು)
**ಪುಟ : ೧೯೧ ಬೆಲೆ : ರೂ. ೧೨೦**

**ಕಥಾ ಸುಗಂಧ** (ಮಕ್ಕಳಿಗಾಗಿ ೮೦ ಕಥೆಗಳು)
**ಪುಟ : ೨೨೧ ಬೆಲೆ : ರೂ. ೧೪೦**
ಮೇಲಿನ ಮೂರು ಪುಸ್ತಕಗಳ ಲೇಖಕರು ಸಿ. ಎನ್. ಕೃಷ್ಣಮೂರ್ತಿ
**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೮೫



# ಐಸನ್ ಧೂಮಕೇತು – ಸಂದೇಹಗಳು

**ಈ** ತಿಂಗಳ 28ರಂದು ಸೂರ್ಯನನ್ನು ಸಮೀಪಿಸಲಿರುವ ಐಸನ್ ಧೂಮಕೇತು ಸುದ್ದಿಯನ್ನೂ ಮಾಡುತ್ತಿದೆ. ಈ ಬಗ್ಗೆ ಹಲವಾರು ಸಂದೇಹಗಳು ಮತ್ತು ಪ್ರಶ್ನೆಗಳೂ ಕೇಳಿಬಂದಿವೆ.

ಕಳೆದ ವರ್ಷದ ಸೆಪ್ಟೆಂಬರ್‌ನಲ್ಲಿಯೇ ಪತ್ತೆಯಾದ ಇದು ಶತಮಾನದ ಧೂಮಕೇತುವಾಗುವುದೆಂದು ನಿರೀಕ್ಷಿಸಲಾಗಿತ್ತು. ಇದನ್ನು ಕಂಡುಹಿಡಿದವರು ಬೆಲಾರಸ್‌ನ ವಿಟಾಲಿ ನೆವ್ಸ್ಕಿ ಮತ್ತು ರಷ್ಯಾದ ಆರ್ಟಿಯೋಮ್ ನೋವಿಚೊನೊಕ್. ರಷ್ಯಾದ ಇಂಟರ್ ನ್ಯಾಷನಲ್ ಆಪ್ಟಿಕಲ್ ಸೈಂಟಿಫಿಕ್ ನೆಟ್‌ವರ್ಕ್‌ನ 40 ಸೆಂ ಮೀ ದೂರದರ್ಶಕದಿಂದ ಇದನ್ನು ಕಂಡುಹಿಡಿದ ಕಾರಣ ಐಸನ್ ಎಂಬ ಹೆಸರೇ ಇಡಲಾಗಿದೆ. ಸೆಪ್ಟೆಂಬರ್‌ನಲ್ಲಿ ಕಂಡುಹಿಡಿದ ಕಾರಣ ಇದರ ಶಾಸ್ತ್ರೀಯ ಅಂಕಿತ ಸಿ 2012 ಎಸ್ 1 ಎಂದು. ಆಗ ಇದು ದೊಡ್ಡ ದೂರದರ್ಶಕಗಳಿಗೆ ಮಾತ್ರ ನಿಲುಕುವಂತಿತ್ತು. ಒಂದು ಬಿಲಿಯನ್ ಕಿಮೀ ಗಳಿಗಿಂತ ದೂರದಲ್ಲಿರುವಾಗಲೇ ಪತ್ತೆಯಾದ ಕಾರಣ ಇದು ಬರುಬರುತ್ತಾ ಬಹಳ ಪ್ರಕಾಶ ಪಡೆಯಬಹುದು ಎಂದು ಲೆಕ್ಕ ಹಾಕಲಾಗಿತ್ತು. ಜನವರಿಯಿಂದೀಚೆಗೆ ಅದರ ಪ್ರಕಾಶ ಹೆಚ್ಚಲೇ ಇಲ್ಲ. ಇಲ್ಲದಿದ್ದರೆ ಇಷ್ಟು ಹೊತ್ತಿಗಾಗಲೇ ಸಣ್ಣ ದೂರದರ್ಶಕಗಳಿಂದ ಹವ್ಯಾಸೀ ವೀಕ್ಷಕರು ಚಿತ್ರ ತೆಗೆದಿರಬಹುದಾಗಿತ್ತು. ಹೀಗೆ ಅದರ ಪ್ರಕಾಶದ ಹೆಚ್ಚಳವನ್ನು ಅಧ್ಯಯನ ಮಾಡಿರುವ ವಿಜ್ಞಾನಿಗಳು ಇದು ಓರ್ಟ್ ಮೋಡದಿಂದ ಬರುತ್ತಿರುವ ಧೂಮಕೇತು; ಬಹಳ ಸಣ್ಣದು ಎಂದೂ ಊಹಿಸಿದ್ದಾರೆ. ಹಬಲ್ ದೂರದರ್ಶಕ ಇದರ ಚಿತ್ರಗಳನ್ನು ತೆಗೆದು ಕಳಿಸಿದೆ. ಧೂಮಕೇತುವಿನ ನ್ಯೂಕ್ಲಿಯಸ್ ತಿರುಗುತ್ತಿರುವ ಅಕ್ಷ 30ಡಿಗ್ರಿಗಳಷ್ಟು ಓರೆಯಾಗಿದೆ ಎಂದು ಅವುಗಳಿಂದ ತಿಳಿದುಬಂದಿದೆ. ಇದರ ಅರ್ಥ ಏನು? ನ್ಯೂಕ್ಲಿಯಸ್ ಎಂಬ ಬಂಡೆಯ ಒಂದು ಭಾಗ ಎಂದೂ ಸೂರ್ಯನಿಗೆ ಒಡ್ಡಿಕೊಂಡಿಲ್ಲ ಎಂದು. ಅಂದರೆ ನಾಲ್ಕೂವರೆ ಬಿಲಿಯನ್ ವರ್ಷಗಳ ಹಿಂದೆ ಅದು ರಚನೆಯಾದಾಗಿನಿಂದ ಇಂದಿನವರೆಗೂ ಅದಕ್ಕೆ ಸೂರ್ಯ ಕಿರಣಗಳೇ ತಲುಪಿಲ್ಲ. ಅಲ್ಲಿ ಸಾಕಷ್ಟು ವಸ್ತು ಇನ್ನೂ ಹೆಪ್ಪುಗಟ್ಟಿಕೊಂಡೇ ಇದೆ. ನವೆಂಬರ್ 28ಕ್ಕೆ ಮೊದಲ ಬಾರಿ ಆ ಭಾಗಕ್ಕೆ ಸೂರ್ಯ ಕಿರಣಗಳು ಅಪ್ಪಳಿಸಲಿವೆ. ಆಗ ಅದು ಸೂರ್ಯನ ಕರೋನದ ಒಳಗೇ ಇರುವುದಾದ್ದರಿಂದ ಯಾವ ಬಗೆಯ ಪರಿಣಾಮ ಉಂಟಾಗಬಹುದು? ಎಂದು ಕುತೂಹಲ ಉಂಟಾಗಿದೆ. ಅಂದಿನ ವರೆಗೂ ಧೂಮಕೇತು ಹೋಳಾಗದೇ ಉಳಿದುಕೊಂಡಿದ್ದರೇ ಅಂದು ಹೋಳಾಗಬಹುದು. ತುಂಡುಗಳು ಸೂರ್ಯನ ಮೇಲೆಯೇ ಬಿದ್ದು ನಾಶವಾಗುವುವು.

ಇನ್ನೊಂದು ಸಾಧ್ಯತೆಯೂ ಇದೆ. ಅತಿ ಉದ್ದದ ಬಾಲ ಬೆಳೆದುಕೊಂಡು ನಮ್ಮ ಆಕಾಶದಲ್ಲಿ ಕೆಲವು ದಿನಗಳ ಮಟ್ಟಿಗಾದರೂ ಮನೋಹರವಾಗಿ ಕಾಣಿಸಬಹುದು. ಈಚೆಗೆ ಬಂದು ಹೋದ ಲವ್ ಜಾಯ್ ಎಂಬ ಧೂಮಕೇತು ಹೀಗೆ ಸೂರ್ಯನ ಕರೋನದೊಳಕ್ಕೆ ನುಗ್ಗಿ ಬದುಕಿ ಈಚೆ ಬಂದಿತು. ಅದರ ವರ್ಣರಂಜಿತ ಬಾಲದ ನೋಟ ಅನಿರೀಕ್ಷಿತವಾಗಿ ಕ್ರಿಸ್‌ಮಸ್ ಉಡುಗೊರೆಯಂತೆ ಹವ್ಯಾಸಿಗಳಿಗೆ ದೊರಕಿತು.

ಐಸನ್ ಧೂಮಕೇತುವಿನಿಂದ ಬಾಲದ ರೂಪದಲ್ಲಿ ಹೊರಬಿದ್ದ ಧೂಳು ಭಾರೀ ಪ್ರಮಾಣದಲ್ಲಿ ಇರಬಹುದಾದ್ದರಿಂದ ಜನವರಿಯಲ್ಲಿ ಆಕರ್ಷಕ ಉಲ್ಕಾವೃಷ್ಟಿಗಳೂ ಆಗಬಹುದು. ಮೂಲ ಬಂಡೆ ಅತಿ ಚಿಕ್ಕ ಕಾಯವಾಗಿ ದೂರ ಸರಿಯಬಹುದು. ಮುಂದೆ ಸುಮಾರು 10–12 ಮಿಲಿಯನ್ ವರ್ಷಗಳಾಗುವ ವರೆಗೂ ಅದರ ದರ್ಶನ ಇರುವುದಿಲ್ಲ.

ಸ್ವಿಫ್ಟ್ ಎಂಬ ಬಾಹ್ಯಾಕಾಶ ನೌಕೆ ಬಾಲದ ಮತ್ತು ನ್ಯೂಕ್ಲಿಯಸ್‌ನ ರೋಹಿತಗಳನ್ನು ಪಡೆದುಕೊಂಡಿದೆ. ಇದರ ಸಹಾಯದಿಂದ ಬಂಡೆಯ ಗಾತ್ರವನ್ನು ಲೆಕ್ಕ ಮಾಡುವುದು ಸಾಧ್ಯವಾಗಿದೆ.

ಅಕ್ಟೋಬರ್ 1ರಂದು ಮಂಗಳ ಗ್ರಹವನ್ನು ಸಮೀಪಿಸಿದಾಗ ಮಂಗಳದ ಮೇಲೆ ಅಡ್ಡಾಡುತ್ತಿರುವ ಹಲವಾರು ಉಪಕರಣಗಳು ಅದರ ಚಿತ್ರಗಳನ್ನು ತೆಗೆದು ಕಳಿಸಿದವು. ಈ ಚಿತ್ರಗಳು ಬಹಳ ನಿರಾಶೆ ಉಂಟುಮಾಡಿದವು. ಧೂಮಕೇತು ಈಗಾಗಲೇ ಹೋಳಾಗಿಹೋಗಿದೆ ಎಂದು ಕೆಲವರು ಸಂದೇಹ ವ್ಯಕ್ತಪಡಿಸಿದ್ದಾರೆ.

ಈಗಾಗಲೇ ನಮ್ಮ ಆಕಾಶದಲ್ಲಿ ಈ ಧೂಮಕೇತು ಮಂಗಳದ ಸಮೀಪವೇ ಕಾಣುತ್ತಿದೆ. ಕ್ರಮೇಣ ಅದು ಸೂರ್ಯನತ್ತ ಸರಿಯುವಾಗ ಕನ್ಯಾ ರಾಶಿಯ ಚಿತ್ರಾ ನಕ್ಷತ್ರದ ಸಮೀಪವೇ ಹಾದುಹೋಗಲಿದೆ. ಆದ್ದರಿಂದ ನವೆಂಬರ್ ಮಧ್ಯಭಾಗದಲ್ಲಿ ಚಿತ್ರಾ ನಕ್ಷತ್ರದ ಆಸುಪಾಸನ್ನು ಗಮನಿಸುತ್ತಿರಿ. ಮುಂದೆ ಅದು ತುಲಾ ರಾಶಿಯತ್ತ ಚಲಿಸಿ, ವೃಶ್ಚಿಕವನ್ನು ಮುಟ್ಟುವುದು. ನವೆಂಬರ್ 28ಕ್ಕೆ ದಿಕ್ಕು ಬದಲಿಸುವುದು. ಬದುಕಿ ಉಳಿದರೆ ಡಿಸೆಂಬರ್‌ನಲ್ಲಿ ಒಫಿಯೂಕಸ್ ಮತ್ತು ಹರ್‌ಕ್ಯುಲಿಸ್ ಮೂಲಕ ಹಾದುಹೋಗುವುದು.

ಬಾಲ ಕಾಣುವುದೋ ಇಲ್ಲವೋ – ಕ್ಷೀಣ ನಕ್ಷತ್ರದಂತೆ ಬರಿಗಣ್ಣಿಗೆ ಕಾಣಬಹುದು ಎಂದು ನಿರೀಕ್ಷೆ.




*ಆಕಾಶದಲ್ಲಿ ಐಸನ್ ಧೂಮಕೇತುವಿನ ಪಥ*

**ಡಾ|| ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



ಬಹುರಾಷ್ಟ್ರೀಯ ಕಂಪನಿಗಳು ೬೦ನೇ ದಶಕದಿಂದಲೂ ಜಗತ್ತಿನ ಹಲವಾರು ರಾಷ್ಟ್ರಗಳಲ್ಲಿ ತಮ್ಮ ವಹಿವಾಟು ನಡೆಸುತ್ತಾ ಬಂದಿವೆ. ಈ ಕಂಪನಿಗಳ ವಿರುದ್ಧ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅನೇಕ ಪ್ರತಿಭಟನೆಗಳಾಗಿವೆ. ಉದಾಹರಣೆ : ಡಾ॥ ಓಲೆ ಹ್ಯಾನ್ಸನ್ ಪ್ರತಿಭಟಿಸಿದ ಸೀಬಾ ಕಂಪನಿಯು ತಯಾರಿಸುವ ಮೆಕ್ಸ್‌ಫಾರ್ಟ್ . ಆದರೆ ಈ ಕಂಪನಿ ಪ್ರತಿಭಟನೆ ಮಾಡುವವರೆಗೆ ತಮ್ಮ ಮೆಕ್ಸ್‌ಫಾರ್ಟ್ ಔಷಧಿ ಒಳ್ಳೆಯದೆಂದೇ ವಾದಿಸುತ್ತಾ ಬಂದಿದೆ. ನಂತರ ಈ ಔಷಧಿ ಅಪಾಯಕರವೆಂದು ಒಪ್ಪಿಕೊಳ್ಳುವುದೇ ಅಲ್ಲದೆ ಕ್ಷಮೆ ಯಾಚಿಸಿದೆ. ಈ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ವಿರುದ್ಧ ಇರುವವರ ಜೀವ ತೆಗೆಯಲೂ ಹಿಂದೆ ಮುಂದೆ ನೋಡುವುದಿಲ್ಲವೆಂಬ ಅಂಶ ಬೆಳಕಿಗೆ ಬಂದಿದೆ.

ಆಧುನಿಕ ಔಷಧಿಗಳು ಆರೋಗ್ಯ ಸಾಧನೆಗೆ ಬಹುಮುಖ್ಯ ಸಾಧನ. ಭಾರತದಲ್ಲಿ ಔಷಧಿ ತಯಾರಿಸುವ ಉದ್ಯಮದ ಬೆಳವಣಿಗೆ ಅಪಾರ. ಈಗ ಇದು ೧ ಲಕ್ಷ ಕೋಟಿ ರೂಪಾಯಿ ವಹಿವಾಟಿನ ಉದ್ಯಮ. ಇದರಿಂದಾಗಿ ಜಗತ್ತಿನಲ್ಲಿ ಭಾರತ ಔಷಧಿ ತಯಾರಿಕೆಯಲ್ಲಿ ನಾಲ್ಕನೇ ಸ್ಥಾನದಲ್ಲಿದೆ. ೧೯೭೦ರಲ್ಲಿ ಭಾರತೀಯ ಪೇಟೆಂಟ್ ಕಾನೂನು ಜಾರಿಯಾಯಿತು. ೧೯೭೭ ವಿಶ್ವ ಆರೋಗ್ಯ ಸಂಸ್ಥೆ ಅಗತ್ಯ ಔಷಧಿಗಳ ಪಟ್ಟಿ ತಯಾರಿಸಿ, ಆ ಔಷಧಿಗಳನ್ನು ಜನರಿಗೆ ಒದಗಿಸಲು ಆದೇಶ ನೀಡಿತ್ತು, ಭಾರತದಲ್ಲಿ. ಆಗಿನಿಂದ ಅಗತ್ಯ ಔಷಧಿಗಳು ಕಡಿಮೆ ಬೆಲೆಯಲ್ಲಿ ಲಭ್ಯವಾಗತೊಡಗಿದವು ಹಾಗೂ ಜನರಿಗೆ ಔಷಧಿ ಬೆಲೆಯ ಹೊರೆ ಕಡಿಮೆಯಾಯಿತು. "ಭಾರತದ ಔಷಧಿ ಕ್ಷೇತ್ರದ ಬಗ್ಗೆ ಟಿಪ್ಪಣಿ ಮಾಡುತ್ತ ಭಾರತದಲ್ಲಿ ಸುಮಾರು ಎಲ್ಲ ಔಷಧಿಗಳನ್ನು ತಯಾರಿಸುವ ತಂತ್ರಜ್ಞಾನವಿದೆ" ಎಂದು ಹಾಥೀ ಸಮಿತಿ ವರದಿಮಾಡಿದೆ. ಈ ಬೆಳವಣಿಗೆಗೆ ಭಾರತೀಯ ಸಾರ್ವಜನಿಕ ಔಷಧಿ ಉದ್ಯಮ, ಪೇಟೆಂಟ್ ಕಾನೂನು ಹಾಗೂ ಸರಕಾರದ ಔದ್ಯೋಗಿಕ ನೀತಿ ಕಾರಣವಾದವು. ಔಷಧಿ ನೀತಿ ಹೇಳುವುದೇನೆಂದರೆ ಅಗತ್ಯ ಔಷಧಿಗಳು ಕಡಿಮೆ ಬೆಲೆಯಲ್ಲಿ ಎಲ್ಲರಿಗೂ ಎಲ್ಲೆಡೆಯೂ ದೊರಕಬೇಕು ಎಂದು. ಈ ನೀತಿಯ ಎಲ್ಲ ಅಂಶಗಳೂ ಭಾರತದಲ್ಲಿ ಜಾರಿಯಾದರೂ ಅಗತ್ಯ ಔಷಧಿಗಳು ವ್ಯಾಪಕವಾಗಿ ದೊರಕದಿರುವುದು ಹಾಗೂ ಅನಗತ್ಯ ಔಷಧಿಗಳು ದೊರಕುವಿಕೆಯನ್ನು ನಿಷೇಧಿಸಲು ಸಾಧ್ಯವಾಗದಿರುವುದು ಮುಂದುವರಿಯಿತು.

**ಭಾರತದಲ್ಲಿ ಔಷಧಿ ಉದ್ಯಮ**

ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿ ಆದ ನಂತರ ಪಾಶ್ಚಿಮಾತ್ಯರು ಏಷ್ಯಾ ಖಂಡದಲ್ಲಿ ಮಾರುಕಟ್ಟೆಗಳನ್ನು ಹುಡುಕಿಕೊಂಡು ಹೊರಟರು. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಭಾರತದಲ್ಲಿ ಔಷಧಿ ವ್ಯಾಪಾರ ಆರಂಭಿಸಿದರು. ೧೯೦೭ರಲ್ಲಿ ಪಾರ್ಕ್ ಡೇವಿಸ್ ಎಂಬ ಕಂಪನಿ ಭಾರತದಲ್ಲಿ ಔಷಧಿ ವ್ಯಾಪಾರ ಪ್ರಾರಂಭಿಸಿತು. ಆ ಸಮಯದಲ್ಲಿ ಭಾರತದಲ್ಲಿ ಯಾವುದೇ ಭಾರತೀಯ ಔಷಧಿ ಕಂಪನಿಗಳಿರಲಿಲ್ಲ. ಮೊದಲನೇ ಮಹಾಯುದ್ಧಕ್ಕೆ ಮುಂಚೆ ಭಾರತವು ಎಲ್ಲಾ ಔಷಧಿಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಆದರೆ ಮೊದಲನೇ ಮಹಾಯುದ್ಧದ ಕಾಲದಲ್ಲಿ ಆಮದುಗಳು ನಿಂತುಹೋದವು. ಕಾರಣ ಯುದ್ಧದಲ್ಲಿ ತೊಡಗಿದ ದೇಶಗಳಿಗೆ ಮಾತ್ರ ಔಷಧಿಗಳನ್ನು ಸರಬರಾಜು ಮಾಡಲಾಗುತ್ತಿತ್ತು. ಆ ಹಂತದಲ್ಲಿ ರೋಗಪೀಡಿತ ಲಕ್ಷಾಂತರ ಭಾರತೀಯರಿಗೆ ಔಷಧಿಗಳು ದೊರಕದಂತಾಯಿತು. ಇದರಿಂದಾಗಿ ಸಾವು ನೋವುಗಳು ಅಪಾರವಾಗಿ ಸಂಭವಿಸಿದವು. ಆಗ ಭಾರತೀಯ ವಿಜ್ಞಾನಿಯಾದ ಆಚಾರ್ಯ ಪಿ. ಸಿ. ರಾಯ್, ಡಾ॥ ಘೋಷ್ ಮುಂತಾದವರು ಮಾಡಿದ ಪ್ರಯತ್ನದಿಂದಾಗಿ

# ಬಹುರಾಷ್ಟ್ರೀಯ ಕಂಪನಿಗಳು ಲಾಭಕ್ಕೋ? ಜನಾರೋಗ್ಯಕ್ಕೋ?

○

**ಡಾ॥ ಪ್ರಕಾಶ್ ಸಿ. ರಾವ್**

೧೯೨೦ರಲ್ಲಿ ಮೊದಲ ಬಾರಿಗೆ ಭಾರತೀಯ ಔಷಧಿ ಕಂಪನಿ ಸ್ಥಾಪನೆಯಾಯಿತು. ಜೊತೆಗೆ ಮಲೇರಿಯಾ, ಕಾಲಾಅಜಾರ್ ಮತ್ತಿತರ ಸಾಂಕ್ರಾಮಿಕ ಕಾಯಿಲೆಗಳಿಗೆ ರೋಗ ನಿರೋಧಕ ಔಷಧಿಗಳನ್ನು ತಯಾರಿಸಲಾಯಿತು.

ಮೊದಲನೇ ಮಹಾಯುದ್ಧದ ನಂತರ ಮತ್ತೆ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ತಮ್ಮ ವ್ಯಾಪಾರ ಆರಂಭಿಸಿದವು. ಆ ಹಂತದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಭಾರತೀಯ ಕಂಪನಿಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡು ತಮ್ಮ ದೇಶದ ಕಂಪನಿಯ ಔಷಧಿಗಳನ್ನು ಅಗತ್ಯವಿರಲಿ, ಇಲ್ಲದಿರಲಿ, ಭಾರತೀಯ ಕಂಪನಿಗಳ ಮೇಲೆ ಹೇರುತ್ತಿದ್ದವು. ನಂತರ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ತಮ್ಮ ಕಂಪನಿಯ ಕಛೇರಿಗಳನ್ನು ತೆರೆದವು. ಈ ಕಂಪನಿಗಳು ಭಾರತಕ್ಕೆ ಬೇಕಾಗುವ ಔಷಧಿಗಳ ಬದಲಾಗಿ ತಮ್ಮ ದೇಶದಲ್ಲಿ ತಯಾರಾಗಿ ಉಳಿದಿರುವ ಔಷಧಿಗಳನ್ನು ಭಾರತಕ್ಕೆ ತಂದು ಮಾರುತ್ತಿದ್ದವು. ಈ ಬಹುರಾಷ್ಟ್ರೀಯ ಕಂಪನಿಗಳು ಬೇರೆ ಬೇರೆ ರಾಷ್ಟ್ರಗಳಲ್ಲಿ ತಮ್ಮ ವಹಿವಾಟು ಇಟ್ಟುಕೊಂಡು ಅಲ್ಲಿ ವ್ಯಾಪಾರ ಮಾಡಿ, ಲಾಭದ ಹಣವನ್ನು ತಮ್ಮ ದೇಶಕ್ಕೆ ಕಳುಹಿಸುವ ವ್ಯವಸ್ಥೆ ಮಾಡಿಕೊಂಡಿದ್ದವು. ಈ ವ್ಯವಸ್ಥೆಯನ್ನು ಭಾರತ ಹಾಗೂ ಹಲವಾರು ದೇಶಗಳು ಯಾವ ಕರಾರೂ ಇಲ್ಲದೇ ಒಪ್ಪಿಕೊಂಡಿದ್ದವು. ಇದರಿಂದಾಗಿ ಈ ಕಂಪನಿಗಳು ಅಪಾರ ಲಾಭ ಮಾಡುತ್ತಿದ್ದವು ಹಾಗೂ ನಮಗೆ ಬೇಕಾಗುವ ಔಷಧಿಗಳನ್ನು ಒದಗಿಸುತ್ತಿರಲಿಲ್ಲ. ಔಷಧಿಗಳು ದುಬಾರಿಯಾಗಿದ್ದವು. ಆದರೆ ಬಹುರಾಷ್ಟ್ರೀಯ ಕಂಪನಿಗಳು ಮೂಲ ಔಷಧಿಯನ್ನು ಹೆಚ್ಚಿನ ಪ್ರಮಾಣದಲ್ಲಿ ತಯಾರಿಸುವುದಕ್ಕೆ ಆಸಕ್ತಿ ವಹಿಸಲಿಲ್ಲ. ಮೂಲ ಔಷಧಿ ತಯಾರಿಸಿದರೆ ಯಾವುದೇ ಒಂದು ದೇಶ ತನ್ನ ಔಷಧಿ ಕ್ಷೇತ್ರದಲ್ಲಿ ಸ್ವಾವಲಂಬನೆ ಸಾಧಿಸಲು ಸಹಾಯಕ. ಕೇವಲ ದಿನನಿತ್ಯ ಬಳಸುವ ಔಷಧಿಗಳನ್ನು ತಯಾರಿಸಿ ಅವನ್ನು ಮಾರುವುದು ಕಂಪನಿಗೆ ಮಾತ್ರ ಲಾಭ ತರುವಂತಹದ್ದು. ಆದರೆ ದೇಶದ ಸ್ವಾವಲಂಬನೆಗೆ ಸಹಾಯಕವಾಗದು. ಈ ಹಂತದಲ್ಲಿ ಭಾರತೀಯ ಕಂಪನಿಗಳು ಬಹುರಾಷ್ಟ್ರೀಯ ಕಂಪನಿಗಳ ಪೈಪೋಟಿ ಎದುರಿಸಲು ಸಾಧ್ಯವಿರಲಿಲ್ಲ. ಕ್ರಮೇಣ ಈ ಬಹುರಾಷ್ಟ್ರೀಯ ಕಂಪನಿಗಳು ಭಾರತೀಯ ಕಂಪನಿಗಳನ್ನು ಹಿಂದಕ್ಕೆ ತಳ್ಳಿ ಔಷಧಿ ಕ್ಷೇತ್ರದ ಮೇಲೆ ಹಿಡಿತ ಸಾಧಿಸಿದವು.

**ಪಟ್ಟಿ ೧**

| ಬಹುರಾಷ್ಟ್ರೀಯ ಕಂಪನಿಯ ಹೆಸರು | ಭಾರತದಲ್ಲಿ ಪ್ರಾರಂಭವಾದ ವರ್ಷ |
|---|---|
| ಪಾರ್ಕ್ ಡೇವಿಸ್ | ೧೯೦೭ |
| ಬರೋಸ್ ವೆಲ್‌ಕಂ | ೧೯೧೨ |
| ಆಂಗ್ಲೋ ಫ್ರೆಂಚ್ | ೧೯೨೩ |
| ಗ್ಲ್ಯಾಕ್ಸೋ | ೧೯೨೪ |



ಈ ಹಂತದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಭಾರತದಲ್ಲಿ ತಳವೂರಿ ಮುಂದಿನ ಹಂತದ ಬೆಳವಣಿಗೆಗೆ ಮುಂದಾದವು. ಎಲ್ಲ ಬಹುರಾಷ್ಟ್ರೀಯ ಕಂಪನಿಗಳೂ ಒಗ್ಗೂಡಿ 'ಭಾರತದ ಔಷಧಿ ಉತ್ಪಾದಕರ ಸಂಘಟನೆ' ಸ್ಥಾಪಿಸಿಕೊಂಡು ಭಾರತ ಸರಕಾರದ ಮೇಲೆ ಪ್ರಭಾವ ಬೀರತೊಡಗಿದವು. ಇದರ ಪರಿಣಾಮವಾಗಿ ೧೯೪೮ರಲ್ಲಿ ಭಾರತ ಸರಕಾರ ಘೋಷಿಸಿದ ಕೈಗಾರಿಕಾ ನೀತಿಯಲ್ಲಿ ವಿದೇಶೀ ಕಂಪನಿಗಳ ಪಾತ್ರವನ್ನು ಗುರುತಿಸಿದ್ದರಿಂದ ವಿದೇಶೀ ಕಂಪನಿಗಳು ದೊಡ್ಡ ಪ್ರಮಾಣದಲ್ಲಿ ಭಾರತವನ್ನು ಪ್ರವೇಶಿಸುವಂತಾಯಿತು. ಬಹುರಾಷ್ಟ್ರೀಯ ಕಂಪನಿಗಳು ಭಾರತಕ್ಕೆ ಬಂಡವಾಳವನ್ನು ಹಾಗೂ ಆಧುನಿಕ ತಂತ್ರಜ್ಞಾನವನ್ನು ತಂದು ಭಾರತದಲ್ಲಿ ಔದ್ಯೋಗಿಕ ತಳಪಾಯ ಹಾಕಬಹುದೆಂದು ನಿರೀಕ್ಷಿಸಲಾಗಿತ್ತು. ಆದರೆ ಈ ನಿರೀಕ್ಷೆ ಸುಳ್ಳಾಯಿತು ಎಂಬುದು ಈಗ ಸ್ಪಷ್ಟವಾಗಿದೆ. ಅದಲ್ಲದೆ, ಈ ಕಂಪನಿಗಳು ದೇಶದ ಆರ್ಥಿಕತೆಗೆ ಸಹಾಯಕವಾಗುವಂತಹ ಮೂಲ ಔಷಧಿಗಳನ್ನು ತಯಾರಿಸುವ ಬದಲು ಸಾಮಾನ್ಯವಾಗಿ ಬಳಸುವ ಔಷಧಿಗಳನ್ನು ತಯಾರಿಸುವುದರಲ್ಲಿ ಹೆಚ್ಚಿನ ಆಸಕ್ತಿ ವಹಿಸಿದವು ಎಂಬುದು ಸ್ಪಷ್ಟವಾಯಿತು.

**ಔಷಧಿ ಅಂಗಡಿಗಳಲ್ಲಿ ದೊರಕುವ ಔಷಧಿಗಳು– ಬಳಸುವ ಔಷಧಿಗಳು**

ಭಾರತದಲ್ಲಿ ೧೯೫೪ರಲ್ಲಿ ಹಿಂದುಸ್ಥಾನ್ ಆ್ಯಂಟಿಬಯಾಟಿಕ್ ಮತ್ತು ೧೯೬೦ರಲ್ಲಿ ಸೋವಿಯತ್ ನೆರವಿನಿಂದ ಇಂಡಿಯನ್ ಡ್ರಗ್ ಆಂಡ್ ಫಾರ್ಮಸ್ಯೂಟಿಕಲ್ ಸಂಸ್ಥೆ ಎರಡೂ ಅತ್ಯವಶ್ಯಕವಾದ ಔಷಧಿಗಳನ್ನು ತಯಾರಿಸಲು ಪ್ರಾರಂಭಿಸಿ ಭಾರತವನ್ನು ಸ್ವಾವಲಂಬನೆಯತ್ತ ಕೊಂಡೊಯ್ದವು. ಈ ಸಾರ್ವಜನಿಕ ಔಷಧಿ ಕಂಪನಿಗಳಿಂದಾಗಿ ಭಾರತದ ಔಷಧಿ ಸ್ಥಿತಿಗತಿ ಸುಧಾರಿಸಿತು. ೧೯೭೦ರಲ್ಲಿ ಪೇಟೆಂಟ್ ವ್ಯವಸ್ಥೆ ಜಾರಿಗೆ ಬಂದು ಭಾರತೀಯ ಸಾರ್ವಜನಿಕ ಔಷಧಿ ಕಂಪನಿಗಳು ಬಹುರಾಷ್ಟ್ರೀಯ ಕಂಪನಿಗಳೊಂದಿಗೆ ಪೈಪೋಟಿ ಎದುರಿಸಲು ಸಹಾಯಕವಾಯಿತು. ಭಾರತದಲ್ಲಿ ಅಗತ್ಯ ಔಷಧಿಗಳನ್ನು ತಯಾರಿಸುವ ತಂತ್ರಜ್ಞಾನ ದೊರೆಯಿತಲ್ಲದೆ ಔಷಧಿ ಬೆಲೆಗಳೂ ಕಡಿಮೆಯಾದವು. ಅದೇ ವೇಳೆ ಭಾರತ ಹೊರದೇಶಗಳಿಗೂ ಔಷಧಿಗಳನ್ನು ರಫ್ತು ಮಾಡಲು ಪ್ರಾರಂಭಿಸಿತು.

ಬಹುರಾಷ್ಟ್ರೀಯ ಕಂಪನಿಗಳಿಗೆ ಈ ಬೆಳವಣಿಗೆಯನ್ನು ಸಹಿಸಲಾಗಲಿಲ್ಲ. ಈ ಕಂಪನಿಗಳು ತಮ್ಮ ದೇಶದ ಸರಕಾರದ ಮೇಲೆ ಒತ್ತಡ ತಂದು ಭಾರತದ ಪೇಟೆಂಟ್ ಕಾಯಿದೆಯನ್ನು ಬದಲಿಸಲು ಒತ್ತಾಯಿಸಿದವು. ಅದರ ಪರಿಣಾಮವಾಗಿಯೇ ಅಂತಾರಾಷ್ಟ್ರೀಯ ವ್ಯಾಪಾರದ ಒಪ್ಪಂದದಲ್ಲಿ ಬೌದ್ಧಿಕ ಆಸ್ತಿ ವಿಷಯದ ಚರ್ಚೆಯನ್ನು ಸೇರಿಸಿ ಡಂಕಲ್ ಒಪ್ಪಂದಕ್ಕೆ ಹಲವಾರು ದೇಶಗಳಿಂದ (ಭಾರತವೂ ಸೇರಿ) ಸಹಿ ಹಾಕಿಸಿಕೊಳ್ಳಲಾಯಿತು. ಅಂತಾರಾಷ್ಟ್ರೀಯ ಒತ್ತಡಕ್ಕೆ ಭಾರತ ಮಣಿಯಿತು ಹಾಗೂ ನಂತರ ಬರಲಿದ್ದ ಪೇಟೆಂಟ್ ಕಾಯಿದೆ ತಿದ್ದುಪಡಿಗೆ ಕಾರಣವಾಯಿತು. ೨೦೦೫ರ ಹೊತ್ತಿಗೆ ಭಾರತದ ಪೇಟೆಂಟ್ ಕಾಯಿದೆಗೆ (೧೯೭೦) ತಿದ್ದುಪಡಿ ತಂದು ಬಹುರಾಷ್ಟ್ರೀಯ ಕಂಪನಿಗಳಿಗೆ ಸಹಾಯಕವಾಗುವಂತೆ ವ್ಯವಸ್ಥೆ ಮಾಡಲಾಯಿತು. ಪ್ರಾರಂಭದಲ್ಲಿ ಭಾರತದಲ್ಲಿ ಬಹುರಾಷ್ಟ್ರೀಯ ಔಷಧಿ

**ಮೂಲ ಔಷಧಿ :** ಚಿಕಿತ್ಸೆಗಾಗಿ ಬಳಸುವ ಮೂಲ ರಾಸಾಯನಿಕ. ಇದನ್ನು ತಯಾರಿಸಲು ಹೆಚ್ಚು ಬಂಡವಾಳ ಅಗತ್ಯ. ಇದನ್ನು ತಯಾರಿಸುವ ದೇಶ ಸ್ವಾವಲಂಬನೆ ಸಾಧಿಸಲು ಸಾಧ್ಯ. ಇದನ್ನು ಕಚ್ಚಾವಸ್ತು ಎನ್ನಬಹುದು. ಬಳಸುವ ಔಷಧಿ – ಮೂಲ ಔಷಧಿಗಳನ್ನು ಬಳಸಿ ತಯಾರಿಸಿದ ಔಷಧಿಗಳು. ಉದಾಹರಣೆ : ಮಾತ್ರೆಗಳು, ಚುಚ್ಚುಮದ್ದುಗಳು, ಮುಲಾಮು, ಇತ್ಯಾದಿಗಳನ್ನು ಬಳಸುವ ಔಷಧಿ ತಯಾರಿಕೆ ಕಂಪನಿಗೆ ಲಾಭದಾಯಕ.

ಕಂಪನಿಗಳು ಔಷಧಿ ಕ್ಷೇತ್ರದ ಮೇಲೆ ತಮ್ಮದೇ ಹಿಡಿತವನ್ನಿಟ್ಟುಕೊಂಡಿದ್ದವು. ನಡುವೆ ಮೂರು ದಶಕಗಳ ಮಟ್ಟಿಗೆ ಅದು ಸಡಿಲಗೊಂಡಿತು. ಕಾರಣ ಭಾರತೀಯ ಪೇಟೆಂಟ್ ಕಾನೂನು ೧೯೭೦. ಆದರೆ ಈಗ ಮತ್ತೆ ಔಷಧಿ ಕ್ಷೇತ್ರವು ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿದೆ.

**ಬಹುರಾಷ್ಟ್ರೀಯ ಕಂಪನಿಗಳ ಲಾಭಕೋರ ನೀತಿ**

ಬಹುರಾಷ್ಟ್ರೀಯ ಔಷಧಿ ಕಂಪನಿಗಳ ಮೂಲ ಉದ್ದೇಶ ಲಾಭವಷ್ಟೇ ಹೊರತು, ಆರೋಗ್ಯ ಸುಧಾರಣೆಯಲ್ಲ. ಅವು ಔಷಧಿ ಕ್ಷೇತ್ರದಲ್ಲಿ ಹಲವಾರು ಅವೈಜ್ಞಾನಿಕ ಕ್ರಮಗಳನ್ನು ಜಾರಿಗೆ ತರುತ್ತ ಅಪಾರ ಲಾಭ ಗಳಿಸುತ್ತ ಬಂದಿವೆ. ಈ ವಿಷಯವು ಭಾರತ ಸರಕಾರಕ್ಕೆ ತಿಳಿದಿದ್ದರೂ ಅಂತಹ ಕಂಪನಿಗಳಿಗೆ ಸಹಾಯ ಮಾಡುತ್ತಾ ಬಂದಿರುವುದು ಶೋಚನೀಯ. ಅವು ಯಾವುವೆಂದರೆ :

೧. ಮೂಲ ಔಷಧಿಗಳನ್ನು ತಯಾರಿಸದೆ ಬಳಸುವ ಔಷಧಿಗಳನ್ನು ಮಾತ್ರ ತಯಾರಿಸುವುದು. ತೃತೀಯ ಜಗತ್ತಿನ ದೇಶಗಳಲ್ಲಿ ಭಾರತ ಸಾರ್ವಜನಿಕ ಔಷಧಿ ಕ್ಷೇತ್ರದ ಮೂಲಕ ಅಪಾರ ಪ್ರಮಾಣದಲ್ಲಿ ಮೂಲ ಔಷಧಿಗಳನ್ನು ತಯಾರಿಸುತ್ತಿರುವ ಏಕೈಕ ದೇಶವಾಗಿತ್ತು.

**ಪಟ್ಟಿ ೨**

| ಮೂಲ ಔಷಧಿ ಹಾಗೂ ಬಳಸುವ ಔಷಧಿಗಳ ಪ್ರಮಾಣ | | | |
|---|---|---|---|
| | ೧೯೭೫ | ೧೯೮೧ | ೧೯೮೭ |
| ಬಹುರಾಷ್ಟ್ರೀಯ ಕಂಪನಿ | ೧:೬ | ೧:೧೨.೩೩ | ೧:೧೦೨ |
| ಭಾರತೀಯ ಖಾಸಗಿ ಔಷಧಿ ಕಂಪನಿ | ೧:೮ | ೧:೨.೬ | ೧:೩.೪೪ |
| ಸಾರ್ವಜನಿಕ ವಲಯ | ೧:೦.೮ | ೧:೨.೬ | ೧:೧.೨ |

೨. ಬಹುರಾಷ್ಟ್ರೀಯ ಕಂಪನಿಗಳು ಅಗತ್ಯ ಔಷಧಿ ತಯಾರಿಕೆಗಿಂತ ಅನಗತ್ಯ ಔಷಧಿಗಳನ್ನು ತಯಾರಿಸಿ ಅಪಾರ ಲಾಭ ಮಾಡುತ್ತಿವೆ. ಇದರಿಂದಾಗಿ ಅಗತ್ಯ ಔಷಧಿಯ ಕೊರತೆ ಉಂಟಾಯಿತು.

**ಪಟ್ಟಿ ೩**

**ಯಾರು ಲಾಭಕೋರರು ?**

| ಔಷಧಿ ವರ್ಗ | ಒಟ್ಟು ಮಾರಾಟ ಕೋಟಿ ರೂ.ಗಳಲ್ಲಿ | ಬ.ರಾ.ಕ. | ಖಾಸಗಿ | ಸಾರ್ವಜನಿಕ |
|---|---|---|---|---|
| ಅನ್ನಾಂಗ ಪೌಷ್ಟಿಕಾಂಶವುಳ್ಳ ಔಷಧಿಗಳು | ೧೨೨.೭೫ | ೭೯.೩ | ೧೩.೬ | ೨.೧ |
| ಶೀತ, ಕೆಮ್ಮು ಔಷಧಿಗಳು | ೭೪.೦೫ | ೨೧.೦೦ | ೨೫.೮೩ | ೦.೧೨ |
| ಭೇದಿ ನಿಲ್ಲಿಸುವ ಔಷಧಿಗಳು | ೧೨.೩೧ | ೬೪.೬೮ | ೩೫.೨೦ | ೦.೦೩ |
| ಹೃದ್ರೋಗ ಸಂಬಂಧಿ ಔಷಧಿಗಳು | ೧೩.೬೮ | ೭೦.೫೮ | ೨೦.೨೬ | ೩.೭೬ |
| ಮಾನಸಿಕ ರೋಗದ ಔಷಧಿಗಳು | ೮.೧೮ | ೭೩.೫೭ | ೨೫.೭೨ | ೦.೭ |

*(ಆಪರೇಷನ್ ರಿಸರ್ಚ್ ಗ್ರೂಪ್ ಔಷಧಿ – ಕೈಗಾರಿಕೆ ತಪಾಸಣೆ, ೧೯೭೮)*

೩. ೮೦ರ ದಶಕದಲ್ಲಿ ಕೆಲವು ಅಗತ್ಯ ಔಷಧಿಗಳಿಗೆ ಸರಕಾರ ಬೆಲೆ ನಿಯಂತ್ರಣ ವಿಧಿಸಿತು. ಆಗ ಬಹುರಾಷ್ಟ್ರೀಯ ಕಂಪನಿಗಳು ಬೆಲೆ ನಿಯಂತ್ರಣವಿಲ್ಲದ ಅನಗತ್ಯ ಔಷಧಿಗಳನ್ನು ತಯಾರಿಸಿ ಹೆಚ್ಚು ಲಾಭ ಮಾಡಲು ಮುಂದಾದವು.

೪. ಭಾರತದ ಮೂಲ ಔಷಧಿಗಳನ್ನು ಕಡಿಮೆ ಬೆಲೆಗೆ ಪಡೆದು ಅಧಿಕ ಬೆಲೆಯ ಅಗತ್ಯ ಔಷಧಿಗಳನ್ನು ತಯಾರಿಸಿ ಮಾರುವುದು.

**ಪಟ್ಟಿ ೪**

| ಔಷಧಿ | ನಿಗದಿತ ಉತ್ಪಾದನೆ (ಟನ್‌ಗಳಲ್ಲಿ) ೧೯೭೯ | ಸಾಧಿಸಿದ ಉತ್ಪಾದನೆ (ಟನ್‌ಗಳಲ್ಲಿ) ೧೯೭೯ |
|---|---|---|
| ಐ.ಎನ್.ಎಚ್. (ಕ್ಷಯರೋಗದ ಔಷಧಿ) ಅಗತ್ಯ | ೮೦ | ೫೨ |
| ಪಿ.ಎ.ಎಸ್ (ಕ್ಷಯರೋಗ) ಅಗತ್ಯ | ೧೧೦ | ೯೯ |
| ಪ್ರೊಟೀನೆಕ್ಸ್ (ಆರೋಗ್ಯ ಪಾನೀಯ) ಅನಗತ್ಯ | ೧೧೦ | ೨೯೦ |
| ಟೆರಾಮೈಸಿನ್ (ಆ್ಯಂಟಿಬಯಾಟಿಕ್ ಚುಚ್ಚುಮದ್ದು) ಅನಗತ್ಯ | ೧೪ | ೫೪ |

೫. ಮೂಲ ಔಷಧಿ ಕಡಿಮೆ ಬೆಲೆಗೆ ಭಾರತದಲ್ಲಿ ಲಭ್ಯವಿದ್ದಾಗಲೂ ತಮ್ಮ ದೇಶದಿಂದ ಹೆಚ್ಚು ಬೆಲೆಯ ಮೂಲ ಔಷಧಿಯನ್ನು ಕೊಂಡು ಅಪಾರ ಬೆಲೆಗೆ ಮಾರಿ, ಆ ಹಣವನ್ನು ತಮ್ಮ ದೇಶಗಳಿಗೆ ಕಳುಹಿಸಿಕೊಡುವುದು.

ಉದಾಹರಣೆಗೆ, ೧೯೭೮ರಲ್ಲಿ ಭಾರತದಲ್ಲಿ ಲಿಬ್ರಿಯಂ ಎಂಬ ಔಷಧಿಯ ಮೂಲ ರಾಸಾಯನಿಕದ ಬೆಲೆ ಒಂದು ಕೆ.ಜಿ.ಗೆ ೩೧೭ ರೂ. ನಷ್ಟಿತ್ತು. ಆದರೆ ರೋಷ್ ಕಂಪನಿಯು ಇದೇ ಔಷಧಿಯನ್ನು ತಮ್ಮ ದೇಶದಲ್ಲಿ ಕೆ.ಜಿ. ಒಂದಕ್ಕೆ ರೂ. ೫,೫೫೫/–ನಂತೆ ಕೊಂಡು ಭಾರತದಲ್ಲಿ ಮಾರಿ ಅಪಾರ ಲಾಭ ಗಳಿಸಿದೆ.

**ಪಟ್ಟಿ ೫**

| ಔಷಧಿ | ಕೊಂಡುಕೊಂಡ ಬೆಲೆ ರೂ.ಗಳು | ಅಂತಾರಾಷ್ಟ್ರೀಯ ಬೆಲೆ ರೂ.ಗಳು | ಶೇ. ಲಾಭ |
|---|---|---|---|
| ಡಾಕ್ಸಿ ಸೈಕ್ಲಿನ್ (ಆ್ಯಂಟಿಬಯಾಟಿಕ್) | ೫೮೯೦ | ೧೩೭೭ | ೩೪೦.೫ |
| ಜೆಂಟಾಮೆಸಿನ್ (ಆ್ಯಂಟಿಬಯಾಟಿಕ್) | ೩೫೬೭೦ | ೩೫೦೦ | ೯೧೯.೧ |
| ಇಥಾಂಬ್ಯೂಟಾಲ್ (ಕ್ಷಯ ಚಿಕಿತ್ಸೆಗೆ) | ೬೨೦ | ೩೨೦ | ೯೩.೮ |
| ಪ್ರೊಸಮೈಡ್ (ಮೂತ್ರ ಉತ್ತೇಜಕ) | ೧೪೨೬ | ೪೫೦ | ೨೧೬.೯ |
| ಲಿಬ್ರಿಯಂ (ಮಾನಸಿಕ ಸಮಸ್ಯೆಗೆ) | ೫೫೫೫ | ೩೧೨ | ೧೬೮೦.೪ |

೬. ಬಹುರಾಷ್ಟ್ರೀಯ ಔಷಧಿ ಕಂಪನಿಗಳು ವೈದ್ಯರಿಗೆ ತಪ್ಪು ಮಾಹಿತಿ ನೀಡಿ, ಅವರಿಗೆ ಆಮಿಷ ಒಡ್ಡಿ ತಮ್ಮ ಔಷಧಿಗಳನ್ನು ಮಾರುತ್ತಾ ಬಂದಿವೆ. ಅನೇಕ ಬಾರಿ ಆ ಔಷಧಿಗಳು ಮಾರುಕಟ್ಟೆಯಲ್ಲಿ ಅತಿ ಹೆಚ್ಚು ಮಾರಾಟವಾಗುತ್ತವೆ. ವೈದ್ಯರೂ ಅಂಥ ಔಷಧಿಗಳನ್ನು ನಿರಂತರವಾಗಿ ಯಾವುದೇ ವಿವೇಚನೆ ಇಲ್ಲದೆ ರೋಗಿಗಳಿಗೆ ಸೇವಿಸಲು ಶಿಫಾರಸ್ಸು ಮಾಡುತ್ತಾರೆ.

ಇಡೀ ಪ್ರಪಂಚದಲ್ಲಿ ಭಾರತದಲ್ಲಿರುವಷ್ಟು ಔಷಧಿ ಕಂಪನಿಗಳ ಪ್ರತಿನಿಧಿಗಳು ಇನ್ನೆಲ್ಲೂ ಇಲ್ಲ. ಈ ಪ್ರತಿನಿಧಿಗಳು ಔಷಧಿ ಕಂಪನಿಗಳ ಆದೇಶದಂತೆ ವೈದ್ಯರಿಗೆ ತಪ್ಪು ತಿಳುವಳಿಕೆ ನೀಡುತ್ತಾರೆ. ಉದಾ: ಸೈಪ್ರೊಹ್ಯಾಪ್ಟಡಿನ್ ಔಷಧಿಯನ್ನು ಹಸಿವು ಹೆಚ್ಚಿಸಲು ಉಪಯೋಗಿಸಬಹುದು. ಸಂಮಿಶ್ರ ಆ್ಯಂಟಿಬಯಾಟಿಕ್‌ಗೆ ಅಮೇರಿಕದ ಎಫ್.ಡಿ.ಎ ಅನುಮತಿ ನೀಡಿದೆ. ವೈದ್ಯರಿಗೆ ತಮ್ಮ ಮಾತಿನಲ್ಲಿ ನಂಬಿಕೆ ಹುಟ್ಟುವಂತೆ ಮಾಡಲು ಕೆಲವು ವೈದ್ಯಕೀಯ ಗ್ರಂಥಗಳಲ್ಲಿ, ನಿಯತಕಾಲಿಕೆಗಳಲ್ಲಿ ಹೇಳಿರುವ ವಿವರಣೆಯನ್ನು ಎತ್ತಿ ತೋರಿಸಿದಾಗ ಅವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬದಲಾಯಿಸಿ ಮುದ್ರಿಸಿರುತ್ತಾರೆ. ವೈದ್ಯರಿಗೆ ಅದನ್ನು ಪರೀಕ್ಷೆ ಮಾಡಲು

ಸಮಯವಿಲ್ಲದಿರುವುದರಿಂದ ಅದೇ ಸರಿಯೆಂದು ಒಪ್ಪಿಕೊಳ್ಳುತ್ತಾರೆ. ವೈದ್ಯರನ್ನು ಸಂತೃಪ್ತಿಗೊಳಿಸಲು ಆಕರ್ಷಿತ ಉಡುಗೊರೆಗಳನ್ನು ನೀಡುತ್ತಾರೆ ಹಾಗೂ ಪಂಚತಾರಾ ಹೋಟೆಲ್‌ಗಳಲ್ಲಿ ಭೋಜನ ಕೂಟ ವ್ಯವಸ್ಥೆ ಮಾಡುತ್ತಾರೆ.

೭. ಬಹುರಾಷ್ಟ್ರೀಯ ಕಂಪನಿಗಳು ಔಷಧಿಗಳನ್ನು ತಮ್ಮ ವ್ಯಾಪಾರಿ ಗುರ್ತಿನ ಹೆಸರುಗಳಲ್ಲಿ ಮಾರಾಟ ಮಾಡುತ್ತ ತಮ್ಮ ಕಂಪನಿಯ ಔಷಧಿಗಳು ಗುಣಮಟ್ಟದಲ್ಲಿ ಶ್ರೇಷ್ಠವೆಂಬ ಕಟ್ಟು ಕಥೆಗಳನ್ನು ಬಿತ್ತರಿಸುತ್ತಾರೆ ಹಾಗೂ ನಮ್ಮ ದೇಶದಲ್ಲಿನ ಔಷಧಿಗಳ ತನಿಖಾ ವ್ಯವಸ್ಥೆಯ ನ್ಯೂನತೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಾರೆ.

೮. ಹಲವಾರು ದೇಶಗಳಲ್ಲಿ ನಿಷೇಧಗೊಂಡಿರುವ ಔಷಧಿಗಳನ್ನು ಭಾರತದಲ್ಲಿ ಮಾರುತ್ತಾರೆ. ಉದಾಹರಣೆ : ಕೆಮ್ಮಿನ ಔಷಧಿಯಲ್ಲಿ ಉಪಯೋಗಿಸುವ ಫೀನೈಲ್ ಪ್ರೋಪಲಮಿನ್ ಹೈಡ್ರೋಕ್ಲೋರೈಡ್ ಹಾಗೂ ನಿಮಿಸುಲೈಡ್.

ವಿದೇಶೀ ಕಂಪನಿಗಳು ಭಾರತದಲ್ಲಿ ಸಂಶೋಧನೆಗೆ ಯಾವುದೇ ಹಣ ಖರ್ಚು ಮಾಡುವುದಿಲ್ಲ. ಮುಂದುವರಿದ ದೇಶದಲ್ಲಿ ತಮ್ಮ ಒಟ್ಟು ಆದಾಯದ ಶೇ. ೧೦ರಿಂದ ೧೨ರಷ್ಟು ಹಣವನ್ನು ಸಂಶೋಧನೆಗೆ ವ್ಯಯ ಮಾಡಬೇಕಾಗುತ್ತದೆ. ಆದರೆ ಭಾರತದಲ್ಲಿ ಔಷಧಿ ಕಂಪನಿಗಳು ಮಾಡುವ ಸಂಶೋಧನೆ ಮಾರುಕಟ್ಟೆಯಲ್ಲಾಗುವ ಮಾರಾಟದ ಅಂಕಿಅಂಶದ ದಾಖಲಾತಿ ಮಾತ್ರ. ಸಂಶೋಧನೆ ಮಾಡಿದರೂ ಅದು ಅರ್ಬುದ ರಕ್ತದೊತ್ತಡ, ಸಕ್ಕರೆ ಕಾಯಿಲೆ ರೋಗಕ್ಕೇ ಹೊರತು ಭಾರತೀಯರ ಆರೋಗ್ಯ ಸಮಸ್ಯೆಗಳಿಗಲ್ಲ!

೧೯೭೭ರಲ್ಲಿಯೇ ಭಾರತೀಯ ಸಂಸತ್ತಿನಲ್ಲಿ ನೇಮಕಗೊಂಡ ಹಾಥೀ ಸಮಿತಿಯ ವರದಿ ಬಹುರಾಷ್ಟ್ರೀಯ ಕಂಪನಿಗಳ ಕಾರ್ಯವೈಖರಿ ಬಗ್ಗೆ ಈ ರೀತಿ ಹೇಳುತ್ತದೆ : "ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶದ ಔಷಧಿ ಉದ್ಯಮಕ್ಕೆ ಪೈಪೋಟಿ ಒಡ್ಡಿ ಜನರಿಗೆ ಕಡಿಮೆ ಬೆಲೆಯ ಔಷಧಿಯು ದೊರಕದಂತೆ ಮಾಡಿವೆ ಹಾಗೂ ಔಷಧಿ ಕ್ಷೇತ್ರದ ಮೇಲೆ ಹಿಡಿತ ಸಾಧಿಸಿವೆ. ಬಹುರಾಷ್ಟ್ರೀಯ ಕಂಪನಿಗಳನ್ನು ರಾಷ್ಟ್ರೀಕರಣಗೊಳಿಸಬೇಕು." ಇದಲ್ಲದೆ, ಔಷಧಿ ಕ್ಷೇತ್ರದ ಸುಧಾರಣೆ ಕುರಿತು ಅನೇಕ ಮಹತ್ವದ ಸಲಹೆಗಳನ್ನೂ ನೀಡಿದೆ.

**ಬಹುರಾಷ್ಟ್ರೀಯ ಔಷಧಿ ಕಂಪನಿಗಳು – ಇಂದು**

ಇತ್ತೀಚೆಗೆ ಬಹುರಾಷ್ಟ್ರೀಯ ಔಷಧಿ ಕಂಪನಿಗಳು ಭಾರತೀಯ ಕಂಪನಿಗಳನ್ನು ಕೊಂಡುಕೊಳ್ಳುತ್ತಿವೆ. ಇದು ಅಪಾಯಕಾರಿ ಬೆಳವಣಿಗೆ ಎಂದು ಉದ್ಯಮ ಹಾಗೂ ವ್ಯಾಪಾರ ಇಲಾಖೆಯಲ್ಲಿರುವ ಉದ್ಯೋಗ ಪ್ರೋತ್ಸಾಹ ಹಾಗೂ ಯೋಜನಾ ಇಲಾಖೆ ಹೇಳುತ್ತದೆ. ಇದನ್ನು ತಡೆಗಟ್ಟಬೇಕಾಗಿದೆ. ಈ ರೀತಿ ಕೊಂಡು ಕೊಳ್ಳುವುದನ್ನು ಬ್ರೌನ್‌ಫೀಲ್ಡ್ ಇನ್‌ವೆಸ್ಟ್‌ಮೆಂಟ್ ಎನ್ನುವರು. ಇದರ ವಿಶೇಷತೆ ಏನೆಂದರೆ ಬಹುರಾಷ್ಟ್ರೀಯ ಕಂಪನಿಗಳು ಆ ಕಂಪನಿಯಲ್ಲಿರುವ ವ್ಯವಸ್ಥೆಯನ್ನೇ ಉಪಯೋಗಿಸಿ ಔಷಧಿ ತಯಾರಿಸುತ್ತ ಹೋಗುತ್ತವೆಯೇ ಹೊರತು ಕಂಪನಿಯ ಬೆಳವಣಿಗೆ, ಮುಂತಾದವುಗಳ ಬಗ್ಗೆ ಕಿಂಚಿತ್ತೂ ಗಮನಹರಿಸುವುದಿಲ್ಲ.

ಜಗತ್ತಿನಲ್ಲಿ ಕೇವಲ ೧೬ ದೇಶಗಳಲ್ಲಿ ಔಷಧಿ ತಯಾರಿಕೆಯ ಕೆಲವು ವ್ಯವಸ್ಥೆಗಳಿವೆ. ಭಾರತದಲ್ಲಿ ಎಲ್ಲ ಅಗತ್ಯ ಔಷಧಿಗಳ ತಯಾರಿಕೆಗೆ ವ್ಯವಸ್ಥೆ ಇದೆ. ಆದ್ದರಿಂದ ಬಹುರಾಷ್ಟ್ರೀಯ ಕಂಪನಿಗಳಿಗೆ ಭಾರತದಲ್ಲಿ ಇರುವ ಯಾವ ಅಗತ್ಯತೆಯೂ ಇಲ್ಲ. ಆದರೂ ಇತ್ತೀಚಿನ ದಿನಗಳಲ್ಲಿ ಭಾರತದಲ್ಲಿ ಔಷಧಿ ಕಂಪನಿಗಳ ವಿದೇಶೀ ಬಂಡವಾಳ ಹೆಚ್ಚುತ್ತಿದೆ. ೯೦ರ ದಶಕದಲ್ಲಿ ಭಾರತೀಯ ಕಂಪನಿಗಳು ಬಹುರಾಷ್ಟ್ರೀಯ ಕಂಪನಿಗಳನ್ನು ಕೊಂಡುಕೊಳ್ಳುತ್ತಿದ್ದವು. ಆದರೆ ಈಗ ಅದು ಅದಲುಬದಲಾಗಿದೆ. ಬಹುರಾಷ್ಟ್ರೀಯ ಕಂಪನಿಗಳು ಭಾರತೀಯ ಕಂಪನಿಗಳನ್ನು ಕೊಂಡು ಕೊಳ್ಳುತ್ತಿವೆ ಹಾಗೂ ಭಾರತದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಹೆಚ್ಚುತ್ತಿವೆ. ಇಂತಹ ಬೆಳವಣಿಗೆಯ ಬಗ್ಗೆ ಸರಕಾರದ ಉದ್ಯೋಗ ಪ್ರೋತ್ಸಾಹ ಹಾಗೂ ಯೋಜನಾ ಇಲಾಖೆ ಅಸಮಾಧಾನ ವ್ಯಕ್ತಪಡಿಸಿದೆ ಯಲ್ಲದೆ ಇದನ್ನು ತಡೆಹಿಡಿಯಲು ಪ್ರಯತ್ನ ಮಾಡುತ್ತಿದೆ.

ಇಂದಿನ ದಿನಗಳಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಭಾರತೀಯ ಮಾರುಕಟ್ಟೆಯನ್ನು ವಶಪಡಿಸಿಕೊಂಡಿವೆ ಎಂದರೆ ತಪ್ಪಾಗಲಾರದು. ಇನ್ನು ಕೆಲವು ಕೆಳಗೆ ಪಟ್ಟಿ ಮಾಡಿದ ಆರು ಭಾರತೀಯ ಕಂಪನಿಗಳನ್ನು ಕೊಂಡುಕೊಂಡರೆ ಬಹುರಾಷ್ಟ್ರೀಯ ಕಂಪನಿಗಳು ಭಾರತದ ೫೦% ಮಾರುಕಟ್ಟೆಯನ್ನೂ ವಶಪಡಿಸಿ ಕೊಂಡಂತಾಗುತ್ತದೆ!

ಕಾವ್ಯಲೋಕ



## ಅದೊಂದೇ ಅಂಗಿ

ಆ ಹುಡುಗಿ ಕೇಳಿದ
ಆ ಮಾತು
ಇಂದಿಗೂ ಕಿವಿಯಲ್ಲಿ
ಗುಂಯ್‌ಗುಡುತ್ತಿದೆ.

ಈ ಕೆಂಪು ಅಂಗಿ ಎಂದರೆ
ನಿನಗೆ ಇಷ್ಟವೇ ?
ಯಾಕೆ ಯಾವಾಗಲೂ
ಅದೇ ಬಣ್ಣದ ಅಂಗಿಯನ್ನು
ತೊಟ್ಟು ಬರುತ್ತೀಯಲ್ಲಾ ?
ನಿನ್ನ ಬಣ್ಣ ಕಪ್ಪು,
ನಿನಗದು ಒಪ್ಪದು,
ಅಲ್ಲದೆ ಕೆಂಪು ಕತ್ತಲಲ್ಲಿ ಕಾಣದು.

ನನಗೆ ಹೇಳಲೇಬೇಕೆನ್ನಿಸಿತು
ನನ್ನ ಕಪ್ಪು ಚರ್ಮ
ಶತಶತಮಾನಗಳ ಶ್ರಮದ ಸಂಕೇತ
ನಾನು ಶ್ರಮದ ಸಂಕೇತವೇ
ನಿಮ್ಮವರ ಹಾಗೆಯೇ
ಈ ಕಪ್ಪು ಚರ್ಮದಡಿ ಕೆಂಪು ರಕ್ತ ಹರಿಯುತ್ತಿದೆ...

ಆದರೇಕೋ ಅಂಜಿಕೆ
ಕಪ್ಪು, ಕೆಂಪಿನ ಸಂಘರ್ಷದಲ್ಲಿ
ಮನಸೇಕೋ ಸೋತಿತು
ಬೇರೇನೂ ಹೇಳಲಾಗಲಿಲ್ಲ.

ಕೊನೆಗೆ ಹೇಳಿದೆ
ನನಗಿರುವುದು ಅದೊಂದೇ ಅಂಗಿ...



**ಬೊಮ್ಮೆಕಲ್ ವೆಂಕಟೇಶ**
ಸರ್ಕಾರಿ ಬಾಲಕಿಯರ ಕಾಲೇಜು, ಚಿಂತಾಮಣಿ, ಚಿಕ್ಕಬಳ್ಳಾಪುರ ಜಿಲ್ಲೆ

| ಕಂಪನಿ | ಮಾರುಕಟ್ಟೆಯ ಷೇರು |
|---|---|
| ಸಿಪ್ಲಾ | ೫–೭ % |
| ಕ್ಯಾಡಿಲಾ | ೩–೯ % |
| ಮನ್‌ಕೈಂಡ್ | ೩.೨% |
| ಆಲ್ ಕೆವ್ಸ್ | ೩.೦% |
| ಲೂಪಿನ್ | ೨.೯% |

**೨೦೧೨ರಲ್ಲಿ ಫೈಜ಼ರ್** ಅತಿ ವೇಗವಾಗಿ ಬೆಳೆಯುತ್ತಿರುವ ಬಹುರಾಷ್ಟ್ರೀಯ ಕಂಪನಿ. ಅದರ ಬೆಳವಣಿಗೆ ಪ್ರತಿಶತ ೩೧.೨ (ಸರಾಸರಿ ಔದ್ಯೋಗಿಕ ಬೆಳವಣಿಗೆ ಪ್ರತಿಶತ ೨೧.೫). ಅದು ಭಾರತದಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ಬಹುರಾಷ್ಟ್ರೀಯ ಕಂಪನಿಯಾಗಿದೆ. ಇದು ಯಾವುದೇ ಬಹುರಾಷ್ಟ್ರೀಯ ಕಂಪನಿಗಿಂತ ವೇಗವಾಗಿ ಬೆಳೆಯುತ್ತಿರುವ ಕಂಪನಿ. ಈ ಕಂಪನಿ ವೈತ್ ಕಂಪನಿಯೊಂದಿಗೆ ಸೇರಿ ಭಾರತದಲ್ಲಿ ತನ್ನ ವಹಿವಾಟು ನಡೆಸುತ್ತದೆ.

**ಔಷಧಿ ಪ್ರಯೋಗದಲ್ಲಿ ಹಸ್ತಕ್ಷೇಪ**

ಬಹುರಾಷ್ಟ್ರೀಯ ಕಂಪನಿಗಳು ಔಷಧಿಯನ್ನು ಮಾರಾಟ ಮಾಡುವುದಲ್ಲದೆ ಈಗೀಗ ಔಷಧಿ ಪ್ರಯೋಗ ಕ್ಷೇತ್ರದಲ್ಲಿಯೂ ಭಾರತವನ್ನು ಪ್ರವೇಶಿಸಿವೆ. ಇದರ ಮೂಲ ಉದ್ದೇಶ ಭಾರತದಲ್ಲಿ ಸಂಶೋಧನೆಗೆ ಕಡಿಮೆ ಖರ್ಚಾಗುತ್ತದೆ ಮತ್ತಷ್ಟು ರೋಗಿಗಳ ಸಂಖ್ಯೆ ಅಪಾರ, ಔಷಧಿ ನಿಯಂತ್ರಣ ಸಡಿಲ.

ಭಾರತದಲ್ಲಿ ೨೦೦೫ರಿಂದ ಔಷಧಿ ಪ್ರಯೋಗದ ನಿಯಂತ್ರಣವನ್ನು ಮತ್ತು ಸಡಿಲಿಸಲಾಗಿದೆ! ಈಗ ಸುಮಾರು ೧೫೦೦೦೦ ಜನರನ್ನು ಸುಮಾರು ೧೬೦೦ ಪ್ರಯೋಗಗಳಲ್ಲಿ ತೊಡಗಿಸಿದ್ದಾರೆ. ಈ ಪ್ರಯೋಗಗಳಲ್ಲಿ ಬ್ರಿಟನ್, ಅಮೇರಿಕ, ಯುರೋಪ್ ದೇಶಗಳ ಆ್ಯಸ್ಟ್ರಾಜ಼ೆನಿಕ್, ಫೈಜ಼ರ್, ಮರ್ಕ್‌ನಂತಹ ಕಂಪನಿಗಳೂ ಪಾಲುಗೊಂಡಿವೆ.

೨೦೦೭ರಿಂದ ೨೦೧೦ರವರೆಗೆ ಸುಮಾರು ೧೭೩೦ ಜನರು ಈ ಪ್ರಯೋಗಗಳಿಂದಾಗಿ ಸಾವನ್ನಪ್ಪಿದ್ದಾರೆ! ಆದರೆ ಈ ಸಾವುಗಳನ್ನು ಸರಿಯಾಗಿ ತನಿಖೆ ಮಾಡಲಾಗಿಲ್ಲ ಹಾಗೂ ಸತ್ತ ವ್ಯಕ್ತಿಗಳ ಕುಟುಂಬಗಳಿಗೆ ಪರಿಹಾರವನ್ನೂ ನೀಡಿಲ್ಲ ಈ ಪ್ರಯೋಗಗಳಲ್ಲಿ ಉಪಯೋಗಿಸುವ ಜನರಿಗೆ ಪ್ರಯೋಗದ ಬಗ್ಗೆ ಮಾಹಿತಿಯನ್ನೂ ನೀಡಿಲ್ಲ, ಹಾಗೂ ಅಂತಾರಾಷ್ಟ್ರೀಯ ಮಾನದಂಡವನ್ನು (ಹೆಲ್ಸಿಂಕಿ ಡಿಕ್ಲರೇಷನ್) ಅನುಸರಿಸಲಾಗಿಲ್ಲ.

ವಿಪರ್ಯಾಸವೆಂದರೆ ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯ ಮುಖ್ಯಸ್ಥ ಡಾ॥ ವಿಶ್ವ ಕಟೋಟ್ ಈ ಪ್ರಯೋಗಗಳ ಬಗ್ಗೆ ಸಂತೃಪ್ತಿ ವ್ಯಕ್ತಪಡಿಸುತ್ತಾರೆ!

**ಬಹುರಾಷ್ಟ್ರೀಯ ಕಂಪನಿಗಳು ಹಾಗೂ ಜನೆರಿಕ್ ಔಷಧಿ**

ಭಾರತ ಪ್ರತಿವರ್ಷ ೩೦೦೦೦ ಕೋಟಿ ರೂಪಾಯಿ ಜನೆರಿಕ್ ಔಷಧಿಯನ್ನು ತಯಾರಿಸುತ್ತದೆ. ಅದರಲ್ಲಿ ೧೫% ರಫ್ತಾಗುತ್ತದೆ ಆಫ್ರಿಕಾ ದೇಶಗಳಿಗೆ. ಭಾರತ "ಜಗತ್ತಿನ ಔಷಧಿ ಅಂಗಡಿ" ಎಂಬ ಮಾನ್ಯತೆಯನ್ನು ಪಡೆದಿತ್ತು, ಅಂದರೆ ಭಾರತ ಜಗತ್ತಿನ ಹಲವಾರು ಬಡರಾಷ್ಟ್ರಗಳಿಗೆ ಜನೆರಿಕ್ ಔಷಧಿಗಳನ್ನು ಸರಬರಾಜು ಮಾಡುತ್ತಾ ಬಂದಿದೆ. ಈ ಔಷಧಿಗಳು ಒಳ್ಳೆಯ ಗುಣಮಟ್ಟದ್ದಾಗಿದ್ದು, ಕಡಿಮೆ ಬೆಲೆಯವೂ ಆಗಿವೆ. ಆದರೆ ಭಾರತ ಈ ಔಷಧಿಗಳನ್ನು ರಫ್ತು ಮಾಡುತ್ತಿರುವುದರಿಂದ ತಮ್ಮ ಕಂಪನಿಯ ದುಬಾರಿ ಔಷಧಿಗಳು ಮಾರಾಟವಾಗದಿರುವುದಕ್ಕಾಗಿ ಈ ಬಹುರಾಷ್ಟ್ರೀಯ ಕಂಪನಿಗಳಿಗೆ ಭಾರತದ ಮೇಲೆ ಕೋಪವಿದೆ. ಹಲವಾರು ರೀತಿಯಲ್ಲಿ ಈ ಜನೆರಿಕ್ ಔಷಧಿ ಮಾರಾಟವನ್ನು ತಡೆಯಲು ಈ ಕಂಪನಿಗಳು ಈ ಕೆಳ ಕಾಣಿಸಿರುವ ತಂತ್ರಗಳನ್ನು ಹೂಡುವುದು ಸಾಮಾನ್ಯ :

೧. ಜನೆರಿಕ್ ಔಷಧಿಗಳ ಸಾಗಣೆಯ ಸರಕುಗಳನ್ನು ಬೇರೆ ಬೇರೆ ಬಂದರುಗಳಲ್ಲಿ ತಡೆಹಿಡಿದು, ಈ ಔಷಧಿಗಳನ್ನು ವಿಶ್ವ ವ್ಯಾಪಾರ ಸಂಘಟನೆಯ ಕಾನೂನಿನಂತೆ ಮಾರುವಂತಿಲ್ಲ ಎಂದು ಹೇಳಿ ಭಾರತಕ್ಕೆ ವಾಪಸ್ಸು ಕಳುಹಿಸುವುದು.

೨. ಈ ಜನೆರಿಕ್ ಔಷಧಿಗಳು ಕಳಪೆ ಔಷಧಿಗಳು ಎಂದು ಬೇರೆ ಬೇರೆ ರಾಷ್ಟ್ರಗಳಿಗೆ (ಟಾಂಜಾನಿಯಾ, ಕೀನ್ಯಾ) ತಪ್ಪು ಮಾಹಿತಿ ನೀಡುವುದು ಹಾಗೂ ಈ ದೇಶಗಳಲ್ಲಿ ಈ ಔಷಧಿಗಳನ್ನು ಕೊಂಡುಕೊಳ್ಳದಂತೆ ಕಾನೂನು ರೂಪಿಸಲು ಪ್ರೋತ್ಸಾಹಿಸುವುದು.

೩. ಇತ್ತೀಚೆಗೆ ಬಹುರಾಷ್ಟ್ರೀಯ ಕಂಪನಿಗಳು ವಿಶ್ವ ಆರೋಗ್ಯ ಸಂಸ್ಥೆಯನ್ನು ಭೇಟಿ ಮಾಡಿ ಜನೆರಿಕ್ ಔಷಧಿಗಳು ಅಪಾಯಕಾರಿ ಹಾಗೂ ಪರಿಣಾಮಕಾರಿ ಅಲ್ಲವೆಂದು ಒಂದು ಕಾನೂನು ರಚಿಸಲು ಒತ್ತಾಯಿಸಿವೆ.

ಆದರೆ ಭಾರತದ ವ್ಯಾಪಾರ, ರಾಸಾಯನಿಕ, ತೈಲ ಹಾಗೂ ಆರೋಗ್ಯ ಇಲಾಖೆಯ ಅಧಿಕಾರಿಗಳು ಅನೇಕ ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ ಈ ಜನೆರಿಕ್ ಔಷಧಿಗಳ ಪರವಾಗಿ ಮಾಹಿತಿ ನೀಡುತ್ತಾ ಈ ಔಷಧಿಗಳನ್ನು ಪ್ರೋತ್ಸಾಹಿಸಲು ಪ್ರಯತ್ನಪಟ್ಟಿದ್ದಾರೆ.

ಈ ವರ್ಷ ಬಹುರಾಷ್ಟ್ರೀಯ ಕಂಪನಿಗಳಾದ ಫೈಜ಼ರ್ ಮತ್ತು ಆವೆಂಟಿಸ್ ಕಂಪನಿಗಳು ತಯಾರಿಸಿದ ೮೦ ಬಿಲಿಯನ್ ಡಾಲರ್ ಔಷಧಿಗಳು ಪೇಟೆಂಟ್ ಹಿಡಿತದಿಂದ ಹೊರಬರುತ್ತವೆ. ಆದ್ದರಿಂದ ಬಹುರಾಷ್ಟ್ರೀಯ ಕಂಪನಿಗಳು ಆತಂಕಕ್ಕೆ ಒಳಗಾಗಿವೆ. ಹಾಗೂ ಭಾರತೀಯ ಜನರಿಕ್ ಉದ್ಯಮವನ್ನು ಗುರಿಮಾಡಿವೆ.

**ಹೆಚ್ಚುತ್ತಿರುವ ಔಷಧಿ ಬೆಲೆಗಳು**

ಭಾರತದಲ್ಲಿ ಬಡತನ ವ್ಯಾಪಕವಾಗಿದೆ. ಭಾರತದಲ್ಲಿ ಔಷಧಿ ಬೆಲೆಗಳನ್ನು ಹಿಡಿತದಲ್ಲಿಡುವ ಉದ್ದೇಶದಿಂದ ಔಷಧಿ ಬೆಲೆ ನಿಯಂತ್ರಣ ಆಜ್ಞೆ (೧೯೭೯)ಯನ್ನು ಜಾರಿಮಾಡಲಾಗಿತ್ತು. ಆಗ ಸುಮಾರು ೩೪೭ ಔಷಧಿಗಳನ್ನು ಬೆಲೆ ನಿಯಂತ್ರಣದಲ್ಲಿಡಲಾಗಿತ್ತು. ಆದರೆ ಅದನ್ನು ಕ್ರಮೇಣ ಸಡಿಲಗೊಳಿಸಲಾಯಿತು (೧೯೯೫ರಲ್ಲಿ ಕೇವಲ ೭೪ ಔಷಧಿಗಳು). ಆದರೆ ಬಹುರಾಷ್ಟ್ರೀಯ ಕಂಪನಿಗಳು ಸರಕಾರದ ಮೇಲೆ ಒತ್ತಡ ತಂದು ಬೆಲೆ ನಿಯಂತ್ರಣವನ್ನು ತೆಗೆದುಹಾಕಲು ಹೇಳುತ್ತಾ ಬಂದಿವೆ.

ಔಷಧಿ ಬೆಲೆಗಳನ್ನು ಕಡಿಮೆ ಮಾಡಲು ಒತ್ತಾಯಿಸಿ ೨೦೦೩ರಲ್ಲಿ ಸಾರ್ವಜನಿಕ ಹಿತಾಸಕ್ತಿ ಮೊಕದ್ದಮೆ ಹಾಕಿದ್ದ ಆಲ್ ಇಂಡಿಯಾ ಡ್ರಗ್ ಆ್ಯಕ್ಷನ್ ನೆಟ್‌ವರ್ಕ್, ಲೋ ಕಾಸ್ಟ್, ಮೆಡಿಕೋ ಫ್ರೆಂಡ್ಸ್ ಸರ್ಕಲ್, ಜನಸ್ವಾಸ್ಥ್ಯ ಸಹಯೋಗಕ್ಕೆ ಸ್ಪಂದಿಸುತ್ತ ಸರ್ವೋಚ್ಚ ನ್ಯಾಯಾಲಯ ಸರ್ಕಾರಕ್ಕೆ ಔಷಧಿ ಬೆಲೆಗಳನ್ನು ಕಡಿಮೆ ಮಾಡಲು ಆದೇಶ ನೀಡಿತ್ತು. ಆದರೆ ಸರಕಾರ ಇದನ್ನು ಇಲ್ಲಿಯುವರೆಗೆ ಗಮನಿಸಲೇ ಇಲ್ಲ.

ಇನ್ನೊಂದು ಗಮನಿಸಬೇಕಾದ ವಿಷಯವೆಂದರೆ ಬಹುರಾಷ್ಟ್ರೀಯ ಕಂಪನಿಯ ಹೆಚ್ಚು ಜನಪ್ರಿಯ ಔಷಧಿಗಳು ದುಬಾರಿಯಾಗಿವೆ! ಇದು ವಿಪರ್ಯಾಸ. ಭಾರತದಲ್ಲಿ ಜನರು (೮೩%) ತಮ್ಮ ಹಣದಿಂದಲೇ ಔಷಧಿ ಖರೀದಿಸುತ್ತಾರೆ. ವೈದ್ಯಕೀಯ ವೆಚ್ಚದಿಂದಾಗಿ ಪ್ರತಿವರ್ಷ ೬ ಕೋಟಿ ಜನ ಬಡತನ ರೇಖೆಗಿಂತ ಕೆಳಗೆ ಹೋಗುತ್ತಿದ್ದಾರೆ. ಆದ್ದರಿಂದ ಸರಕಾರ ಔಷಧಿ ಬೆಲೆಗಳನ್ನು ಹತೋಟಿಯಲ್ಲಿಡಲು ಎಲ್ಲ ಪ್ರಯತ್ನ ಮಾಡಬೇಕು.

ಭಾರತದಲ್ಲಿ ಬಹುರಾಷ್ಟ್ರೀಯ ಕಂಪನಿಗಳು ಔಷಧಿ ಕ್ಷೇತ್ರದಲ್ಲಿ ಅಲ್ಲೋಲ ಕಲ್ಲೋಲ ಉಂಟು ಮಾಡುತ್ತಿವೆ. ಔಷಧಿ ನಿಯಂತ್ರಣ ಅಧಿಕಾರಿಗಳು ಔಷಧಿ ಕ್ಷೇತ್ರವನ್ನು ನಿಯಂತ್ರಿಸಲು ಅಸಮರ್ಥರಾಗಿದ್ದಾರೆ. ಸರಕಾರ ಈ ಕೂಡಲೇ ಔಷಧಿ ಕ್ಷೇತ್ರದ ಸಂಪೂರ್ಣ ಪುನರಾವಲೋಕನ ಮಾಡುವುದು ಅತ್ಯಗತ್ಯ. ಔಷಧಿ ಉದ್ಯಮ ಬಹುರಾಷ್ಟ್ರೀಯ ಕಂಪನಿಗಳ ಹಿಡಿತಕ್ಕೆ ಸಿಕ್ಕರೆ, ಔಷಧಿ ಕ್ಷೇತ್ರದಲ್ಲಿ ಅರಾಜಕತೆ ಉಂಟಾಗುವುದು ಖಂಡಿತ. ಬಹುರಾಷ್ಟ್ರೀಯ ಕಂಪನಿಗಳು ಜನಾರೋಗ್ಯ ಸುಧಾರಿಸಲು ಔಷಧಿ ತಯಾರಿಸುತ್ತವೆ ಎಂಬುದು ಭ್ರಮೆಯಷ್ಟೆ. ಅವು ತಮ್ಮ ಲಾಭಕ್ಕಾಗಿ ಔಷಧಿಗಳನ್ನು ತಯಾರಿಸುತ್ತವೆ, ಅಷ್ಟೆ.

ಬಹುರಾಷ್ಟ್ರೀಯ ಕಂಪನಿಗಳು ೬೦ನೇ ದಶಕದಿಂದಲೂ ಜಗತ್ತಿನ ಹಲವಾರು ರಾಷ್ಟ್ರಗಳಲ್ಲಿ ತಮ್ಮ ವಹಿವಾಟುಗಳನ್ನು ನಡೆಸುತ್ತಾ ಬಂದಿವೆ. ಈ ಕಂಪನಿಗಳ ವಿರುದ್ಧ ಅಂತಾರಾಷ್ಟ್ರೀಯ ಮಟ್ಟದಲ್ಲಿ ಅನೇಕ ಪ್ರತಿಭಟನೆಗಳಾಗಿವೆ. ಉದಾಹರಣೆ : ಡಾ॥ ಓಲೆ ಹ್ಯಾನ್ಸನ್ ಪ್ರತಿಭಟಿಸಿದ ಸೀಬಾ ಕಂಪನಿಯು ತಯಾರಿಸುವ ಮೆಕ್ಸಫಾರ್ಮ್. ಆದರೆ ಈ ಕಂಪನಿ ಪ್ರತಿಭಟನೆ ಮಾಡುವವರೊಂದಿಗೆ ತಮ್ಮ ಮೆಕ್ಸಫಾರ್ಮ್ ಔಷಧಿ ಒಳ್ಳೆಯದೆಂದೇ ವಾದಿಸುತ್ತಾ ಬಂದಿದೆ. ನಂತರ ಈ ಔಷಧಿ ಅಪಾಯಕರವೆಂದು ಒಪ್ಪಿಕೊಳ್ಳುವುದೇ ಅಲ್ಲದೆ ಕ್ಷಮೆ ಯಾಚಿಸಿದೆ. ಅದೇ ರೀತಿ ಬಹು ರಾಷ್ಟ್ರೀಯ ಔಷಧಿ ಕಂಪನಿಗಳು ಬಾಂಗ್ಲಾದೇಶದಲ್ಲಿ ತಮ್ಮ ಕುತಂತ್ರಗಳನ್ನು ಬಳಸಿದ್ದರ ಬಗ್ಗೆ ಡಾ॥ ಜಫ್ರುಲ್ಲಾ ಚೌಧರಿ ತಮ್ಮ ಪುಸ್ತಕ 'ದಿ ಪಾಲಿಟಿಕ್ಸ್ ಆಫ್ ಎಸೆನ್ಷಿಯಲ್ ಡ್ರಗ್ಸ್'ನಲ್ಲಿ ಹಲವಾರು ವಿವರಗಳನ್ನು ನೀಡಿದ್ದಾರೆ.

ಈ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ವಿರುದ್ಧ ಇರುವವರ ಜೀವ ತೆಗೆಯಲೂ ಹಿಂದೆ ಮುಂದೆ ನೋಡುವುದಿಲ್ಲವೆಂಬ ಅಂಶ ಬೆಳಕಿಗೆ ಬಂದಿದೆ.

ಈ ಕಂಪನಿಗಳು ಅಮೇರಿಕದ ಪ್ರೆಸಿಡೆನ್ಸಿ ಚುನಾವಣೆಯಲ್ಲಿ ಅಭ್ಯರ್ಥಿಗಳಿಗೆ ಸಹಾಯ ಮಾಡುತ್ತಾ ಬಂದಿರುವುದು ಎಲ್ಲರಿಗೂ ತಿಳಿದಿರುವ ವಿಷಯ.

**ಡಾ॥ ಪ್ರಕಾಶ್ ಸಿ. ರಾವ್**
ಅಧ್ಯಕ್ಷರು, ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು, ಬೆಂಗಳೂರು

# ‘ಮನುಸ್ಮೃತಿ’ ಇನ್ನೂ ಸುಟ್ಟಿಲ್ಲ; ಸುಡಬೇಕಿದೆ!

**ಈ** ದೇಶದಲ್ಲಿ ಸ್ತ್ರೀಯರನ್ನು ‘ದೇವತೆ’ ಎಂದೇ ತಿಳಿಯಲಾಗುತ್ತದೆ ಎಂದು ಷರಾ ಬರೆಯತ್ತಲೇ ಆ ದೇವತೆಯ ಮೇಲೆ ನಿರಂತರವಾಗಿ ಅತ್ಯಾಚಾರ ನಡೆಸಲಾಗುತ್ತದೆ. ಪುರುಷ ಪ್ರಧಾನ ಸಮಾಜದಲ್ಲಿ ಆಕೆ ಇನ್ನೂ ಮೇಲೇರಲು ಸಾಧ್ಯವಾಗಿಯೇ ಇಲ್ಲ. ಯಾಕೆಂದರೆ ಆ ದೇವತೆ ಹೀಗೇ ಇರಬೇಕು, ಇದನ್ನೇ ತೊಡಬೇಕು, ಇದನ್ನೇ ಉಣ್ಣಬೇಕು, ಇಂಥದ್ದನ್ನೇ ಮಾಡಬೇಕು ಮತ್ತು ಇಂಥದ್ದನ್ನು ಮಾಡಬಾರದು ಎಂಬ ಬಿಗಿಯಾದ ಕಟ್ಟಳೆಗಳು ಈ ದೇಶದಲ್ಲಿವೆ. ಈ ದೇಶದಲ್ಲಿ ಆ ದೇವತೆಯನ್ನು ಮೂರ್ಖಳು ಎಂದು ಭಾವಿಸಲಾಗುತ್ತದೆ, ತಿಳುವಳಿಕೆ ಇಲ್ಲದವಳು ಎಂದು ಹಂಗಿಸಲಾಗುತ್ತದೆ! ಈ ದೇಶದಲ್ಲಿ ಆ ದೇವತೆಯನ್ನು ಕೇವಲ ಹೆರುವ ಯಂತ್ರವನ್ನಾಗಿ ಮಾತ್ರ ನೋಡಲಾಗುತ್ತದೆ. ಪುರುಷರ ದೈಹಿಕ ಹಸಿವನ್ನು ತೀರಿಸಿಕೊಳ್ಳಲು ಇರುವ ಒಂದು ಸಾಧನವನ್ನಾಗಿ ಪರಿಗಣಿಸಲಾಗುತ್ತದೆ! ಹೀಗಾಗಿಯೇ ಆ ದೇವತೆಯ ಮೇಲೆ ನಿರಂತರ ಶೋಷಣೆಗಳು ನಡೆಯುತ್ತವೆ, ಹೇಯವಾದ ಅತ್ಯಾಚಾರಗಳಾಗುತ್ತವೆ! ಯಾವತ್ತೂ ಪುರುಷರ ಅಧೀನದಲ್ಲಿಯೇ ಆ ದೇವತೆ ಇರಬೇಕು ಎಂಬ ಮನೋಭಾವ ತುಂಬಿಕೊಂಡಿದೆ. ಏನೇ ಆದರೂ ‘ತಾಳಿ’ಕೊಳ್ಳಬೇಕು ಎಂಬ ತತ್ವಗಾರಿಕೆ ಇದೆ! ಹೀಗಾಗಿಯೇ ಆ ದೇವತೆ ಇಂದು ಮಾರಾಟದ ಸರಕಾಗಿದ್ದಾಳೆ, ಭ್ರೂಣದಲ್ಲಿಯೇ ಸಾಯುತ್ತಿದ್ದಾಳೆ!

ಹೌದು, ಇದು ನನ್ನದು ಎಂದು ಹೇಳಿಕೊಳ್ಳುತ್ತಿರುವ ದೇಶದಲ್ಲಿಯೇ ನಡೆಯುತ್ತದೆ! ಯಾಕೆಂದರೆ ಮನುಷ್ಯ ಸಂಬಂಧಗಳನ್ನೇ ಪರಿಗಣಿಸದ ವೈದಿಕಶಾಹಿ ವ್ಯವಸ್ಥೆ ಇನ್ನೂ ಜೀವಂತವಾಗಿದೆ. ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ಅಂದು ಸುಟ್ಟುಹಾಕಿದ ಮನುಸ್ಮೃತಿ ಇನ್ನೂ ಬೂದಿಯಾಗಿಯೇ ಇಲ್ಲ, ಅದು ಈ ದೇಶದಲ್ಲಿ ಇನ್ನೂ ಉರಿಯುತ್ತಲೇ ಇದೆ! ಸಾಮಾಜಿಕ ಅಸಮಾನತೆಗೆ ಕಾರಣವಾಗಿ, ಬ್ರಾಹ್ಮಣಶಾಹಿಯನ್ನು ಈ ದೇಶದ ಜನರ ಮೇಲೆ ಹೇರಿ ಯಜಮಾನಿಕೆ ವಿಕೃತಿಯನ್ನು ಮುಂದುವರಿಸುವ ಮೂಲವೇ ಮನುಸ್ಮೃತಿ! ಇದನ್ನು ಅರಿತುಕೊಂಡ ಡಾ॥ ಬಾಬಾಸಾಹೇಬ ಅಂಬೇಡ್ಕರ್ ಅವರು ೧೯೨೭ ಡಿಸೆಂಬರ್, ೨೦ರಂದು ಆ ಮನುಸ್ಮೃತಿಯನ್ನು ಬಹಿರಂಗವಾಗಿ ಸುಟ್ಟುಹಾಕಿದರು. ಇಡೀ ಜಗತ್ತು ಒಂದಾಗಿ ಬದುಕಬೇಕಾದ ಸಂದೇಶವನ್ನು ರವಾನಿಸಿದರು. ಆದರೆ ಡಾ॥ ಬಾಬಾಸಾಹೇಬ ಅಂಬೇಡ್ಕರ್‌ರ ನಂತರ ಕೆಲವೇ ದಿನಗಳಲ್ಲಿ ಆ ಮನುಸ್ಮೃತಿ ಮತ್ತೆ ಚಿಗಿತುಕೊಳ್ಳ ತೊಡಗಿತ್ತು. ಯಾಕೆಂದರೆ ಅದಾಗಲೇ ಈ ದೇಶದ ಎಲ್ಲರ ತಲೆಯಲ್ಲಿ ಬೀಜವನ್ನು

**ಡಾ॥ ಸಿದ್ರಾಮ ಕಾರಣಿಕ**



ಬಿತ್ತಿ ರಾಶಿ ಮಾಡುವ ಹವಣಿಕೆ ಚಾಲ್ತಿಯಲ್ಲಿತ್ತು. ಹೀಗಾಗಿಯೇ ಮರಾಠಿಯ ಪ್ರಗತಿಪರ ಬರಹಗಾರ ಪ್ರದೀಪ ದೇಶಪಾಂಡೆ ಹೇಳುತ್ತಾರೆ: “ಮನುಸ್ಮೃತಿ ಅಜೂನಹೀ ಜಾಳತೇಚ ಆಹೆ!” (ಮನುಸ್ಮೃತಿ ಇಂದಿಗೂ ಉರಿಯುತ್ತಲೇ ಇದೆ!)

ಈ ಮಾತನ್ನು ಸ್ಪಷ್ಟೀಕರಿಸಲು ಮನುಸ್ಮೃತಿಯಲ್ಲಿ ಹೇಳಿದ ಕೆಲವು ಮಾತುಗಳನ್ನು ಇಲ್ಲಿ ಉದ್ಧರಿಸುತ್ತಿರುವೆ. (ಧಾರವಾಡದ ಸಮಾಜ ಪುಸ್ತಕಾಲಯ ೨೦೦೩ರಲ್ಲಿ ಮೂರನೇ ಮುದ್ರಣವಾಗಿ ಪ್ರಕಟಿಸಿರುವ, ಶೇಷ ನವರತ್ನ ಅವರು ಅನುವಾದಿಸಿರುವ ‘ಮನುಸ್ಮೃತಿ’ಯಿಂದ ಇಲ್ಲಿಯ ಉದ್ಧರಣೆಗಳನ್ನು ನೀಡಲಾಗಿದೆ) ಮನುಸ್ಮೃತಿಯ ಎರಡನೇ ಅಧ್ಯಾಯದ ೨೧೩ ಮತ್ತು ೨೧೪ನೇ ಶ್ಲೋಕಗಳು ಹೆಣ್ಣುಮಕ್ಕಳ ಬಗ್ಗೆ ಕೆಟ್ಟದಾಗಿ ವ್ಯಾಖ್ಯಾನ ಮಾಡುತ್ತವೆ:

*ಸ್ವಭಾವ ಏಷ ನಾರೀಣಾಮಿಹ ದೂಷಣಂ।*
*ಅತೋರ್ಥಾನ್ನ ಪ್ರಮಾದ್ಯಂತಿ ಪ್ರಮದಾಸು ವಿಪಶ್ಚಿತಃ ॥೨೧೩॥*

– ಪುರುಷರ ಮನಸ್ಸನ್ನು ಕೆಡಿಸುವುದೇ ನಾರಿಯರ ಸ್ವಭಾವವಾಗಿದೆ. ಆದ್ದರಿಂದ ತಿಳುವಳಿಕೆಯುಳ್ಳ ಪ್ರಾಜ್ಞರು ಸ್ತ್ರೀಯರ ವಿಷಯದಲ್ಲಿ ಎಚ್ಚರ ತಪ್ಪಿ ನಡೆಯುವುದಿಲ್ಲ ಎನ್ನುವುದು ಇಲ್ಲಿಯ ಅರ್ಥ!

*ಅವಿದ್ವಾಂಸಮಲಂ ಲೋಕೇ ವಿದ್ವಾಂಸಮಪಿ ವಾ ಪುನಃ।*
*ಪ್ರಮದಾ ಹ್ಯುತ್ಪಥಂ ನೇತು ಕಾಮಕ್ರೋಧವಶಾನುಗಂ ॥೨೧೪॥*

– ಕಾಮಕ್ರೋಧಗಳಿಂದ ವಶನಾದ ಮನುಷ್ಯನನ್ನು ಅವನು ಪಂಡಿತನೇ ಇರಲಿ, ಪಾಮರನೇ ಇರಲಿ, ದಾರಿ ತಪ್ಪಿಸಲು ಸ್ತ್ರೀಯರು ಸಮರ್ಥರಾಗಿರುತ್ತಾರೆ ಎನ್ನಲಾಗಿದೆ!

*– ಸ್ತ್ರೀಯೋ ರತ್ನಾನ್ಯಥೋ ವಿದ್ಯಾ ಧರ್ಮಃ ಶೌಚ ಸುಭಾಷಿತಂ।*
*ವಿವಿಧಾನಿ ಚ ಶಿಲ್ಪ ಸಮಾದೇಯಾನಿ ಸರ್ವತಃ ॥೨೨೯॥*

ಸ್ತ್ರೀಯರು, ರತ್ನಗಳು, ಧರ್ಮ, ಶೌಚ, ಸುಭಾಷಿತ, ಶಿಲ್ಪಗಳು ಇವು ಎಲ್ಲಿದ್ದರೂ ಸಹ ಅವನ್ನು ಪಡೆದುಕೊಳ್ಳಲು ಮುಂದಾಗಬೇಕು ಎಂಬುದು ಮೇಲಿನ ಶ್ಲೋಕಕ್ಕೆ ನೀಡಿರುವ ಅರ್ಥ.

ಇವೆಲ್ಲವುಗಳನ್ನೂ ಹೇಳಿದ ಮೇಲೆ ಮೂರನೇ ಅಧ್ಯಾಯದಲ್ಲಿ,

*ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ।*
*ಯತ್ರೈತಾಸ್ತು ನ ಪೂಜಂತೇ ಸರ್ವಾಸ್ತತ್ರಾಫಲಾಃ ಕ್ರಿಯಾಃ ॥ ೫೬ ॥*

– ಎಲ್ಲಿ ಸ್ತ್ರೀಯರಿಗೆ ಗೌರವ ಸನ್ಮಾನಗಳು ದೊರೆಯುತ್ತವೆಯೋ ಅಲ್ಲಿ ದೇವತೆಗಳು ಪ್ರಸನ್ನರಾಗುತ್ತಾರೆ. ಯಾವ ಮನೆಯಲ್ಲಿ ಸ್ತ್ರೀಯರು ಗೌರವಿಸಲ್ಪಡುವುದಿಲ್ಲವೋ ಅಲ್ಲಿ ಮಾಡುವ ಎಲ್ಲ ಯಜ್ಞ–ಪೂಜೆಗಳು ನಿಷ್ಫಲವಾಗುತ್ತವೆ ಎಂದು ಹೇಳಿಕೊಂಡಿರುವುದು ಇದು ತಿಪ್ಪೆ ಸಾರಿಸುವ ಕೆಲಸವಲ್ಲದೆ ಮತ್ತೇನೂ ಅಲ್ಲ. ಇಂಥ ಮನುಸ್ಮೃತಿ ಈ ದೇಶದ ಜನರೆಲ್ಲರ ಮನಸ್ಸನ್ನು ಕೆಡಿಸಿಹಾಕಿದೆ.

ಸಂವಿಧಾನಬದ್ಧವಾಗಿರುವ ಈ ದೇಶದ ಆಡಳಿತ ಕೂಡ ಮನುಸ್ಮೃತಿಯ ನೆರಳಿನಲ್ಲಿಯೇ ಇಂದಿಗೂ ಸಾಗಿಬಂದಿರುವುದು ನಮ್ಮ ದೇಶದ ದುರಂತವೇ ಸರಿ. ಬರೀ ಆಡಳಿತಗಾರರು, ಸನಾತನಿ ಪುರೋಹಿತಶಾಹಿಗಳು ಮಾತ್ರವಲ್ಲ, ಈ ದೇಶದ ಪ್ರತಿಶತ ತೊಂಬತ್ತರಷ್ಟು ಜನ ಮನುಸ್ಮೃತಿಯ ಪ್ರಕಾರವೇ ಬದುಕು ನಡೆಸುತ್ತಿದ್ದಾರೆ. ಇಂದಿಗೂ ಭಾರತೀಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕು ಮನುಸ್ಮೃತಿಯ ಚೌಕಟ್ಟಿನಲ್ಲಿಯೇ ಬಂಧಿಯಾಗಿದೆ ಎನ್ನುವುದರಲ್ಲಿ ಯಾವುದೇ ಅತಿಶಯೋಕ್ತಿ ಇಲ್ಲ. ಹೀಗಾಗಿಯೇ ಈ ದೇಶದ ದೀನ–ದಲಿತರು, ಮಹಿಳೆಯರು ಪ್ರತಿನಿತ್ಯ ಶೋಷಣೆಗೆ ಈಡಾಗಿ ನೋವು ಉಣ್ಣುತ್ತಿದ್ದಾರೆ. ದಲಿತರ ಮೇಲೆ ನಡೆಯುವ ದೌರ್ಜನ್ಯಗಳು, ಬಹಿಷ್ಕಾರಗಳು, ಮಹಿಳೆಯರ ಮೇಲೆ ನಡೆಯುವ ಹಲ್ಲೆಗಳು, ಅತ್ಯಾಚಾರಗಳು, ಅನಾಗರಿಕ ವರ್ತನೆಗಳು ಈ ಕಾರಣಕ್ಕಾಗಿಯೇ ಇಂದು ಹೆಚ್ಚಾಗುತ್ತಲೇ ಇವೆ!

ಈ ದೇಶದ ಹೆಣ್ಣುಮಕ್ಕಳು ಇಂದು ಎಲ್ಲ ರಂಗಗಳಲ್ಲಿಯೂ ಮುಕ್ತವಾಗಿ ಭಾಗವಹಿಸುವ ಆಸಕ್ತಿಯನ್ನು ಹೊಂದಿದ್ದಾರೆ. ಶಿಕ್ಷಣದ ಮೂಲಕ ಹೊಸ



ಹೊಸ ಅವಕಾಶಗಳೊಂದಿಗೆ ಹೊಸ ಬದುಕನ್ನು ಕಟ್ಟಿಕೊಳ್ಳುವ ಹವಣಿಕೆಯಲ್ಲಿ ಇದ್ದಾರೆ. ಕೆಲವು ಜನ ಇದರಲ್ಲಿ ಯಶಸ್ಸನ್ನೂ ಪಡೆದಿದ್ದಾರೆ. ಭಾರತೀಯ ಸಮಾಜ ಇಂದು ಬದಲಾಗಿದೆ ಎಂದು ಎದೆ ತಟ್ಟಿಕೊಂಡು ಭಾಷಣ ಬಿಗಿಯುವ ಮಂದಿಯೂ ನಮ್ಮ ನಡುವೆ ಇದ್ದಾರೆ. ಆದರೆ ಬದಲಾವಣೆ ಎನ್ನುವುದು ಹೊರಗಿನ ರೂಪ ಮಾತ್ರ! ಹೆಣ್ಣುಮಕ್ಕಳ ವಿಷಯದಲ್ಲಿ ಇಂದಿಗೂ ಅದೇ ಹಳೆಯ ಮನೋಭಾವಗಳು ನಮ್ಮಲ್ಲಿ ಇಂದಿಗೂ ಜೀವಂತವಾಗಿವೆ ! ಯಾಕೆಂದರೆ ಈ ದೇಶದಲ್ಲಿ ಮನುಸ್ಮೃತಿ ಪೂರ್ಣವಾಗಿ ಸುಟ್ಟುಹೋಗಿಲ್ಲ !

"ವರ್ಣಾಶ್ರಮ ಮತ್ತು ಜಾತಿ ವ್ಯವಸ್ಥೆಯಿಂದ ಬಿಗಿಯಲ್ಪಟ್ಟ ಬಂಧನದಲ್ಲಿಯೇ ಇಂದಿಗೂ ನಾವು ಬದುಕು ನಡೆಸುತ್ತಿದ್ದೇವೆ. ಸ್ಥಳಾಂತರದ ಜೊತೆಗೆ ವೃತ್ತಿಯಾಂತರವನ್ನೂ ಮಾಡಲಾಗಿದೆ ಎಂಬುದೇನೋ ನಿಜ. ಆದರೆ ಮದುವೆ ಮಾಡುವಾಗ ಮಾತ್ರ ಇಂದಿಗೂ ಜಾತಿಯೇ ಪ್ರಧಾನ ಪಾತ್ರ ವಹಿಸುತ್ತದೆ. ಈ ದೃಷ್ಟಿಕೋನ ಮನುಸ್ಮೃತಿಯ ಪ್ರಭಾವದಿಂದಲೇ ಚಾಲ್ತಿಯಲ್ಲಿದೆ" ಎನ್ನುವ ಪ್ರದೀಪ ದೇಶಪಾಂಡೆಯವರ ಮಾತುಗಳನ್ನು ಗಮನಿಸಿದಾಗ ಮನುಸ್ಮೃತಿಯ ಬೇರುಗಳು ಎಷ್ಟೊಂದು ಆಳಕ್ಕಿಳಿದು ನಮ್ಮನ್ನು ಆಳುತ್ತಿವೆ ಎಂಬುದರ ಅರಿವಾಗುತ್ತದೆ.

ಪ್ರದೀಪ ದೇಶಪಾಂಡೆಯವರ ಮಾತುಗಳನ್ನೇ ಮುಂದುವರಿಸಿ ಹೇಳುವುದಾದರೆ ಹೆಣ್ಣುಮಕ್ಕಳನ್ನು ತಮ್ಮ ಅಧೀನ ಎಂದುಕೊಳ್ಳುವ ಪ್ರವೃತ್ತಿ ಇಂದು ನಮ್ಮನ್ನೆಲ್ಲ ಆವರಿಸಿಕೊಂಡುಬಿಟ್ಟಿದೆ. ಗಂಡು ಶ್ರೇಷ್ಠ – ಹೆಣ್ಣು ಕನಿಷ್ಠ ಎನ್ನುವ ವಿಚಾರಗಳು ನಮ್ಮ ತಲೆಯಲ್ಲಿಯೂ ಹಾಗೆಯೇ ಉಳಿದುಕೊಂಡಿವೆ. ಮದುವೆಯ ಸಂದರ್ಭದಲ್ಲಿ ಮದುಮಗನ ಕಡೆಯವರೇ ಎಲ್ಲ ಗೌರವಕ್ಕೂ ಅರ್ಹರು. ಹೆಣ್ಣಿನ ಕಡೆಯವರು ಗೌಣ ! ಮದುವೆಯಾದ ನಂತರ ವಧುವಿನ ಹೆಸರು ಬದಲಾಗುತ್ತದೆ, ಅಡ್ಡ ಹೆಸರೂ ಬದಲಾಗುತ್ತದೆ ! ಮಕ್ಕಳಾದಾಗಲೂ ಹೀಗೆಯೇ ನಮ್ಮ ವರ್ತನೆ ಇರುತ್ತದೆ – ಗಂಡು ಹುಟ್ಟಿದರೆ ಪೇಢೆ ಹಂಚುತ್ತೇವೆ, ಹೆಣ್ಣುಮಗುವಾಗಿದ್ದರೆ ಬೇಸರಿಸಿ ಕೊಳ್ಳುತ್ತೇವೆ. ಮುಂದುವರಿದ ಕೆಲವರು ಹೆಣ್ಣುಮಗುವನ್ನು ಸಿಗರೇಟಿನ ಬೆಂಕಿಯಿಂದ ಸುಟ್ಟಿದ್ದಾರೆ. ಮನೆಯಲ್ಲಿ ಹೆಂಡತಿಯಾದಾಕೆ ಗಂಡನನ್ನು 'ರೀ' ಎಂದೇ ಕರೆಯಬೇಕು; ಗಂಡನಾದವನು ಮಾತ್ರ ಹೆಂಡತಿಯನ್ನು 'ಏಯ್' ಎಂದೇ ಮಾತನಾಡಿಸುತ್ತಾನೆ !

ಗಂಡಸರು ಏನು ಮಾಡಿದರೂ 'ಅಂವಾ ಗಂಡ್ಸು ; ಮಾಡಿದರ ನಡೀತದ ಬಿಡ' ಅನ್ನುವ ಮಾತು ಸಾಮಾನ್ಯ. ಅದೇ ಹೆಂಗಸು ಒಂದು ಸಣ್ಣ ತಪ್ಪು ಮಾಡಿದರೂ ಕೂಡ 'ಗಂಡುಬೀರಿ' ಎನಿಸಿಕೊಳ್ಳುತ್ತಾಳೆ; ವ್ಯಭಿಚಾರಿಣಿ ಪಟ್ಟ ಕಟ್ಟಲಾಗುತ್ತದೆ ! ಅನೈತಿಕ ಸಂಬಂಧ ಮಾಡಿದ ಕೆಟ್ಟ ಹುಳು ಎಂದು ದೂರೀಕರಿಸುತ್ತೇವೆ ! ನಮ್ಮ ದೇಶದಲ್ಲಿ ಹೆಣ್ಣುಮಕ್ಕಳು ಶವಸಂಸ್ಕಾರ ಮಾಡುವಂತಿಲ್ಲ. ವಿಧವೆಯಾದರೆ ಪೂಜೆ–ಪುನಸ್ಕಾರ–ಮದುವೆ–ಮುಂಜಿ–ಸಾರ್ವಜನಿಕ ಸಮಾರಂಭಗಳಲ್ಲಿ ಭಾಗವಹಿಸುವಂತಿಲ್ಲ. ಎರಡನೆಯ ಮದುವೆಗೂ ನೂರಾರು ವಿಘ್ನ ! ಗಂಡಸಾದರೆ ಆತ ವಿಧುರನಾದರೂ ಎಲ್ಲದರಲ್ಲೂ ಭಾಗವಹಿಸಬಹುದು. ಎರಡನೆಯ ಮದುವೆಯನ್ನೂ (ಯಾಕೆ, ಮೂರನೆಯ ಮದುವೆಯನ್ನೂ) ಮಾಡಿಕೊಳ್ಳಬಹುದು – ಇದಕ್ಕೆ ಯಾವುದೇ ತಕರಾರುಗಳು ಇಲ್ಲ ! ಮನೆಯಲ್ಲಿ ಗಂಡನಾದವನು ಆರಾಮಾಗಿ ಕುಳಿತಾಗ ಹೆಂಡತಿಯಾದವಳು ಮನೆಯ ಕೆಲಸವನ್ನೆಲ್ಲ ಅಚ್ಚುಕಟ್ಟಾಗಿ ಮಾಡಿ ಮುಗಿಸಬೇಕು. ಹೆಚ್ಚು–ಕಡಿಮೆಯಾದರೆ ಬೈಗುಳಗಳ ಸುರಿಮಳೆ.

ಈ ಎಲ್ಲ ಕಾರಣಗಳಿಂದಲೇ ಕೆಲವು ಮುಖಂಡರು, ಸನ್ಯಾಸಿಗಳು ಹೆಣ್ಣಿನ ಬಗ್ಗೆ ಬಾಯಿಗೆ ಬಂದಂತೆ ಮಾತನಾಡತೊಡಗಿದ್ದಾರೆ. ಯಾರೋ ಒಬ್ಬರು ಹೆಣ್ಣುಮಕ್ಕಳು ಹೊರಗೆ ಹೋಗಬಾರದು, ತಗ್ಗಿ–ಬಗ್ಗಿ ನಡೆಯಬೇಕು, ಯಾವುದೇ ಅಲಂಕಾರ ಮಾಡಿಕೊಳ್ಳಬಾರದು, ಹೊಸ ಬದುಕಿಗೆ ಹಾತೊರೆಯಬಾರದು, ಬಟ್ಟೆಗಳನ್ನು ಮೈ ತುಂಬ ಧರಿಸಬೇಕು ಎಂದು ಮೊದಲಾಗಿ ಒದರಿ, ಹೆಣ್ಣುಮಕ್ಕಳು ಹೀಗಿದ್ದರೆ ಅವರ ಮೇಲೆ ಅತ್ಯಾಚಾರಗಳು ನಡೆಯುವುದಿಲ್ಲ ಎಂದು ಭವಿಷ್ಯ ನುಡಿದರು. ನಗರಗಳಲ್ಲಿ ಹೆಣ್ಣುಮಕ್ಕಳು ವಿದೇಶಿ ಸಂಸ್ಕೃತಿಯಿಂದ ಪ್ರಭಾವಿತರಾಗಿರುವುದರಿಂದ ಚೆಲ್ಲುಚೆಲ್ಲಾಗಿರುತ್ತಾರೆ. ಹೀಗಾಗಿ ಸಹಜವಾಗಿಯೇ ಅತ್ಯಾಚಾರಗಳ ಪ್ರಮಾಣ ಹೆಚ್ಚುತ್ತಿದೆ ಎಂದು ಒದರುತ್ತಾರೆ ! ಯಾಕೆ, ಹಳ್ಳಿಗಳಲ್ಲಿಯೂ ಹೆಣ್ಣುಮಕ್ಕಳ ಮೇಲೆ ಅತ್ಯಾಚಾರಗಳು ನಡೆಯುವುದಿಲ್ಲವೆ ? ಅವಕ್ಕೆ ಪ್ರಚಾರ ಸಿಗುವುದಿಲ್ಲ; ನಗರಗಳಲ್ಲಿ ಸುದ್ದಿ ಬಹುಬೇಗ ಹಬ್ಬುತ್ತದೆ, ಅಷ್ಟೆ ! ಹಾಗೆ ನೋಡಿದರೆ ಇಂಥ ವಿಕೃತಿ ಎಲ್ಲಿ ಇರುತ್ತದೆಯೋ ಅಂಥಲ್ಲೆಲ್ಲ ಇವು ನಡೆಯುತ್ತಲೇ ಇರುತ್ತವೆ.

ಇನ್ನೊಬ್ಬರು ಬಾಯಿ ಬಾಯಿ ಬಡಿದುಕೊಂಡು, ಅತ್ಯಾಚಾರಿಗಳು ಎದುರಿಗೆ ಬಂದಾಗ ಹೆಣ್ಣುಮಕ್ಕಳು ಅವರಿಗೆ ಕೈ ಮುಗಿದು, 'ಅಣ್ಣಾ, ಅಪ್ಪಾ' ಎನ್ನಬೇಕು. ಆಗ ಅತ್ಯಾಚಾರಿಗಳ ಮನಪರಿವರ್ತನೆಯಾಗುತ್ತದೆ ಎಂಬುದಾಗಿ ಪ್ರವಚನ ಹೇಳತೊಡಗಿದರು ! ಈಗ ಅವರೇ ಬಾಲಕಿಯ ಮೇಲೆ ಅತ್ಯಾಚಾರ ನಡೆಸಿದ ಆರೋಪ ಹೊತ್ತು ಜೈಲು ಸೇರಿದ್ದಾರೆ. ಹೆಣ್ಣನ್ನು ಎಷ್ಟೊಂದು ಹೀನಾಯವಾಗಿ ನಡೆಯಿಸಿಕೊಳ್ಳುತ್ತದೆಯಲ್ಲ ಈ ದೇಶ ! ವಿಕೃತ ಮನಸ್ಸಿನವರ ಮುಂದೆ ಕೈ ಕಾಲು ಹಿಡಿದು ಕಾಪಾಡಿ ಎಂದರೆ ರಕ್ಷಣೆ ಸಿಗಲು ಸಾಧ್ಯವೆ ! ಇಂಥ ಮಾತುಗಳೆಲ್ಲ ಹೆಣ್ಣುಮಕ್ಕಳನ್ನು ಇನ್ನೊಂದಿಷ್ಟು ಭ್ರಮಾವಲಯದಲ್ಲಿ ಕೆಡವಲು ಮಾಡುವ ಹುನ್ನಾರಗಳೇ ಆಗಿವೆ ! ಇದಕ್ಕೆಲ್ಲ ಮೂಲ ಕಾರಣ ಮನುಸ್ಮೃತಿ ಇನ್ನೂ ಉರಿಯುತ್ತಲೇ ಇದೆ ! ಅದನ್ನು ಮತ್ತೊಮ್ಮೆ ನಾವೆಲ್ಲ ಸೇರಿ ನಮ್ಮ ಮನೆಗಳಿಂದ–ಮನಗಳಿಂದ ಹೊರ ತಂದು ಸಂಪೂರ್ಣವಾಗಿ ಸುಡಬೇಕಿದೆ; ಸುಟ್ಟು ಇನ್ನೆಂದೂ ಚಿಗಿಯದಂತೆ ಬೂದಿ ಮಾಡಬೇಕಿದೆ.

ಈ ದೇಶದ ಹೆಣ್ಣುಮಕ್ಕಳು ಇಂದು ಎಲ್ಲ ರಂಗಗಳಲ್ಲಿಯೂ ಮುಕ್ತವಾಗಿ ಭಾಗವಹಿಸುವ ಆಸಕ್ತಿಯನ್ನು ಹೊಂದಿದ್ದಾರೆ. ಶಿಕ್ಷಣದ ಮೂಲಕ ಹೊಸ ಹೊಸ ಅವಕಾಶಗಳೊಂದಿಗೆ ಹೊಸ ಬದುಕನ್ನು ಕಟ್ಟಿಕೊಳ್ಳುವ ಹವಣಿಕೆಯಲ್ಲಿ ಇದ್ದಾರೆ. ಕೆಲವು ಜನ ಇದರಲ್ಲಿ ಯಶಸ್ಸನ್ನೂ ಪಡೆದಿದ್ದಾರೆ. ಭಾರತೀಯ ಸಮಾಜ ಇಂದು ಬದಲಾಗಿದೆ ಎಂದು ಎದೆ ತಟ್ಟಿಕೊಂಡು ಭಾಷಣ ಬಿಗಿಯುವ ಮಂದಿಯೂ ನಮ್ಮ ನಡುವೆ ಇದ್ದಾರೆ. ಆದರೆ ಬದಲಾವಣೆ ಎನ್ನುವುದು ಹೊರಗಿನ ರೂಪ ಮಾತ್ರ ! ಹೆಣ್ಣುಮಕ್ಕಳ ವಿಷಯದಲ್ಲಿ ಇಂದಿಗೂ ಅದೇ ಹಳೆಯ ಮನೋಭಾವಗಳು ನಮ್ಮಲ್ಲಿ ಇಂದಿಗೂ ಜೀವಂತವಾಗಿವೆ ! ಯಾಕೆಂದರೆ ಈ ದೇಶದಲ್ಲಿ ಮನುಸ್ಮೃತಿ ಪೂರ್ಣವಾಗಿ ಸುಟ್ಟು ಹೋಗಿಲ್ಲ !

**ಡಾ॥ ಸಿದ್ರಾಮ ಕಾರಣಿಕ,** ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

# ಕ್ಷ - ಕಿರಣ


ಅಂದು


ಇಂದು


USA
ಕೆಲಸ ಇಲ್ಲ ಎಲ್ಲಾ ಮನೆಗೆ ಹೋಗಿ
shut down


ಜೈಲು ಆಸ್ಪತ್ರೆ
ತಿಂದ ಮೇವು ಅರಗಲಿಲ್ಲ


ಕಾಂಗ್ರೇಸ್ ಸಮಾವೇಶ ಯಶಸ್ವಿ,
ಮಂಡ್ಯ
ರಮ್ಮು ಸಿಕ್ತು ರಮ್ಯನ್ನಾ ನೋಡ್ದಂಗಾಯ್ತು




ಇಷ್ಟು ವರ್ಷಗಳಿಂದ ಇಬ್ಬರೂ ಜೊತೆಯಲ್ಲಿ ಜೀವಿಸಿದ್ದೇವಾದ್ದರಿಂದ ಇನ್ನು ಮುಂದೆ ಅವಳಿಲ್ಲದಿದ್ದರೆ ನಾನೊಬ್ಬಳೇ ಇರಲಾರೆನೆಂದುಕೊಳ್ಳುತ್ತಿದ್ದಾಳೆ. ಮೊದಲೇ ಭಯಪಟ್ಟು ಭವಿಷ್ಯತ್ತನ್ನು ಪ್ರಶ್ನಾರ್ಹ ಮಾಡಿಕೊಂಡು ವರ್ತಮಾನವನ್ನು ಕೈ ಜಾರಲು ಬಿಡುತ್ತೇವಾ ? ಭೂಮಿಕಾಳಿಗೆ ಬಿಡಿಸಿ ಹೇಳಬೇಕು.

**ಮೂಲ : ಅಬ್ಬೂರಿ ಛಾಯಾದೇವಿ**
**ಕನ್ನಡಕ್ಕೆ : ಎಂ. ಜಿ. ಶುಭಮಂಗಳ**



# ಪ್ರಶ್ನಾರ್ಹ

"ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು"
– ಎಂದು ಹೇಳಿದವರು ಈ ಕೆಳಗಿನ ನಾಲ್ವರಲ್ಲಿ ಯಾರು ?

(ಎ) ಮೋಹನದಾಸ ಕರಮಚಂದ ಗಾಂಧಿ (ಬಿ) ಬಾಲಗಂಗಾಧರ ತಿಲಕ್ (ಸಿ) ಸುಭಾಷ್‌ಚಂದ್ರ ಬೋಸ್ (ಡಿ) ಜವಾಹರಲಾಲ್ ನೆಹರು.

ಕಾರ್ಯಕ್ರಮದಲ್ಲಿ ಆ ಪ್ರಶ್ನೆಗೆ ಉತ್ತರ 'ಹಾಟ್‌ಸೀಟ್'ನಲ್ಲಿ ಕುಳಿತಿರುವ ಆಕೆಗೆ ತಿಳಿಯಲಿಲ್ಲ. ಫೋನ್‌ನಲ್ಲಿ ತನ್ನ 'ಬಾಸ್' ಬಳಿ ಕೇಳಲು ಆಕೆ ಅನುಮತಿ ಕೇಳಿದಳು. ಆ ಪ್ರಯತ್ನ ನಡೆಯುತ್ತಿದೆ.

ನನ್ನ ಆಲೋಚನೆ ಬೇರೆಡೆಗೆ ಹರಿಯಿತು. ಆ ನಾಲ್ಕು ಹೆಸರುಗಳು ಪುರುಷರದ್ದೇ. ನೆಪಮಾತ್ರಕ್ಕಾದರೂ ಒಬ್ಬ ಮಹಿಳೆಯ ಹೆಸರು ಯಾಕೆ ನೀಡಬಾರದು ? ಆ ದಿನಗಳಲ್ಲಿ ಸರೋಜಿನಿ ನಾಯ್ಡು, ವಿಜಯಲಕ್ಷ್ಮಿ ಪಂಡಿತ್‌ರಂತಹ ಸ್ತ್ರೀಯರು ಕೂಡ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದರಲ್ಲವೇ ? ಸ್ತ್ರೀಯರಾದರೂ, ಅಂದಿನ ಪರಿಸ್ಥಿತಿಯಲ್ಲಿ ಪುರುಷರಿಗೆ ಸಮನಾಗಿ ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ. ಅಂತಹ ಮಹಿಳೆಯರಲ್ಲಿ ಯಾರಾದರೂ ಒಬ್ಬರ ಹೆಸರನ್ನಾದರೂ ಕೊಡಬಹುದಲ್ಲ ? ಕೊಡದಿರಲು ಕಾರಣ – ಸ್ತ್ರೀಯರ ವಿಚಾರದಲ್ಲಿ ಸಾಮಾಜಿಕ ದೃಷ್ಟಿಕೋನ ಇಂದಿಗೂ ಮಹತ್ತರ ಬದಲಾವಣೆಯಾಗದಿರುವುದೇ. ಆಲೋಚನೆಗಳಲ್ಲಿ ಬದಲಾವಣೆ ಬರದಿದ್ದರೆ, ಪರಿಸ್ಥಿತಿಗಳಲ್ಲಿ ಬದಲಾವಣೆ ಹೇಗೆ ತಾನೆ ಬರುತ್ತದೆ ? ಭಾಷೆ, ಸಂಸ್ಕೃತಿ, ಸಂಪ್ರದಾಯಗಳು ಹೆಚ್ಚಿನ ಮಟ್ಟಿಗೆ ಪುರುಷರ ಪರವಾಗಿ ರೂಪಿಸಲ್ಪಟ್ಟಿರುವುದರಿಂದ, ಸ್ತ್ರೀಯರ ಪರಿಸ್ಥಿತಿ ಮತ್ತೊಂದು ರೀತಿಯಲ್ಲಿರಲು ಹೇಗೆ ಸಾಧ್ಯ ?

ಆ 'ಹಾಟ್ ಸೀಟ್'ನಲ್ಲಿದ್ದ ಹುಡುಗಿ ಈಗಾಗಲೇ ಎಂಭತ್ತು ಸಾವಿರ ಗೆದ್ದುಕೊಂಡಿದ್ದಾಳೆ. 'ಗೆದ್ದುಕೊಂಡಿದ್ದಾರೆ!' ಎಂದು ಹೇಳಲಿಲ್ಲ. ಆ ಕಾರ್ಯಕ್ರಮದ ನಿರೂಪಕ "ಎಂಭತ್ತು ಸಾವಿರ ನಿಮ್ಮ ಜೇಬಿಗೆ ಬಂದಿದೆ!" ಎಂದನು. ಸಾಮಾನ್ಯವಾಗಿ ಜೇಬು ಗಂಡಸರ ಬಟ್ಟೆಗಳಿಗೆ ಇರುತ್ತದೆಯಲ್ಲವೇ ? ಆ ಹುಡುಗಿ ವಯಸ್ಸಿನಲ್ಲಿ ಚಿಕ್ಕವಳೇ ಆದರೂ, ಸಾಂಪ್ರದಾಯಿಕವಾಗಿ ಸೀರೆ ಉಟ್ಟಿದ್ದಾಳೆ. ಮತ್ತೆ, ಜೇಬು ಹೇಗೆ ತಾನೆ ಇರುತ್ತದೆ ? "ನಿಮ್ಮ ಪರ್ಸಿಗೆ ಬಂದಿದೆ" ಎಂದು ಹೇಳಬಹುದಿತ್ತು. ಆದರೆ 'ಜೇಬು' ಎನ್ನುವ ಮಾತು ಆತನ ಬಾಯಲ್ಲಿ ಸಹಜವಾಗೇ ಬಂದುಬಿಟ್ಟಿತು.

ಜೋರಾಗಿ ಕಿರುಚಿದಳು ನನ್ನ ಪಕ್ಕದಲ್ಲಿ ಕುಳಿತಿದ್ದ ಭೂಮಿಕಾ. ಗಾಬರಿಯಿಂದ ಭಯಪಟ್ಟೆ. ಯೋಚನೆಯಲ್ಲಿ ಮುಳುಗಿದ್ದವಳು ಹೊರಬಂದು "ಏನಾಯಿತೆ ?" ಎಂದೆ. "ಗೋವಿಂದ ! ಎಪ್ಪತ್ತು ಸಾವಿರ ಗೋವಿಂದ !" ಎಂದಳು. ತಾನೇ ಸೋತುಹೋದೆ ಎನ್ನುವಷ್ಟರ ಮಟ್ಟಿಗಿತ್ತು ಅವಳ ಮಾತುಗಳು. "ಶಹಬಾಸ್ !" ಎಂದೆ ನಗುತ್ತಾ. ಆ ಹುಡುಗಿ ಸೋತುಹೋದಳೆಂಬ ವಿಚಾರಕ್ಕಿಂತಲೂ, ಆಕೆಯ 'ಬಾಸ್' ತಪ್ಪು ಹೇಳಿದ್ದಕ್ಕೆ ಸಂತೋಷವಾಯಿತು ನನಗೆ ! ಆದರೆ, ಅಷ್ಟರಲ್ಲಿಯೇ ಅನುಮಾನ ಹುಟ್ಟಿತು – ಆ ಹುಡುಗಿ ಗೆಲ್ಲ ಬಾರದೆಂಬ ಉದ್ದೇಶದಿಂದ ಹಾಗೆ ಹೇಳಿದನೇನೋ. ಆದರೆ ಆತನ ಗೌರವವೇ ನಷ್ಟವಾಯಿತಲ್ಲ. ಆದರೇನಂತೆ, ಅಷ್ಟು ಮಾತ್ರ ಅವಮಾನವಾದರೆ ಏನಂತೆ ?

ನನಗಿನ್ನು ಟಿ.ವಿ. ನೋಡುವ ಆಸಕ್ತಿಯಾಗಲಿಲ್ಲ. ಮನಸ್ಸಿನ ತುಂಬ ಭೂಮಿಕಾಳ ಭವಿಷ್ಯದ ಚಿಂತೆ ತುಂಬಿಹೋಗಿದೆ. ಅದರಲ್ಲಿಯೇ ನನ್ನ ಭವಿಷ್ಯ ಕೂಡ ಇಲ್ಲದಿಲ್ಲ.

"ನನ್ನ ಕುರಿತು ಯೋಚಿಸಬೇಡ" ಎಂದು ನಾನಂದರೆ, "ಅಮ್ಮಾ ನಿನ್ನ ಭವಿಷ್ಯ, ಜೀವನ ನಾನು ಮರೆಯಲಾರೆ. ನಿನ್ನ ಕುರಿತು ಯೋಚಿಸದೆ ಇರಲು ಹೇಗಾಗುತ್ತದೆ !" ಎನ್ನುತ್ತಾಳೆ ಭೂಮಿಕಾ.

ಅವಳ ವಿದ್ಯಾಭ್ಯಾಸ ಮುಗಿದು ಕೆಲಸಕ್ಕೆ ಸೇರಿಕೊಳ್ಳುವವರೆಗೂ ಎಷ್ಟು ಅವಸ್ಥೆಪಟ್ಟೆನೋ, ಎಷ್ಟು ರೀತಿಯ ಚಾಕರಿ ಮಾಡಿದೆನೋ. ಅದೆಲ್ಲವನ್ನೂ ಅವಳು ಕಣ್ಣಾರೆ ನೋಡಿದ್ದಾಳೆ. ತಂದೆಯ ಪ್ರೀತಿಯನ್ನು ಅವಳೆಂದೂ ಪಡೆಯಲಿಲ್ಲ. ತಂದೆ ದೇವರ ಹತ್ತಿರ ಹೋಗಿದ್ದಾನೆ ಎಂದರೆ ಎಲ್ಲರಿಗೂ ಸಹಾನುಭೂತಿ ಇರುತ್ತದೆ. ತಂದೆ ಮತ್ತೊಬ್ಬ ಪರಸ್ತ್ರೀ ಬಳಿ ಹೊರಟು ಹೋಗಿದ್ದಾನೆಂದರೆ ಕೇವಲ ತಾತ್ಸಾರ.

'ಗಂಡ ಬಿಟ್ಟ ಹೆಣ್ಣು' ಎಂದು ನನ್ನ ಮೇಲೆ ಬಿದ್ದ ಮುದ್ರೆ ನನ್ನೊಂದಿಗೇ ಹೊರಟು ಹೋದರೆ ಅಷ್ಟು ಸಮಸ್ಯೆ ಆಗುತ್ತಿರಲಿಲ್ಲ. ಆ ಕಹಿ ಅನುಭವವನ್ನು ನುಂಗಿಕೊಂಡು ನನ್ನ ಒಂಟಿ ಬದುಕನ್ನು ನಾನು ಹೇಗೋ ಅನುಭವಿಸುತ್ತಿದ್ದೆ. ಅದು ನನ್ನ ಮಗಳ ಜೀವನವನ್ನು ಕೂಡ ಕಾಡುತ್ತಿರುವುದೇ ದುರ್ಭರವಾಗಿದೆ. "ಎಳೆಮಗುವಿನ ಮುಖ ನೋಡಿಯಾದರೂ ನನಗೆ ಅನ್ಯಾಯ ಮಾಡಬೇಡಿ" ಎಂದು ಆ ದಿನ ಕಣ್ಣೀರಿಟ್ಟು, ಸ್ವಾಭಿಮಾನವನ್ನು ಬದಿಗೊತ್ತಿ ಕೇಳಿಕೊಂಡೆ. ಮಗುವನ್ನು ನೋಡಿ ಎತ್ತಿಕೊಂಡರೆ ಅವಳ ಆಕರ್ಷಣೆ ತನಗೆಲ್ಲಿ ಅಡ್ಡಬರುವುದೋ ಎಂಬಂತೆ ಅವಳೆಡೆ ತಿರುಗಿಯೂ ನೋಡದೆ, "ನಿನ್ನ ತಿಂಡಿ ಬಟ್ಟೆಗೆ ಯಾವ ಲೋಪವನ್ನೂ ಮಾಡುವುದಿಲ್ಲ. ಅದಕ್ಕಿಂತ ಹೆಚ್ಚಾಗಿ ನಾನು ಏನೂ ಮಾಡಲಾರೆ" ಎನ್ನುತ್ತಾ ತನ್ನ ಮನಸ್ಸನ್ನು ಕಲ್ಲು ಮಾಡಿಕೊಂಡು ನನ್ನ ಮನಸ್ಸನ್ನು ಛಿದ್ರಮಾಡಿ ವಿದೇಶಕ್ಕೆ ಹೊರಟುಹೋದರು. ಗಂಡ ಬಿಟ್ಟವಳನ್ನು ತವರುಮನೆಯವರೇ ಎಲ್ಲ ಕಾಲಕ್ಕೂ ಗೌರವಿಸುವುದಿಲ್ಲ. ಇನ್ನು ನನಗೆ ಅತ್ತೆಯ ಆದರಣೆ ಎಲ್ಲಿ ಸಿಗುತ್ತದೆ ?

ಹೊಸದರಲ್ಲಿ ಅವರು ಕಳುಹಿಸುತ್ತಿದ್ದ ಹಣವನ್ನು ನನ್ನ ಮತ್ತು ಮಗಳ ಖರ್ಚು ವೆಚ್ಚಕ್ಕಾಗಿ ಮಾವನವರೇ ತೆಗೆದುಕೊಳ್ಳುತ್ತಿದ್ದರು. ಆ ಹಣ ಬರುವುದು ಮತ್ತು ನಾನು ಮನೆಯಲ್ಲಿ ಚಾಕರಿ ಮಾಡದಿದ್ದರೆ ನಮ್ಮಿಬ್ಬರನ್ನು ಆ ಸ್ವಲ್ಪ ದಿನಗಳಾದರೂ ಇಟ್ಟುಕೊಳ್ಳುತ್ತಿರಲಿಲ್ಲ. ವಸ್ತುಗಳ ಬೆಲೆ, ನಮ್ಮ ಅಗತ್ಯಗಳು ಹೆಚ್ಚುತ್ತಿದ್ದಂತೆ ಅತ್ತೆ ಮಾವನವರ ಅಸಹನೆ ಹೆಚ್ಚಾಗುತ್ತಾ ಬಂದಿತು. ಮೊಮ್ಮಗ ಹುಟ್ಟಿದ್ದಿದ್ದರೆ ವಂಶೋದ್ಧಾರಕನೆಂಬ ಕಾಳಜಿಯಿಂದ ಹತ್ತಿರವಿಟ್ಟುಕೊಳ್ಳುತ್ತಿದ್ದರೇನೋ. ಮೊಮ್ಮಗಳನ್ನು ನೋಡಿದರೆ, ಅವರಿಗೆ ಎಲ್ಲಿಲ್ಲದ ಕೋಪ ಬರುತ್ತಿತ್ತು. ಅವಳ ಮುದ್ದು ಮಾತುಗಳು ಅವರಿಗೆ ಕಿರಿಕಿರಿಯುಂಟು ಮಾಡುತ್ತಿತ್ತು. ಮನೆ ಚಾಕರಿಯಲ್ಲಿ ಮುಳುಗುತ್ತಿದ್ದ ನನಗೆ ಅವಳ ಮಾತುಗಳನ್ನು ಕೇಳಲು ಸಮಯವಾಗಲಿ, ಮುದ್ದುಮಾಡುವ ಸಹನೆಯಾಗಲಿ ಇರುತ್ತಿರಲಿಲ್ಲ.

ಭೂಮಿಕಾಳನ್ನು ಶಾಲೆಗೆ ಸೇರಿಸಬೇಕಾದ ಸಮಯ ಬಂದರೂ ಸುಮ್ಮನಿದ್ದ ಅವರ ನಿರ್ಲಕ್ಷ್ಯ ಧೋರಣೆಯನ್ನು ಸಹಿಸಿಕೊಳ್ಳಲು ನನ್ನಿಂದಾಗಲಿಲ್ಲ. ನಾಲ್ಕು ಮನೆಯಲ್ಲಿ ಮುಸುರೆ ತೊಳೆದಾದರೂ ನನ್ನ ಮಗಳನ್ನು ಪೋಷಿಸಿ ಓದಿಸುತ್ತೇನೆ ಎಂದು ಹೇಳಿ, ಅತ್ತೆ ಮನೆ ಬಿಟ್ಟು ತವರು ಮನೆ ಸೇರಿಕೊಂಡೆ. ಆರ್ಥಿಕ ಸ್ವಾತಂತ್ರ್ಯವಿಲ್ಲದ ಹೆಣ್ಣಿಗೆ ಅದಕ್ಕಿಂತಲೂ ಬೇರೆ ದಾರಿ ಏನಿರುತ್ತದೆ ? ನನ್ನ ಮೈಮೇಲಿದ್ದ ಒಡವೆಗಳನ್ನು ಅಪ್ಪನ ಕೈಗಿಟ್ಟು, ಮೊದಲು ನನ್ನ ಉನ್ನತ ವ್ಯಾಸಂಗಕ್ಕೆ ಸಹಾಯ ಬೇಡಿದೆ. ಮಗುವನ್ನು ಅಮ್ಮನಿಗೆ ಒಪ್ಪಿಸಿ, ಟೀಚರ್ ಟ್ರೈನಿಂಗ್‌ಗೆ ಸೇರಿಕೊಂಡೆ. ಮನೆಗೆ ಬಂದಮೇಲೆ ಆಟ ಆಡಿಸುತ್ತಲೇ ಅವಳಿಗೆ ಮಾತು ಕಲಿಸಿದೆ. ತಮ್ಮನ ಮದುವೆಯಾದ ಮೇಲೆ, ನನಗೆ ಶಾಲೆಯಲ್ಲಿ ಉದ್ಯೋಗ ದೊರೆತದ್ದರಿಂದ ಬೇರೆ ಮನೆ ಬಾಡಿಗೆಗೆ ಪಡೆದೆ. ಭೂಮಿಕಾಳನ್ನು ನಮ್ಮ ಶಾಲೆಯಲ್ಲಿ ಸೇರಿಸಲು ಅವಕಾಶವಾದ ಮೇಲೆ ಅವಳನ್ನು ಮತ್ತಷ್ಟು ಹತ್ತಿರವಿದ್ದು ನೋಡಿಕೊಳ್ಳಲು ಸಾಧ್ಯವಾಯಿತು. ಅಮ್ಮನ ಮನೆಯವರಿಗೆ ಆಗಾಗ ಸಹಾಯ ಮಾಡುತ್ತಿದ್ದುದರಿಂದ, ಅವರು ನನ್ನ ಸುಖ, ಸಂತೋಷಗಳಿಗೆ ಸ್ಪಂದಿಸುತ್ತಿದ್ದರು. ಹಾಗಾಗಿ ಭೂಮಿಕಾಳನ್ನು ಧೈರ್ಯವಾಗಿ ಅವರ ಬಳಿಯೇ ಬಿಟ್ಟು ನಾನು ಹೊರಗಿನ ಕೆಲಸ ಮಾಡಿಕೊಂಡು ಬರುತ್ತಿದ್ದೆ.

ಈಗ ನನಗೆ ಭೂಮಿಕಾ, ಅವಳಿಗೆ ನಾನು, ಬಿಟ್ಟರೆ ನಮಗೆ ಬಂಧುಗಳಾರೂ ಆಸರೆಯಾಗಿಲ್ಲ. ಆ ಅಗತ್ಯ ಬಾರದಂತೆ ಎಚ್ಚರ ವಹಿಸಿದೆ.

ನನ್ನ ತಂದೆತಾಯಿಯರಿಗೆ ವಯಸ್ಸಾಗಿ, ಅವರೇ ಗಂಡುಮಕ್ಕಳನ್ನು ಅವಲಂಬಿಸಿರುವಾಗ ನಾನು ಅವರನ್ನು ಅವಲಂಬಿಸಿರುವುದರಲ್ಲಿ ಅರ್ಥವಿಲ್ಲ. ಅಣ್ಣ ತಮ್ಮಂದಿರಿಗೆ ದೂರವಾಗಿರುತ್ತ ನನ್ನ ಗೌರವ ನಾನು ಉಳಿಸಿಕೊಂಡೆ. ಶಾಲೆಯಲ್ಲಿ ನೌಕರಿ ಮಾಡುತ್ತಲೇ ಮಗಳ ಪೋಷಣೆ, ಶಿಕ್ಷಣವನ್ನು ನಿಭಾಯಿಸಿಕೊಂಡು, ಕರೆಸ್ಪಾಂಡೆನ್ಸ್‌ನಲ್ಲಿ ಬಿ.ಎ.ಗೆ ಕಟ್ಟಿದೆ. ನಂತರ ರಜೆ ಹಾಕಿ ಬಿ.ಎಡ್. ಮುಗಿಸಿದೆ. ಮಗಳು ಸ್ವಲ್ಪ ಬೆಳೆಯುವಷ್ಟರಲ್ಲಿ, ಹೈಸ್ಕೂಲಿನಲ್ಲಿ ಕೆಲಸ ಸಿಕ್ಕಿತು. ಆ ಶಾಲೆಗೇ ಭೂಮಿಕಾಳನ್ನು ಸೇರಿಸಿದೆ. ಅವಳು ಕಾಲೇಜು ವ್ಯಾಸಂಗ ಮುಗಿಸಿ, ಪ್ಯಾರಾ ಮೆಡಿಕಲ್ ಕೋರ್ಸ್ ಮಾಡಿದಳು. ತನ್ನ ಪ್ರತಿಭೆಯಿಂದ ಅವಳು ಒಳ್ಳೆ ಕಂಪನಿಯಲ್ಲಿ ಉದ್ಯೋಗ ಪಡೆದಳು.

ನಮ್ಮ ಜೀವನವನ್ನು ನಾವೇ ತೂಗಿಸಿಕೊಂಡು, ಉತ್ತಮ ಭವಿಷ್ಯ ರೂಪಿಸಿಕೊಳ್ಳುತ್ತಿದ್ದೇವೆ. ಆದರೆ ಹಾಗೆಂದು ನಾವು ತೃಪ್ತಿಯಿಂದಿರಲು ಸಮಾಜ ಬಿಡುವುದಿಲ್ಲ. ನಮಗೆ ವರ್ತಮಾನ, ಭವಿಷ್ಯತ್ತು ಬಿಟ್ಟರೆ, ಭೂತಕಾಲವಿಲ್ಲ, ಎಂದು ನಾವಿಬ್ಬರೂ ಅಂದುಕೊಂಡರೆ ಸಾಕಾಗುವುದಿಲ್ಲ ಎಂದು ಬೊಟ್ಟುಮಾಡಿ ತೋರಿಸುವಂತೆ ಭೂತಕಾಲವನ್ನು ನೆನಪಿಸುತ್ತದೆ. ಹಿಂದಿನದನ್ನು ಕೆದಕಿ ತೆಗೆಯುತ್ತದೆ. ಮಾಡದ ತಪ್ಪಿಗೆ ತಪ್ಪಿತಸ್ಥರನ್ನಾಗಿ ಮಾಡಿ ನಿಲ್ಲಿಸುತ್ತದೆ.

ಒಳ್ಳೆಯ ವಿದ್ಯಾಭ್ಯಾಸ, ಕೈತುಂಬ ಸಂಬಳ ಬರುವ ವಯಸ್ಸಿಗೆ ಬಂದ ಮಗಳಿಗೆ ಮದುವೆ ಮಾಡಬೇಕೆಂದುಕೊಳ್ಳುವುದರಲ್ಲಿ ತಪ್ಪೇನಿದೆ ? ಮದುವೆಯಾಗಿ ಅವಳು ಸುಖವಾಗಿರಬೇಕೆಂದುಕೊಳ್ಳುವುದು ಸಹಜವಲ್ಲವೇ ? ಅವಳಿಗೆ ಒಬ್ಬ ಅಮ್ಮನಿರುವುದು ಅಪರಾಧವೇ ?

ಯಾವ ಸಂಬಂಧಗಳು ಬಂದರೂ, ಮೊದಲು ತಂದೆ ಎಲ್ಲಿ ಎಂದು ಕೇಳುತ್ತಾರೆ. ತಂದೆಯ ಕಡೆಯ ಸಂಬಂಧಿಕರ ಕುರಿತು ವಿಚಾರಿಸುತ್ತಾರೆ. ಹುಡುಗಿಯ ಉದ್ಯೋಗ, ಸೌಂದರ್ಯ ನೋಡಿ ಒಪ್ಪಿಕೊಂಡರೂ, ವರದಕ್ಷಿಣೆ ವಿಚಾರ ತೆಗೆಯುತ್ತಾರೆ. ವರದಕ್ಷಿಣೆ ಆಸೆಯನ್ನು ನೆರವೇರಿಸಬೇಕೆಂದುಕೊಂಡರೂ, ಹುಡುಗಿಯ ಅಮ್ಮ ಅವರಿಗೆ ಅಡ್ಡಿಯಾಗಿ ಬಿಡುತ್ತಾಳೆ. ಭೂಮಿಕಾ ಅಮ್ಮ ತನ್ನ ಬಳಿಯೇ ಇರುತ್ತಾಳೆ ಎಂದು ನೇರವಾಗಿ ಹೇಳುತ್ತಾಳೆ. ಅದು ಅವರಿಗೆ ನುಂಗಲಾರದ ತುತ್ತಿನಂತಾಗುತ್ತದೆ. ತಂದೆ ಸತ್ತು, ತಾಯಿ ಒಬ್ಬಳೇ ಇದ್ದರೆ ಆ ತಾಯಿಯನ್ನು ನೋಡಿಕೊಳ್ಳುವ ಜವಾಬ್ದಾರಿ ಮಗ ತೆಗೆದುಕೊಳ್ಳಬೇಕೆಂದುಕೊಳ್ಳುವುದಿಲ್ಲವೇ ? ಹಾಗೆ ತೆಗೆದುಕೊಳ್ಳದಿದ್ದರೆ ಆ ಮಗ ಒಳ್ಳೆಯವನೆನಿಸಿಕೊಳ್ಳುವುದಿಲ್ಲ. ಹೆಂಡತಿ ಆತನಿಗೆ ಸಹಕರಿಸದಿದ್ದರೆ ಸ್ವಾರ್ಥಪರಳು ಎನಿಸಿ ಕೊಳ್ಳುತ್ತಾಳೆ. ಆದರೆ, ತಂದೆ ಇಲ್ಲದಿರುವಾಗ, ಒಂಟಿಯಾಗಿರುವ ಅಮ್ಮನನ್ನು ಹತ್ತಿರ ಇಟ್ಟುಕೊಳ್ಳುತ್ತೇನೆಂದು ಮಗಳು ಹೇಳಿದರೆ, ಆಕೆಗೆ ಅಡ್ಡಿಪಡಿಸುತ್ತಾರೆ. ಹುಡುಗಿಗೆ ಮದುವೆಯಾದ ನಂತರ ಆ ಜವಾಬ್ದಾರಿ, ಹಕ್ಕು ಇಲ್ಲವೆನ್ನುತ್ತಾರೆ. ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದರೂ ವೃದ್ಧಾಪ್ಯದಲ್ಲಿ ಮಕ್ಕಳು ತಮಗೆ ಆಸರೆಯಾಗಿರಬೇಕೆಂದುಕೊಳ್ಳುವುದು ಸಹಜ ಅಲ್ಲವೇ. ಆದರೆ, ಗಂಡುಮಕ್ಕಳಿಗಿರುವ ಸ್ವಾತಂತ್ರ್ಯ, ಸ್ವೇಚ್ಛೆ–ಅದನ್ನು ಉಪಯೋಗಿಸಿಕೊಂಡರೂ, ಉಪಯೋಗಿಸಿಕೊಳ್ಳದಿದ್ದರೂ – ಹೆಣ್ಣು ಮಕ್ಕಳಿಗೆ ಮಾತ್ರ ಇರುವುದಿಲ್ಲ. ಸ್ವೇಚ್ಛೆ ಬೇಕೆಂದುಕೊಂಡರೆ ಬೇಕೆಂದುಕೊಳ್ಳುವ ಜೀವನವೂ ಲಭಿಸುತ್ತಿಲ್ಲ.

"ನನ್ನ ಕುರಿತು ಚಿಂತೆ ಮಾಡಬೇಡಮ್ಮ, ನನ್ನದೆಲ್ಲ ಕಳೆದಿದೆ. ಇದ್ದಷ್ಟು ದಿನ ನನ್ನ ತಂಟೆ, ತಾಪತ್ರಯ ನನಗೇ ಇರಲಿ" ಎನ್ನುತ್ತಲೇ ಇದ್ದೇನೆ. "ಒಂಟಿಯಾಗಿ ನೀನು ಯಾಕೆ ಕಷ್ಟಪಡಬೇಕು ? ನೀನು ನನ್ನ ಬಳಿ ಇರಬಾರದೆಂದು ಷರತ್ತು ಹಾಕಲು ಅವರ್ಯಾರು ?" ಎನ್ನುತ್ತಾಳೆ. "ಹಾಗೆ ದಿಟ್ಟವಾಗಿ ಮಾತನಾಡಿದರೆ ಸ್ವೇಚ್ಛೆ ಬೇಕೋ, ಗಂಡ ಬೇಕೋ ಯೋಚಿಸು" ಎನ್ನುತ್ತಾರೆ. "ಹೆಣ್ಣುಮಗಳು ಅತ್ತೆ ಮನೆಗೆ ಹೋಗುವುದು ಸಂಪ್ರದಾಯ. ಒಮ್ಮೆ ಮಗಳನ್ನು ಅತ್ತೆ ಮನೆಗೆ ಕಳುಹಿಸಿದ ಮೇಲೆ ತವರುಮನೆಯವರಿಗೆ ಮಗಳ ಮೇಲೆ ಹಕ್ಕು ಇರುವುದಿಲ್ಲ. ಅತ್ತೆಯವರಿಗೆ ಸೇವೆ ಮಾಡುವುದೇ ಹೆಣ್ಣಿನ ಧರ್ಮ" ಎಂದು ನೆನಪಿಸಿದೆ. "ಹೆಣ್ಣಿನ ಧರ್ಮ, ಗಂಡಸಿನ ಧರ್ಮ, ತವರುಮನೆಯವರು, ಅತ್ತೆಮನೆಯವರು ಎಂದು ವ್ಯತ್ಯಾಸ ಮಾಡಿ ಹೆಣ್ಣುಮಗುವಿಗೆ ಅನ್ಯಾಯ ಮಾಡುವುದೇನಾ ಧರ್ಮ, ಸಂಪ್ರದಾಯ ಎಂದರೆ?" ಎಂದು ವಾದಿಸುತ್ತಾಳೆ ಭೂಮಿಕಾ.

"ಮಮ್ಮಿ, ಮಮ್ಮಿ ! ಈ ಪ್ರಶ್ನೆ ನೋಡು !" ಎಂದಳು ಭೂಮಿಕಾ ಆತುರವಾಗಿ, ಟಿ.ವಿ.ಯತ್ತ ನೋಡುತ್ತಿದ್ದರೂ ಆ ಪ್ರಶ್ನೆ ನನ್ನ ಕಣ್ಣಿಗೆ ಕಾಣಿಸುತ್ತಿಲ್ಲ. ಭೂಮಿಕಾಳ ಜೀವನದ ಎದುರಿಗಿರುವ ಪ್ರಶ್ನೆಯೇ ನನ್ನನ್ನು ಉತ್ತರ ಹೇಳು ಎನ್ನುತ್ತಿದೆ. ನಾನು ಇಷ್ಟು ದಿನ ಸ್ವತಂತ್ರವಾಗಿ ಬದುಕಿ ಅವಳನ್ನು ಒಬ್ಬ ವ್ಯಕ್ತಿಯಾಗಿ ರೂಪಿಸಿದ್ದಕ್ಕಾಗಿಯೇ ಈ ಪ್ರಶ್ನೆ ಎದುರಾಗುತ್ತಿದೆಯೇ ? ನನ್ನ ಭವಿಷ್ಯತ್ತಿನ ಕುರಿತು ಯೋಚಿಸುವ ನನ್ನ ಮಗಳನ್ನು ನೋಡಿ ಹೆಮ್ಮೆಪಡಬೇಕೇ, ಅವಳ ಭವಿಷ್ಯತ್ತನ್ನು ಪ್ರಶ್ನಾರ್ಹ ಮಾಡುವ ನನ್ನ ಅಸ್ತಿತ್ವದ ಕುರಿತು ಯೋಚಿಸಬೇಕೇ ? ಆದರೂ ನನ್ನ ಮಗಳು ಮದುವೆಯಾದ ಮೇಲೆ ನನ್ನನ್ನು ತನ್ನ ಬಳಿ ಇಟ್ಟುಕೊಳ್ಳಲು ಆಗುವುದಿಲ್ಲವೆಂದು ಬೇಸರಪಟ್ಟುಕೊಳ್ಳುವುದೆಂದರೇನು ? ಅವರ ಬಳಿ ಇದ್ದರೆ ನನ್ನ ಮನೆಯಲ್ಲಿ ಇರುವ ಸ್ವಾತಂತ್ರ್ಯ ನನಗೆ ಇರುತ್ತದೆಯೇ ? ಅವರಿಗೆ ಅಗತ್ಯ ಬಿದ್ದಾಗ ಯಾವಾಗಾದರೊಮ್ಮೆ ಹೋಗಿ ಕೆಲವು ದಿನ ಇದ್ದು ಬರುವುದು ಚೆನ್ನಾಗಿರುತ್ತದೆ. ಮಗನಾದರೂ ಅಷ್ಟೆ, ಮಗಳಾದರೂ ಅಷ್ಟೆ.

ಇಷ್ಟು ವರ್ಷಗಳಿಂದ ಇಬ್ಬರೂ ಜೊತೆಯಲ್ಲಿ ಜೀವಿಸಿದ್ದೇವಾದ್ದರಿಂದ ಇನ್ನು ಮುಂದೆ ಅವಳಿಲ್ಲದಿದ್ದರೆ ನಾನೊಬ್ಬಳೇ ಇರಲಾರೆನೆಂದುಕೊಳ್ಳುತ್ತಿದ್ದಾಳೆ. ಮೊದಲೇ ಭಯಪಟ್ಟು ಭವಿಷ್ಯತ್ತನ್ನು ಪ್ರಶ್ನಾರ್ಹ ಮಾಡಿಕೊಂಡು ವರ್ತಮಾನವನ್ನು ಕೈ ಜಾರಲು ಬಿಡುತ್ತೇವಾ ? ಭೂಮಿಕಾಳಿಗೆ ಬಿಡಿಸಿ ಹೇಳಬೇಕು.

ತೆಲುಗು ಮೂಲ : **ಅಬ್ಬೂರಿ ಛಾಯಾದೇವಿ**
ಕನ್ನಡಕ್ಕೆ : **ಎಂ. ಜಿ. ಶುಭಮಂಗಳ**
೪೯, ೧೩ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ಜಿ. ಕೆ. ಲೇಔಟ್, ಎಲೆಕ್ಟ್ರಾನಿಕ್ ಸಿಟಿ ಅಂಚೆ, ಬೆಂ.–೧೦೦



ಮುರಳೀಧರ ಚಿಕ್ಕಮಗಳೂರು

**ವಿಶ್ವ ಬ್ಯಾಂಕ್ ಆರ್ಥಿಕ ತಜ್ಞ ಬ್ರಾಂಕೊ ಮಿಲನೊವಿಚ್‌ನ ಪ್ರಕಾರ ಅಮೆರಿಕದಲ್ಲಿ ಮೇಲಿನ ಸ್ತರದ 1% ಶ್ರೀಮಂತರು ದೇಶದ 22% ಆದಾಯವನ್ನು ತಮ್ಮದಾಗಿಸಿಕೊಂಡಿದ್ದಾರೆ. ಮೇಲಿನ ಸ್ತರದ 0.1% ಭಾರಿ ಶ್ರೀಮಂತರು ದೇಶದ 11% ಆದಾಯವನ್ನು ತಮ್ಮದಾಗಿಸಿಕೊಂಡಿದ್ದಾರೆ. 2009ರ ನಂತರ 1% ಶ್ರೀಮಂತರು ಒಟ್ಟು ಆದಾಯದ 95% ಕಬಳಿಸಿದ್ದಾರೆ.**

# ಆತಂಕಕ್ಕೊಳಗಾದ ಅಮೆರಿಕ

**ಸಾಲಗಾರ – ಅಮೆರಿಕ**

ಪ್ರಪಂಚದ ಯಜಮಾನನಂತೆ ಬೀಗುವ ಅಮೆರಿಕ ಸದಾ ಸುದ್ದಿಯಲ್ಲಿರಲು ಬಯಸುವ ದೇಶ. ಅದು ಬಹಳಷ್ಟು ಸಲ ಅನಿಷ್ಟ ಕಾರಣಗಳಿಗಾಗಿ ಎಂಬುದು ಬೇರೆಲ್ಲರಿಗೂ ತಿಳಿದ ವಿಷಯ. ಇತ್ತೀಚಿನ ಕೆಲವು ದಿನಗಳ ಬಿಸಿ ಸುದ್ದಿಯೆಂದರೆ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮನ ಸರ್ಕಾರದ ಖಜಾನೆ ಖಾಲಿಯಾಗಿ ಸುಮಾರು ಎಂಟು ಲಕ್ಷ ಸರ್ಕಾರಿ ನೌಕರರನ್ನು ಕಡ್ಡಾಯ ರಜೆ ನೀಡಿ ಹೊರಹಾಕಿದ್ದು, ಮ್ಯೂಸಿಯಂ, ಪಾರ್ಕ್ ಇತ್ಯಾದಿಗಳನ್ನು ಬಂದ್ ಮಾಡಿದ್ದು. ಈ ಸ್ವಯಂಕೃತ ಆರ್ಥಿಕ ಸಂಕಟವೇನಾದರೂ ಪರಿಹಾರಗೊಳ್ಳದಿದ್ದಲ್ಲಿ ತಾನು ಮಾಡಿದ ಸಾಲವನ್ನು ತೀರಿಸಲಾಗದ ದೇಶವೆಂಬ ಹಣೆಪಟ್ಟಿ ಹಚ್ಚಿಕೊಂಡಲ್ಲಿ ಅಮೆರಿಕದ ವರ್ಚಸ್ಸಿಗೆ ಮಾರಕವೆಂದು ಅನೇಕ ಆರ್ಥಿಕ ತಜ್ಞರ ಆತಂಕ. ವಿಶ್ವದ ಆರ್ಥಿಕ ವ್ಯವಸ್ಥೆಯ ಮೇಲೆ ಅದು ಬೀರಬಹುದಾದ ಪರಿಣಾಮ ಘೋರವೆಂದು ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆಯ ಆತಂಕ. ಹಾಗಾಗಿ ಅಮೆರಿಕದ ಈ ಬೆಳವಣಿಗೆ ಅನೇಕರಿಗೆ ಆತಂಕಕಾರಿ. ಅನೇಕ ರಾಷ್ಟ್ರಗಳ ಪರಿಸ್ಥಿತಿಗಳನ್ನು ದುರುಪಯೋಗ ಮಾಡಿಕೊಂಡು, ಭಯೋತ್ಪಾದಕರನ್ನು ಉತ್ಪಾದಿಸಿ ವಿಶ್ವವ್ಯಾಪಿ ಆತಂಕವನ್ನು ಸೃಷ್ಟಿಸಿದ ಅಮೆರಿಕ ಬಂಡವಾಳಶಾಹಿ ವ್ಯವಸ್ಥೆ ತಾನೇ ಆತಂಕಕ್ಕೊಳಗಾಗಿರುವುದು ಇತಿಹಾಸದ ವ್ಯಂಗ್ಯ.

**ಒಂದೇ ನಾಣ್ಯದ ಎರಡು ಮುಖಗಳು**

ಅಮೆರಿಕದ ಸರ್ಕಾರವನ್ನು ಆ ದೇಶದ ಎರಡು ಪಕ್ಷಗಳು ಗುತ್ತಿಗೆ ಪಡೆದಿವೆ. ಉಡುಪಿ ಮಠಗಳ ಪರ್ಯಾಯ ವ್ಯವಸ್ಥೆಯಂತೆ ಪರ್ಯಾಯವಾಗಿ ಸರ್ಕಾರ ನಡೆಸುತ್ತಾ ಬಂದಿವೆ. ಒಂದು ರಿಪಬ್ಲಿಕನ್ ಪಕ್ಷ. ಇನ್ನೊಂದು ಡೆಮೊಕ್ರಾಟಿಕ್ ಪಕ್ಷ. ಅಮೆರಿಕದ ಪ್ರತಿಷ್ಠೆಯ ಪ್ರಶ್ನೆ, ಆರ್ಥಿಕ ವ್ಯವಸ್ಥೆ, ವಿದೇಶಾಂಗ ನೀತಿ, ಯುದ್ಧ ನೀತಿ, ತೈಲದಾಹ ಇತ್ಯಾದಿ ವಿಚಾರಗಳಲ್ಲಿ ಈ ಎರಡೂ ಪಕ್ಷಗಳಲ್ಲಿ ಹೆಚ್ಚಿನ ಭಿನ್ನಾಭಿಪ್ರಾಯಗಳಿಲ್ಲ, ರಿಪಬ್ಲಿಕನ್ ಪಕ್ಷದ ಹಿಂದಿನ ಅಧ್ಯಕ್ಷ ಜಾರ್ಜ್ ಬುಷ್ ಇರಾಕ್ ದೇಶ ಸಾಮೂಹಿಕ ವಿನಾಶಕಾರಿ ಅಸ್ತ್ರಗಳನ್ನು ಹೊಂದಿದೆಯೆಂದು ಜಗತ್ತಿಗೆ ಸುಳ್ಳು ಹೇಳಿ ಆಕ್ರಮಣ ಮಾಡಿದ್ದು, ಡೆಮೊಕ್ರಟಿಕ್ ಪಕ್ಷದ ಇಂದಿನ ಅಧ್ಯಕ್ಷ ಬರಾಕ್ ಒಬಾಮ ಸಿರಿಯ ದೇಶ ರಾಸಾಯನಿಕ ಅಸ್ತ್ರಗಳನ್ನು ಹೊಂದಿದೆಯೆಂದು ಆಪಾದಿಸಿ ಆಕ್ರಮಣಕ್ಕೆ ಸಜ್ಜಾದದ್ದನ್ನು ಗಮನಿಸಿದಲ್ಲಿ ಈ ಎರಡೂ ಪಕ್ಷಗಳು ಒಂದೇ ನಾಣ್ಯದ ಎರಡು ಮುಖಗಳೆಂದು ಅರಿವಾಗುತ್ತದೆ. ಅಲ್ಪ ಸ್ವಲ್ಪ ವ್ಯತ್ಯಾಸಗಳೇನಾದರೂ ಕಂಡುಬಂದಲ್ಲಿ ಅದು ಅಸಹನೀಯವಾಗಿಬಿಡುತ್ತದೆ.

**ಆರೋಗ್ಯ ವ್ಯವಸ್ಥೆಯ ಅನಾರೋಗ್ಯ**

ಅಮೆರಿಕದ ಆರೋಗ್ಯ ವ್ಯವಸ್ಥೆ ಅಲ್ಲಿಯ ಖಾಸಗಿ ವಿಮಾ ಕಂಪನಿಗಳ ಕಪಿಮುಷ್ಟಿಯಲ್ಲಿದ್ದು, ಯಾರಿಗೆ, ಯಾವಾಗ, ಯಾವ ರೋಗಕ್ಕೆ, ಎಲ್ಲಿಯವರೆಗೆ, ಎಷ್ಟರ ಮಟ್ಟಿಗೆ ವಿಮಾ ರಕ್ಷಣೆ ಕೊಡಬಹುದೆಂಬುದನ್ನು ಈ ಕಂಪನಿಗಳೇ ನಿರ್ಧರಿಸುತ್ತವೆ. ವಿಮಾ ರಕ್ಷಣೆ ಪಡೆದ ಪಾಲಿಸಿದಾರರನ್ನು ಯಾವ ಕಾರಣವನ್ನೂ ನೀಡದೆ ಹೊರಹಾಕುವ ಏಕಪಕ್ಷೀಯ ಅಧಿಕಾರವನ್ನು ತಾವೇ ಸೃಷ್ಟಿಸಿಕೊಂಡಿವೆ. ಖಾಸಗಿ ವಿಮಾ ಕಂಪನಿಗಳು, ಖಾಸಗಿ ಆಸ್ಪತ್ರೆಗಳು ಮತ್ತು ಖಾಸಗಿ ಔಷಧಿ ಕಂಪನಿಗಳ ದುಷ್ಕೂಟದ ಆಕ್ಟೋಪಸ್ ಹಿಡಿತದಿಂದ ನರಳುತ್ತಿರುವ ಅಮೆರಿಕನ್ನರ ಸಂಖ್ಯೆ ಅಪಾರ. ಅನಾರೋಗ್ಯದಿಂದ ನರಳುತ್ತಿರುವ ಆರೋಗ್ಯ ವ್ಯವಸ್ಥೆಗೆ ಸುಧಾರಣೆ ತರುವ ಬಗ್ಗೆ ಮಾತನಾಡಿ ಹೋದ ಅಮೆರಿಕದ ಅಧ್ಯಕ್ಷರೆಷ್ಟೋ. ಸುಧಾರಣೆಯೆಂದರೆ ಖಾಸಗಿ ವ್ಯವಹಾರದಲ್ಲಿ ಸರ್ಕಾರದ ಮಧ್ಯಪ್ರವೇಶ. ಬಂಡವಾಳಶಾಹಿ ವ್ಯವಸ್ಥೆಯ ಮುಕ್ತ ಮಾರುಕಟ್ಟೆ ಇತ್ಯಾದಿ ಆರ್ಥಿಕ ನೀತಿಗಳ ಆದ್ಯಪ್ರವರ್ತಕ ಅಮೆರಿಕದಲ್ಲಿ ಖಾಸಗಿ ಕ್ಷೇತ್ರಗಳ ವ್ಯವಹಾರದಲ್ಲಿ ಸರ್ಕಾರ ಮೂಗು ತೂರಿಸುವುದೆಂದರೆ ಅದು ಅಮೆರಿಕ ಪಾಲಿಸಿಕೊಂಡು ಬಂದಿರುವ ಅನಿರ್ಬಂಧತೆಯ ನೀತಿಗೇ ಸವಾಲೆಂದು





ನಂಬಿರುವ ರಾಜಕೀಯ ಧುರೀಣರು ಸರ್ಕಾರ ಸ್ವಲ್ಪಮಟ್ಟಿನ ಸುಧಾರಣೆ ತರಲು ಹೊರಟಲ್ಲಿ ಸುಮ್ಮನಿರುತ್ತಾರೆಯೆ ? ಬರಾಕ್ ಒಬಾಮನ ಮುಂದಿರುವ ಸಮಸ್ಯೆ ಇದೇ.

**ಸುಧಾರಣೆಗೆ ಸವಾಲು**

ಬರಾಕ್ ಒಬಾಮ ಫೆಬ್ರವರಿ ೨೦೦೯ರಲ್ಲಿ ಅಮೆರಿಕದ ಅಧ್ಯಕ್ಷನಾಗಿ ಅಧಿಕಾರವಹಿಸಿಕೊಂಡ ನಂತರ ಆರೋಗ್ಯ ವ್ಯವಸ್ಥೆಯ ಸುಧಾರಣೆಯ ಬಗ್ಗೆ ತನ್ನ ಆಲೋಚನೆಗಳನ್ನು ಮುಂದಿಟ್ಟ. ಅವು ಆಮೂಲಾಗ್ರ ಸುಧಾರಣೆಗಳೇನೂ ಆಗಿರಲಿಲ್ಲ. ವಿಮಾ ಪಾಲಿಸಿಕೊಳ್ಳಲಾಗದ ಜನರಿಗೆ ಸರ್ಕಾರದ ಧನಸಹಾಯ, ಔಷಧ ಬೆಲೆಗಳಲ್ಲಿ ಸ್ವಲ್ಪಮಟ್ಟಿಗೆ ರಿಯಾಯಿತಿ, ವಿಮಾ ಕಂಪನಿಗಳ ಮೇಲೆ ಕೆಲವು ಷರತ್ತುಗಳು ಇವೇ ಒಬಾಮ ಪ್ರಸ್ತಾಪಿಸಿದ ಪ್ರಮುಖ ಅಂಶಗಳು. ಚುನಾವಣೆಯಲ್ಲಿ ಸೋತಿದ್ದ ರಿಪಬ್ಲಿಕನ್ ಪಕ್ಷ ಮತ್ತು ಅದರ ಬಲಪಂಥೀಯ ಬಾಯಿ ಬಡುಕ ಟೀ ಪಾರ್ಟಿ ಜನರಿಗೆ ಇಷ್ಟೇ ಸಾಕಿತ್ತು. ಬರಾಕ್ ಒಬಾಮ ಅಮೆರಿಕದ ಜನತೆಯ ನಂಬಿಕೆಯನ್ನೇ ಬುಡಮೇಲು ಮಾಡುತ್ತಿದ್ದಾನೆಂದೂ, ಅಮೆರಿಕದ ಪ್ರತಿಷ್ಠೆಗೇ ಧಕ್ಕೆ ತರುತ್ತಿದ್ದಾನೆಂದೂ ಅವನೊಬ್ಬ ಸಮಾಜವಾದಿಯೆಂದೂ ಅಮೆರಿಕವನ್ನು ಸಮಾಜವಾದಿ ರಾಷ್ಟ್ರವನ್ನಾಗಿ ಪರಿವರ್ತಿಸಲು ಹೊಂಚು ಹಾಕಿರುವನೆಂದೂ ಅವ್ಯಾಹತ ವಾಗ್ದಾಳಿ ನಡೆಸಿತು. ಸುಧಾರಣೆಯ ಬಗ್ಗೆ ಕಾನೂನು ಮಾಡಲು ಬಿಡುವುದಿಲ್ಲವೆಂದು ಘೋಷಿಸಿದರು.

**ಕೃಶಗೊಂಡ ಸುಧಾರಣೆ**

೨೦೦೯ರಲ್ಲಿ ಒಬಾಮನ ಪಕ್ಷ ಸಿದ್ಧಪಡಿಸಿದ್ದ ರೋಗಿಗಳ ರಕ್ಷಣೆ ಮತ್ತು ಆರೋಗ್ಯ ಪಾಲನೆಯ ಮಸೂದೆ ಅಮೆರಿಕದ ಸೆನೆಟ್ ಮತ್ತು ಹೌಸ್ ಆಫ್ ರೆಪ್ರಸೆಂಟೇಟೀವ್ಸ್ ನ ಕೈಗೆ ಸಿಕ್ಕಿ, ತತ್ತರಿಸಿ, ಮುಗ್ಗರಿಸಿ, ಕೃಶವಾಗಿ ೨೦೧೦ರಲ್ಲಿ ಕಾನೂನಾಗಿ ಹೊರಬಂದದ್ದೂ ಕೂಡ ಅಮೆರಿಕದ ಚರಿತ್ರೆಯ ವಿಶೇಷ ಘಟನೆಯೆಂದೇ ಹೇಳಬಹುದು. ಇದು ಅಮೆರಿಕದ ಸುಮಾರು ೧೫% ಪ್ರಜೆಗಳಿಗೆ ಅನ್ವಯವಾಗುವಂತಹದ್ದು, ಇವರು ಕೊಳ್ಳುವ ವಿಮಾ ಪಾಲಿಸಿಗೆ ಸರ್ಕಾರ ಸ್ವಲ್ಪಮಟ್ಟಿನ ಧನ ಸಹಾಯ ನೀಡುವಂತಹದ್ದು, ವಿಮಾ ಕಂಪನಿಗಳು ರೋಗಗ್ರಸ್ತರಿಗೂ ವಿಮಾ ರಕ್ಷಣೆ ನೀಡಬೇಕು ಮತ್ತು ಪೋಷಕರು ತಮ್ಮ ಮಕ್ಕಳು ೨೬ ವರ್ಷ ತಲುಪುವವರೆಗೂ ಅವರನ್ನು ವಿಮಾ ಪಾಲಿಸಿಯಲ್ಲಿ ಸೇರಿಸಿಕೊಳ್ಳುವಂತಹದ್ದು ಈ ಕಾನೂನಿನ ಪ್ರಮುಖ ಅಂಶಗಳು. ಇದೇನೂ ಕ್ರಾಂತಿಕಾರಕ ಸುಧಾರಣೆಯಲ್ಲವೆಂಬುದು ಸ್ಪಷ್ಟ. ಇದೇ ವಿಶ್ವವನ್ನೇ ಬೆರಗುಗೊಳಿಸುವಂತಹ ಆರೋಗ್ಯ ವ್ಯವಸ್ಥೆಯನ್ನು ಲೀಲಾಜಾಲವಾಗಿ ಮತ್ತು ಸಮರ್ಪಕವಾಗಿ ಜಾರಿಗೊಳಿಸಿದ ಮತ್ತು ಈ ಮಾದರಿಯನ್ನು ಬೇರೆ ದೇಶಗಳಿಗೆ ರವಾನಿಸುತ್ತಿರುವ ಕ್ಯೂಬ ದೇಶಕ್ಕೆ ಶ್ರೀಮಂತ ರಾಷ್ಟ್ರವೆನಿಸಿಕೊಂಡ ಅಮೆರಿಕ ಸರ್ಕಾರ ತನ್ನ ಪ್ರಜೆಗಳಿಗೆ ಆರೋಗ್ಯ ರಕ್ಷಣೆ ನೀಡಲು ಇಷ್ಟೇಕೆ ದೊಂಬರಾಟ ನಡೆಸುತ್ತಿದೆ ಎಂದೆನಿಸಿದ್ದು ಸಹಜವೆ.

**ಕಂಗೆಟ್ಟ ಶ್ರೀ ಸಾಮಾನ್ಯ**

ರಿಪಬ್ಲಿಕನ್ ಪಕ್ಷ ಮತ್ತು ಟೀ ಪಾರ್ಟಿ ಜನರಿಗೆ ಆರೋಗ್ಯ ರಕ್ಷಣೆಯ ಕಾನೂನು ಒಪ್ಪಲಾಗದ ಬೆಳವಣಿಗೆ. ಇದರಿಂದಾಗಿ ಅಮೆರಿಕದ ನಂಬಿಕೆಗೆ ಮತ್ತು ವರ್ಚಸ್ಸಿಗೆ ಧಕ್ಕೆ ಬಂದಿದೆ ಎಂದು ಇವರ ವಾದ. ಇದು ಸರ್ಕಾರದ ವೆಚ್ಚವನ್ನು ಹೆಚ್ಚಿಸುತ್ತದೆ, ದೇಶದ ಸಾಲದ ಹೊರೆಯನ್ನು ಹೆಚ್ಚಿಸುತ್ತದೆ, ಉದ್ಯೋಗಗಳು ನಾಶವಾಗುತ್ತವೆ, ಜನರು ಸರ್ಕಾರ – ಅವಲಂಬಿತರಾಗುತ್ತಾರೆ ಇತ್ಯಾದಿ ಆಕ್ಷೇಪಣೆ ಇವರದ್ದು. ಇವರ ಈ ವಾದವನ್ನು ಅಮೆರಿಕಾದ ಸರ್ವೋಚ್ಚ ನ್ಯಾಯಾಲಯ ಜೂನ್ ೨೦೧೨ರಲ್ಲಿ ತಿರಸ್ಕರಿಸಿ ಆರೋಗ್ಯ ಸುಧಾರಣೆಯ ಕಾನೂನಿನ ಸಿಂಧುತ್ವವನ್ನು ಎತ್ತಿಹಿಡಿದರೂ ೨೦೧೨ರ ಚುನಾವಣೆಯಲ್ಲಿ ಅಮೆರಿಕದ ಪ್ರಜೆಗಳು ಒಬಾಮನನ್ನು ಪುನರಾಯ್ಕೆ ಮಾಡಿದರೂ ರಿಪಬ್ಲಿಕನ್ ಪಕ್ಷ ಮತ್ತು ಟೀಪಾರ್ಟಿಯ ನಿಲುವನ್ನು ಒಪ್ಪಿಕೊಳ್ಳದಿದ್ದರೂ ತಮ್ಮ ಪಟ್ಟುಬಿಡದ ಟೀಪಾರ್ಟಿ ಬೆಂಬಲಿತ ರಿಪಬ್ಲಿಕನ್ ಪಕ್ಷದ ಹಲವಾರು ಶಾಸಕರು ಆರೋಗ್ಯ ರಕ್ಷಣೆಯ ಕಾನೂನಿನ ವಿರುದ್ಧ ತಮ್ಮ ಸಮರ ಮುಂದುವರಿಸಿದ್ದಾರೆ. ಇವರ ಈ ಪ್ರವೃತ್ತಿಯೇ ಇಂದು ಅಮೆರಿಕದ ಶ್ರೀಸಾಮಾನ್ಯರನ್ನು ಕಂಗೆಡಿಸಿರುವುದು.

**ಸಾಲದ ಮಿತಿ ಏರಿಕೆ – ಹೊಸ ಸಂಕಟ**

ಅಮೆರಿಕಾದಲ್ಲಿ ೧೯೧೭ರಿಂದ ಒಂದು ನಿಯಮ ಜಾರಿಯಲ್ಲಿದೆ. ಈ ನಿಯಮದ ಪ್ರಕಾರ ಅಮೆರಿಕ ಸರ್ಕಾರ ಪ್ರತಿ ವರ್ಷ ದೇಶದ ಸಾಲದ ಪರಿಮಿತಿಯನ್ನು ಶಾಸಕಾಂಗದ ಒಪ್ಪಿಗೆ ಪಡೆದು ನಿರ್ಧರಿಸಿಕೊಳ್ಳಬೇಕು. ಈ ಪರಿಮಿತಿ ಪ್ರತಿವರ್ಷವೂ ಹೆಚ್ಚುತ್ತಾ ಹೋಗುವುದು ಮತ್ತು ಅದನ್ನು ಶಾಸಕಾಂಗ ಹೆಚ್ಚು ವಿವಾದವಿಲ್ಲದೆ ನಿರ್ಧರಿಸುವುದು ನಡೆದು ಬಂದಿರುವ ವಾಡಿಕೆ. ೧೯೬೨ರಿಂದ ೨೦೧೨ರ ವರೆಗೆ ೭೭ ಬಾರಿ ಸಾಲದ ಪರಿಮಿತಿಯನ್ನು ಶಾಸಕಾಂಗ ನಿರ್ಧರಿಸಿದೆ. ಈಗ ಸಾಲದ ಪರಿಮಿತಿ ೧೬.೭ ಟ್ರಿಲಿಯನ್ ಡಾಲರ್ಸ್ ತಲುಪಿದೆ. ಈ ಪರಿಮಿತಿಯನ್ನು ಹೆಚ್ಚಿಸಬೇಕೆಂಬ ಸರ್ಕಾರದ ಪ್ರಸ್ತಾಪವನ್ನು ಡೆಮೊಕ್ರಟಿಕ್ ಪಕ್ಷ ಬಹುಮತದಲ್ಲಿರುವ ಸೆನೆಟ್‌ನಲ್ಲಿ ಒಪ್ಪಿಕೊಂಡಿದ್ದರೂ ರಿಪಬ್ಲಿಕನ್ ಪಕ್ಷ ಬಹುಮತದಲ್ಲಿರುವ ಹೌಸ್ ಆಫ್ ರೆಪ್ರಸೆಂಟೇಟೀವ್ಸ್‌ನಲ್ಲಿ ತಿರಸ್ಕರಿಸಲ್ಪಟ್ಟ ಕಾರಣ, ಅಕ್ಟೋಬರ್ ೧ರಿಂದ ಸರ್ಕಾರದ ದಿನನಿತ್ಯದ ವೆಚ್ಚ ಭರಿಸಲು ಖಜಾನೆಯಲ್ಲಿ ಹಣವಿಲ್ಲದೆ ಸರ್ಕಾರದ ಅನೇಕ ವಿಭಾಗಗಳು ಮುಚ್ಚಿ ನೌಕರರು ಕಡ್ಡಾಯ ರಜೆ ಹೋಗಬೇಕಾಗಿ ಬಂದದ್ದು ಅಮೆರಿಕದ ದಯನೀಯ ಪರಿಸ್ಥಿತಿಯ ಚಿತ್ರಣ. ಟೀ ಪಾರ್ಟಿಯ ಹೊಟ್ಟೆ ತುಂಬಿದ ಜನ ಇದರಿಂದ ಖುಷಿಪಟ್ಟರೂ ರಿಪಬ್ಲಿಕನ್ ಪಕ್ಷದ ಶಾಸಕರ ಜನಪ್ರಿಯತೆ ಇಳಿಮುಖವಾಗುತ್ತಿರುವುದು ಇವರನ್ನು ಗಾಬರಿಗೊಳಿಸಿದೆ. ಅಕ್ಟೋಬರ್ ೧೭ರೊಳಗೆ ಸಾಲದ ಪರಿಮಿತಿಯನ್ನು ಪರಿಷ್ಕರಿಸದಿದ್ದಲ್ಲಿ, ಸಾಲವನ್ನು ಹಿಂದಿರುಗಿಸಲಾಗದಿದ್ದಲ್ಲಿ, ಸರ್ಕಾರಿ ವೆಚ್ಚಗಳನ್ನು ಭರಿಸಲಾಗದಿದ್ದಲ್ಲಿ ಅಮೆರಿಕದ ಆರ್ಥಿಕ ವ್ಯವಸ್ಥೆ ತೀವ್ರ ಬಿಕ್ಕಟ್ಟನ್ನು ಎದುರಿಸಬೇಕಾಗಿತ್ತು. ರಿಪಬ್ಲಿಕನ್ ಪಕ್ಷದ ಶಾಸಕರು ಆರೋಗ್ಯ ಸುಧಾರಣೆಯ ವೆಚ್ಚವನ್ನು ಕಡಿತಗೊಳಿಸಬೇಕೆಂದೂ ಕಾನೂನಿನ ಜಾರಿಯನ್ನು ಮುಂದೂಡಬೇಕೆಂದು ಹಟ ಹಿಡಿದಿದ್ದರೂ, ಒಬಾಮ ಯಾವ ರಿಯಾಯಿತಿಯನ್ನೂ ಕೊಡುವುದಿಲ್ಲವೆಂದು ಪಟ್ಟು ಹಿಡಿದ ಕಾರಣ ರಾಜಿಯಾಗುವುದು ಅನಿವಾರ್ಯವಾಯಿತು. ರಿಪಬ್ಲಿಕನ್ ಪಕ್ಷಕ್ಕೆ ಸದ್ಯಕ್ಕೆ ಮುಖಭಂಗವಾದಂತೆ ಕಂಡರೂ ರಾಜಿ ಕೇವಲ ನಾಲ್ಕು ತಿಂಗಳ ಅವಧಿಗೆ ಮಾತ್ರ ಸೀಮಿತವಾಗಿರುವುದರಿಂದ ಮತ್ತೆ ಸಂಕಟ ಕಾದಿರುವುದಂತೂ ದಿಟ. ಅಮೆರಿಕ ಸರ್ಕಾರದ ಪ್ರತಿಷ್ಠೆ ಈ ಕಾರಣಗಳಿಂದಾಗಿ ಸಡಿಲಗೊಳ್ಳುತ್ತಿರುವ ಸೂಚನೆಗಳು ಪ್ರಕಟಗೊಳ್ಳುತ್ತಿವೆ. ಅಮೆರಿಕ ಜನತೆಯ ಪರಿಕಲ್ಪನೆಯೂ ಈ ಬೆಳವಣಿಗೆಗಳೊಂದಿಗೆ ಬದಲಾಗುತ್ತಿರಬಹುದು.

**ಅಸಮಾನತೆ – ಪ್ರತಿಭಟನೆ**

ಅಮೆರಿಕದ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಬುನಾದಿಯಲ್ಲಿ ಬಿರುಕು ಉಂಟಾಗಿದೆಯೆ ಎಂಬುದನ್ನು ಇತಿಹಾಸ ಉತ್ತರಿಸುತ್ತದೆ. ವಿಶ್ವ ಬ್ಯಾಂಕ್ ಆರ್ಥಿಕ ತಜ್ಞ ಬ್ರಾಂಕೊ ಮಿಲನೊವಿಚ್‌ನ ಪ್ರಕಾರ ಅಮೆರಿಕದಲ್ಲಿ ಮೇಲಿನ ಸ್ತರದ ೧% ಶ್ರೀಮಂತರು ದೇಶದ ೨೨% ಆದಾಯವನ್ನು ತಮ್ಮದಾಗಿಸಿಕೊಂಡಿದ್ದಾರೆ. ಮೇಲಿನ ಸ್ತರದ ೦.೧% ಭಾರಿ ಶ್ರೀಮಂತರು ದೇಶದ ೧೧% ಆದಾಯವನ್ನು ತಮ್ಮದಾಗಿಸಿಕೊಂಡಿದ್ದಾರೆ. ೨೦೦೯ರ ನಂತರ ೧% ಶ್ರೀಮಂತರು ಒಟ್ಟು ಆದಾಯದ ೯೫% ಕಬಳಿಸಿದ್ದಾರೆ. ಗಮನಾರ್ಹ ಅಂಶವೆಂದರೆ ಅಮೆರಿಕದ ಜನತೆಯಲ್ಲಿ ಬೆಳೆಯುತ್ತಿರುವ ಅನ್ಯಾಯ ಮತ್ತು ಅಸಮಾನತೆಯ ಬಗ್ಗೆ ಅರಿವು ಮೂಡಿ, ಪ್ರತಿಭಟಿಸುವ ಹಂತಕ್ಕೇರಿದ್ದಾರೆ. "ವಾಲ್‌ಸ್ಟ್ರೀಟ್ ಆಕ್ರಮಿಸು" ಕೇವಲ ಸಾಂಕೇತಿಕ ಪ್ರತಿಭಟನೆಯಲ್ಲ. ಬದಲಾವಣೆ ಬಯಸಿ ಹೋರಾಟಕ್ಕೆ ಸಜ್ಜಾಗುತ್ತಿರುವ ಅಮೆರಿಕದ ಜನಸಾಮಾನ್ಯರ ಮನಸ್ಥಿತಿಯ ಅಭಿವ್ಯಕ್ತಿ.

**ಮುರಳೀಧರ ಚಿಕ್ಕಮಗಳೂರು**
೧೯೩, (ಹೊಸ ನಂ. ೨೩) ೧೧ನೇ 'ಸಿ' ಮೈನ್,
ಜಯನಗರ 'ಟಿ' ಬ್ಲಾಕ್, ಬೆಂಗಳೂರು–೫೬೦೦೧೧

ಕೆ. ಎಸ್. ನವೀನ್

# ನೇತ್ರಾವತಿ ನದಿ ತಿರುಗಣೆ ಯೋಜನೆ – ಒಂದು ಒಳನೋಟ

ಪ್ರತಿ ವರ್ಷದ ನವೆಂಬರ್ ೧ ಕನ್ನಡಿಗರಿಗೆ ಮಹತ್ವದ ದಿನ. ಹಾಗೆಯೇ ಇದು ವಿಶ್ವ ಜೀವಿಪರಿಸ್ಥಿತಿ ದಿನ ಸಹ (ವರ್ಲ್ಡ್ ಇಕಾಲಜಿ ಡೇ). ಈ ದಿನ ನಮ್ಮ ಭೂಮಿಯ ಜೀವಿಪರಿಸ್ಥಿತಿ (ಇಕಾಲಜಿ) ಏನಾಗುತ್ತಿದೆ ಎಂದು ತಿರುಗಿ ನೋಡಬೇಕಾದ ದಿನ.

ಭಾರತ ಒಂದು ಶ್ರೀಮಂತ ಜೀವಿವೈವಿಧ್ಯ ಕೇಂದ್ರ. ಜಗತ್ತಿನ ಹತ್ತು ಶ್ರೀಮಂತ ಜೀವಿವೈವಿಧ್ಯ ರಾಷ್ಟ್ರಗಳಲ್ಲಿ ಭಾರತವೂ ಒಂದೆಂದು ಪರಿಗಣಿಸಲ್ಪಟ್ಟಿದೆ. ಜಗತ್ತಿನಲ್ಲಿ ಕಂಡುಬರುವ ಪ್ರಾಣಿಗಳಲ್ಲಿ ಶೇ. ೬.೫ ಹಾಗೂ ಸಸ್ಯಗಳಲ್ಲಿ ಶೇ. ೭ ಭಾರತದಲ್ಲಿಯೇ ಕಂಡುಬರುತ್ತವೆ ಎಂದರೆ ನಮಗೆ ಹೆಮ್ಮೆಯ ಜೊತೆಗೆ ಇದರ ಸಂರಕ್ಷಣೆಯ ಜವಾಬ್ದಾರಿ ಭಾವವೂ ಮೂಡಬೇಕು. ಒಟ್ಟಾರೆಯಾಗಿ ಭಾರತದಲ್ಲಿ ೩೫೦ ಪ್ರಭೇದದ ಸ್ತನಿಗಳು, ೧,೨೨೫ ಪ್ರಭೇದದ ಹಕ್ಕಿಗಳು, ೬೧೪ ಪ್ರಭೇದದ ಉಭಯವಾಸಿಗಳು ಹಾಗೂ ಸರಿಸೃಪಗಳು ಕಂಡುಬರುತ್ತವೆ. ಆದರೆ, ಇದರಲ್ಲಿ ೧೭೩ ಪ್ರಭೇದದ ಸ್ತನಿಗಳು, ೭೮ ಪ್ರಭೇದದ ಹಕ್ಕಿಗಳು ಹಾಗೂ ೧೫ ಪ್ರಭೇದದ ಸರಿಸೃಪಗಳು ಗಂಡಾಂತರದಂಚಿನಲ್ಲಿವೆ ಎಂದು ಗುರುತಿಸಲಾಗಿದೆ. ಇಂದು ನಾವು ಸಂರಕ್ಷಣೆಗೆ ವಿಜ್ಞಾನದ ಬೆನ್ನೆಲುಬನ್ನು ಕೊಡುವ ಕಾರ್ಯ ಮಾಡಬೇಕಾಗಿದೆ.

ಜಗತ್ತಿನ ಇಪ್ಪತ್ತೈದು ಜೀವಿವೈವಿಧ್ಯ ಕೇಂದ್ರಗಳಲ್ಲಿ ಪಶ್ಚಿಮಘಟ್ಟಗಳು ಅತಿಮುಖ್ಯವಾದವು. ಇದರ ಮಹತ್ವದ ಬಗ್ಗೆ ಹೇಳಬೇಕಾದ ಅಗತ್ಯವೇ ಇಲ್ಲ. ನಾವು ಬಳಸುತ್ತಿರುವ ಎಲ್ಲ ನೀರು ಈ ಪ್ರದೇಶದಿಂದ ಬರುತ್ತಿರುವುದೇ ಆಗಿದೆ. ಇವುಗಳ ಸಂರಕ್ಷಣೆಗಿರುವ ಅತಿದೊಡ್ಡ ಕುತ್ತು ಎಂದರೆ ಅರಣ್ಯ ಛಿದ್ರೀಕರಣ (ಫಾರೆಸ್ಟ್ ಫ್ರ್ಯಾಗ್ಮೆಂಟೇಷನ್). ಅಂದರೆ, ಅನೇಕ ಯೋಜನೆಗಳು, ಗಣಿಗಾರಿಕೆ, ಒತ್ತುವರಿ ಇತ್ಯಾದಿಗಳಿಂದಾಗಿ ವಿಶಾಲವಾದ ಅರಣ್ಯಭಾಗ ಸಣ್ಣ ಸಣ್ಣ ದ್ವೀಪಗಳಂತಾಗುವುದು. ಇದರಿಂದಾಗಿ ಅರಣ್ಯ ನಿಧಾನ ಗತಿಯ ಸಾವಿಗೆ ಈಡಾಗುವುದಲ್ಲದೆ, ವನ್ಯಜೀವಿಗಳ ವ್ಯಾಪನೆ, ಆಹಾರ ಅರಸುವ ಸ್ಥಳ ಮತ್ತು ಸಂತಾನೋತ್ಪತ್ತಿಗೆ ಸಹ ಅತೀವ ತೊಂದರೆಯಾಗುತ್ತದೆ. ಇಂದು ದಿನನಿತ್ಯದ ಮಾತಾಗಿರುವ ಹುಲಿ, ಆನೆ ಮತ್ತು ಚಿರತೆಗಳು ಕಾಡಂಚಿನ ಹಳ್ಳಿ / ನಗರಗಳಲ್ಲಿ ಕಂಡುಬರುತ್ತಿರುವುದಕ್ಕೆ ಮುಖ್ಯ ಕಾರಣವೂ ಈ ಛಿದ್ರೀಕರಣವೇ. ನಮ್ಮ ನೀರಿನ ಮೂಲಕ್ಕೇ ವಜ್ರಾಘಾತ ವಾಗುವಂತಹ ಅನೇಕ ಅವೈಜ್ಞಾನಿಕ ಯೋಜನೆಗಳನ್ನು ನಾವು ಹಾಕಿಕೊಳ್ಳುತ್ತಿದ್ದೇವೆ.

ವಿಶ್ವ ಜೀವಿಪರಿಸ್ಥಿತಿ ದಿನದ ನೆಪದಲ್ಲಿ, ಪಶ್ಚಿಮಘಟ್ಟಗಳಿಗೆ, ಅದರಲ್ಲೂ ನಮ್ಮ ಕರಾವಳಿ ಜನರ ಜೀವನಕ್ಕೆ ವಜ್ರಾಘಾತ ನೀಡುವ "ನೇತ್ರಾವತಿ ನದಿ ತಿರುಗಣೆ" ಪರಿಯೋಜನೆಯನ್ನು ವಿಶ್ಲೇಷಿಸೋಣ.

ಏನಿದು ನೇತ್ರಾವತಿ ನದಿ ತಿರುಗಣೆ ಪರಿಯೋಜನೆ ?

ದಕ್ಷಿಣ ಕನ್ನಡದ ಜೀವನಾಧಾರವಾದ ನೇತ್ರಾವತಿ ನದಿಯ ಹರಿವನ್ನು ತಡೆದು ತಿರುಗಿಸಿ ಉತ್ತರದ ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆಗಳಿಗೆ ನೀರು ಪೂರೈಸುವ ಯೋಜನೆಯೇ ನೇತ್ರಾವತಿ ನದಿ ತಿರುಗಣೆ ಯೋಜನೆ. ಮೇಲ್ನೋಟಕ್ಕೆ ಇದು ಯಾಕಾಗಬಾರದು ಎಂದೆನಿಸದಿರದು. ಆದರೆ, ವೈಜ್ಞಾನಿಕವಾಗಿ ಅವಲೋಕಿಸಿದಾಗ ಇದೊಂದು, ಕೂತ ಕೊಂಬೆಯನ್ನು ಕತ್ತರಿಸುವ, ಚಿನ್ನದ ಮೊಟ್ಟೆಯಿಡುವ ಕೋಳಿಯ ಹೊಟ್ಟೆ ಕುಯ್ಯುವ ಕಾರ್ಯವೆಂಬುದು ಮನದಟ್ಟಾಗುತ್ತದೆ. ಇಲ್ಲಿ ನಾವು ಬಹಳ ಮುಖ್ಯವಾಗಿ ಗಮನಿಸಬೇಕಾಗಿರುವ ಅಂಶವೆಂದರೆ, ಅಣೆಕಟ್ಟುಗಳನ್ನು ಕಟ್ಟುವ ಕಾರ್ಯವನ್ನು ಕೇವಲ ಸಿವಿಲ್ ಎಂಜಿನಿಯರಿಂಗ್ ದೃಷ್ಟಿಯಿಂದ ಮಾತ್ರ ನೋಡಲಾಗುತ್ತದೆ. ಇಂದು ಪರಿಸರ, ವನ್ಯಜೀವಿ ವಿಜ್ಞಾನ ಅಗಾಧವಾಗಿ ಬೆಳೆದಿದ್ದು, ಅವುಗಳ ಬೆಳಕಿನಲ್ಲಿ ಈ ಪರಿಯೋಜನೆಗಳನ್ನು ನೋಡುವ ಪರಿಪಾಠ ಮೊದಲಾಗಬೇಕಿದೆ. ಎಷ್ಟೋ ಮುಂದುವರಿದ ರಾಷ್ಟ್ರಗಳಲ್ಲಿ, ಅಣೆಕಟ್ಟು ಕಟ್ಟುವುದು ಸಮಸ್ಯೆಗೆ ಪರಿಹಾರ ಎಂದು ಭಾವಿಸುತ್ತಿಲ್ಲ, ಆದರೆ, ಐಟಿ, ಬಿಟಿ, ರಾಕೆಟ್ ತಂತ್ರಜ್ಞಾನದ ಮುಂಚೂಣಿಯಲ್ಲಿರುವ ರಾಜ್ಯದಲ್ಲಿ ಇಂತಹ ಅವೈಜ್ಞಾನಿಕ ಯೋಜನೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಇದೊಂದು ವೈಜ್ಞಾನಿಕ ದುರಂತ. ಇದಕ್ಕೆ ಕೊನೆಯೆಂದು ?

ಪಶ್ಚಿಮಘಟ್ಟದಲ್ಲಿ ಹುಟ್ಟಿ, ಹರಿಯುತ್ತಿರುವ ನದಿಯನ್ನು ಅಡ್ಡಗಟ್ಟಿ ಉತ್ತರಕ್ಕೆ ನೀರು ಹರಿಸುವುದು – ಈ ವಾಕ್ಯವನ್ನು ಬರೆಯಲು, ಓದಲು ಚೆನ್ನವಷ್ಟೆ! ಇದನ್ನು ಆಗುಮಾಡಿಸಲು ಏನೆಲ್ಲಾ ಮಾಡಬೇಕಾಗುತ್ತದೆ ಎಂಬುದರ ಬಗ್ಗೆ ಒಮ್ಮೆ ಯೋಚಿಸಿ ನೋಡಿ. ಸೂಕ್ಷ್ಮ ಪರಿಸರದ ಪಶ್ಚಿಮಘಟ್ಟದಲ್ಲಿ ನದಿಯನ್ನು ತಡೆದು ನಿಲ್ಲಿಸಿ, ಅದಕ್ಕೆ ಅಣೆಕಟ್ಟು ಕಟ್ಟಬೇಕು. ಇದಕ್ಕಾಗಿ ವರ್ಷಗಟ್ಟಲೆ ಕಾಮಗಾರಿ ನಡೆಯಬೇಕು. ಆ ಕಾಮಗಾರಿ ನಡೆಸುವ ಪಾಪದ ಕಾರ್ಮಿಕರ ಜೀವನ ಇದೇ ಕಾಡಿನಲ್ಲಿ "ಸುಗಮ"ವಾಗಿ ಸಾಗಬೇಕು. ಇದು ನಮ್ಮ ಹಿಂದಿನ ಮುಖ್ಯಮಂತ್ರಿಯೊಬ್ಬರು ಹೇಳುವಂತೆ "ಒಂದೂ ಮರ ಕಡಿಯದಂತೆ" ನಡೆಸಲು ಸಾಧ್ಯವೆ ? ಇಲ್ಲಿ ಇದಕ್ಕಾಗಿ ಅಗಾಧ ಪ್ರಮಾಣದಲ್ಲಿ ಕಾಡನ್ನು ನಾಶಮಾಡಬೇಕಾಗುತ್ತದೆ. ಪಶ್ಚಿಮಘಟ್ಟದ ಆ ಭಾಗವೇ ಶಿಥಿಲವಾಗುತ್ತದೆ. ಇದು ಕರಾವಳಿ ಜನರ ಜೀವನಾಧಾರವಾದ




*ಮಂಗಳೂರಿನಿಂದ ಸಕಲೇಶಪುರ – ಅರಣ್ಯ ಸಂಪತ್ತು ಹಾಗೂ ಅಣೆಕಟ್ಟಿನ ಸ್ಥಳಗಳನ್ನು ಗಮನಿಸಿ (ಸಂಖ್ಯೆಗಳೆಲ್ಲವೂ ಕಟ್ಟೆಗಳನ್ನು ಸೂಚಿಸುತ್ತವೆ).*

ನೇತ್ರಾವತಿ ನದಿಯ ಅವಸಾನಕ್ಕೆ ನಾಂದಿಯಾಗುತ್ತದೆ ಎಂಬುದು ವೈಜ್ಞಾನಿಕವಾಗಿ ಸಿದ್ಧವಾಗಿದೆ.

ಇದರೊಟ್ಟಿಗೆ ನಾವು ಅತಿಮುಖ್ಯವಾಗಿ ನೋಡಬೇಕಾಗಿರುವ ಇನ್ನೊಂದು ಸಂಗತಿ ಭ್ರಷ್ಟಾಚಾರ. ಬೆಂಗಳೂರು ಹಾಗೂ ಇತರ ನಗರಗಳಲ್ಲಿನ ಕೆರೆಗಳನ್ನು ಭೂಗಳ್ಳರು, ಮಾಫಿಯಾಗಳು ಕಬಳಿಸಿ, ಒತ್ತುವರಿ ಮಾಡಿ ಮುಗಿಸಿದ್ದಾಯಿತು. ಇನ್ನು ಈ ನೇತ್ರಾವತಿ ನದಿ ಯೋಜನೆಯ "ಫಲಾನುಭವಿ" ಜಿಲ್ಲೆಗಳಾದ ಕೋಲಾರ ಮತ್ತು ಚಿಕ್ಕಬಳ್ಳಾಪುರದ ಹಳೆಯ ಗೆಜೆಟ್ ತೆಗೆದು ನೋಡಿದರೆ ಅಲ್ಲಿರುವ ಕೆರೆಗಳು ಏನಾದವು ಎಂಬ ಪ್ರಶ್ನೆ ಮೂಡುತ್ತದೆ. ಅವನ್ನೆಲ್ಲ ಕಬಳಿಸಿದ ನಮಗೆ ಈಗ ಕಾವೇರಿ, ಹೇಮಾವತಿ, ಕೃಷ್ಣ (ಎಡ ಮತ್ತು ಬಲದಂಡೆ ಯೋಜನೆಗಳು), ತುಂಗಭದ್ರ ಮತ್ತು ನೇತ್ರಾವತಿ ನದಿಯ ನೀರು ಬೇಕು ! ಇದೇ ರೀತಿ ಪ್ರತಿಯೊಂದು ಜಿಲ್ಲೆಯಲ್ಲಿನ ಸ್ಥಳೀಯ ಜಲಮೂಲಗಳನ್ನು ನಾಶಪಡಿಸಿ/ನುಂಗಿದ ನಂತರ, ಯಾವ ಯಾವ ಜಿಲ್ಲೆ, ತಾಲ್ಲೂಕು ಹಳ್ಳಿಗಳಿಗೆ ಯಾವ ಯಾವ ನದಿಯ ನೀರನ್ನು ಹೇಗೆ ತರುವುದು ?

**ಸರ್ಕಾರದ ಕುಟಿಲ ತಂತ್ರಗಳು**

ಈ ಪರಿಯೋಜನೆಯ ಅಪಾಯವನ್ನು ಕೂಡಲೆ ಮನಗಂಡ ಕರಾವಳಿಯ ಜನರು ದೊಡ್ಡ ಹೋರಾಟವನ್ನೇ ಆರಂಭಿಸಿದರು. ಇದನ್ನು ವೈಜ್ಞಾನಿಕವಾಗಿ ಅರ್ಥೈಸಿ ಪರಿಹಾರಗಳನ್ನು ಹುಡುಕುವುದು ತನ್ನ ಕರ್ತವ್ಯ ಎಂಬುದನ್ನೇ ಮರೆತ ಹೊಣೆಗೇಡಿ ಸರ್ಕಾರ ಜನರ ಕಣ್ಣಿಗೆ ಮಣ್ಣೆರೆಚುವ ಕಾರ್ಯತಂತ್ರಗಳನ್ನು ಅನುಸರಿಸತೊಡಗಿದೆ.

ಮೊಟ್ಟಮೊದಲಿಗೆ, 'ನೇತ್ರಾವತಿ ನದಿ ತಿರುಗಣೆ ಯೋಜನೆ' ಎಂಬ ಹೆಸರನ್ನೇ ಬದಲಿಸಿ, 'ಎತ್ತಿನಹೊಳೆ ಯೋಜನೆ' ಎಂಬ ಹೊಸ ಹೆಸರು ನೀಡಿತು ! ಎತ್ತಿನ ಹೊಳೆ ನೇತ್ರಾವತಿ ನದಿಯ ಮುಖ್ಯ ಉಪನದಿಯಾಗಿದ್ದು, ಇದೇ ಸ್ಥಳದಲ್ಲಿ ಯೋಜನೆಯ ಮೊದಲ ಭಾಗ ಆರಂಭವಾಗಲಿದೆ. ಜನರಿಗೆ ಎತ್ತಿನಹೊಳೆ ಹೆಸರು ಅಪರಿಚಿತವಾಗಿತ್ತು. ಸರ್ಕಾರಕ್ಕೆ ಇದೇ ಬಂಡವಾಳವಾಯಿತು. ಆ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕುದುರೆಮುಖ ವೈಲ್ಡ್‌ಲೈಫ್ ಫೌಂಡೇಷನ್ ಇದನ್ನು ಜನರ ಗಮನಕ್ಕೆ ತಂದು ಹೋರಾಟಕ್ಕೆ ಮುಂದಾದಾಗ, ಜನರ ಹಿತ ಕಾಯಬೇಕಾಗಿದ್ದ ಸರ್ಕಾರ ಮತ್ತೊಮ್ಮೆ ಯೋಜನೆಯ ಹೆಸರನ್ನೇ ಬದಲಿಸಿತು. ಸಕಲೇಶಪುರ (ಪಶ್ಚಿಮ)ದಿಂದ ಕೋಲಾರ / ಚಿಕ್ಕಬಳ್ಳಾಪುರಕ್ಕೆ ಪ್ರವಾಹದ ನೀರನ್ನು ವರ್ಗಾಯಿಸುವ ಯೋಜನೆ – ೨೪.೦೧ ಟಿಎಂಸಿ ಎಂದು ಬದಲಿಸಿತು. ಸರ್ಕಾರದಲ್ಲಿ ಉನ್ನತ ಮೂಲಗಳು ಇದು ತಿರುಗಣೆಯಾಗುವ ಮೊದಲ ಉಪನದಿ, ಮುಂದೆ ಇಂತಹ ಅನೇಕ ಯೋಜನೆಗಳು ಬರಲಿವೆ ಎಂಬುದನ್ನು ಖಚಿತಪಡಿಸಿವೆ. ಈಗ ಇದರ ತೀವ್ರತೆ ಹಾಗೂ ಗುರುತ್ವವನ್ನು ನಾವು ಅರ್ಥಮಾಡಿಕೊಳ್ಳಬೇಕು. ಈ ಅನಾಹುತಕಾರಿ ಪರಿಯೋಜನೆಯ ವಿರುದ್ಧ ಔಪಚಾರಿಕ ವಿರೋಧವನ್ನೂ ವ್ಯಕ್ತಪಡಿಸದ ಚುನಾಯಿತ ಪ್ರತಿನಿಧಿಗಳ ಮೌನ ಕರಾವಳಿ ಜನರ ಆಕ್ರೋಶಕ್ಕೆ ತುಪ್ಪ ಸುರಿದಿದೆ.

ಯೋಜನಾ ಪ್ರದೇಶದಲ್ಲಿ ಕಾರ್ಯನಿರತವಾಗಿರುವ ವನ್ಯಜೀವಿ ಸಂರಕ್ಷಣಾ ಸಂಸ್ಥೆ, ಕುದುರೆಮುಖ ವೈಲ್ಡ್‌ಲೈಫ್ ಫೌಂಡೇಷನ್ ಪ್ರಸ್ತಾವಿತ ಯೋಜನೆಯ ಅಣೆಕಟ್ಟುಗಳ ನಿಖರ ಸ್ಥಳಗಳನ್ನು ಗೂಗಲ್ ಅರ್ತ್‌ನಲ್ಲಿ ನೇತ್ರಾವತಿ ನದಿ ಅಚ್ಚುಕಟ್ಟು ಪ್ರದೇಶದಲ್ಲಿನ ಅಣೆಕಟ್ಟು ಹಾಗೂ ಪರಿಯೋಜನೆಯ ಸ್ಥಳಗಳನ್ನು ಸ್ಪಷ್ಟವಾಗಿ ತೋರಿಸಿದೆ. ಪರಿಯೋಜನಾ ವರದಿಯಿಂದ ಅಣೆಕಟ್ಟುಗಳು ಬರಲಿರುವ ಸ್ಥಳಗಳನ್ನು ಪಡೆದುಕೊಂಡು, ಸರ್ಕಾರ ಹೇಗೆ ದಕ್ಷಿಣ ಕನ್ನಡದ ಜೀವನಾಧಾರವಾದ ನೇತ್ರಾವತಿ ನದಿಯ ಮೂಲವನ್ನೇ ನಾಶಪಡಿಸಲು ಯೋಜಿಸಿದೆ ಎಂದು ಜನತೆಗೆ ವಾಸ್ತವ ಸಂಗತಿಯನ್ನು ತಿಳಿಸಲು ಗೂಗಲ್ ಅರ್ತ್ ಮ್ಯಾಪ್‌ಗಳು, ಚಿತ್ರ ಮತ್ತು ವಿಡಿಯೋಗಳನ್ನು ಸಿದ್ಧಪಡಿಸಲಾಗಿದೆ. ಕುದುರೆಮುಖ ವೈಲ್ಡ್‌ಲೈಫ್ ಫೌಂಡೇಷನ್ ತನ್ನ ಹೋರಾಟದಲ್ಲಿ ಸರ್ಕಾರ ನೇತ್ರಾವತಿ ನದಿಮೂಲಕ್ಕೆ ಉಂಟುಮಾಡಲು ಯೋಜಿಸುತ್ತಿರುವ ಹಾನಿಯನ್ನು ಎತ್ತಿ ತೋರಿಸುವ ಚಿತ್ರಗಳನ್ನು ಹೊರತರಲಿದೆ. ಸರ್ಕಾರ ಯೋಜನೆಯನ್ನು ಏನೆಂದೇ ಕರೆಯಲಿ ಹೋರಾಟ ಹಮ್ಮಿಕೊಂಡಿರುವ ಎಲ್ಲ ಸಂಘಟನೆಗಳು ಈ ಯೋಜನೆಯನ್ನು ನೇತ್ರಾವತಿ ನದಿ ತಿರುಗಣೆ ಪರಿಯೋಜನೆ ಎಂದೇ ಕರೆಯಬೇಕೆಂದು ಕರೆ ನೀಡಿವೆ.

ಇಲ್ಲಿ ನೀಡಲಾಗಿರುವ ಎರಡು ಗೂಗಲ್ ಅರ್ತ್ ಚಿತ್ರಗಳನ್ನು ಗಮನಿಸಿ. ಇದರಲ್ಲಿ ಯೋಜನಾ ಸ್ಥಳಗಳನ್ನು ಹಾಗೂ ಅಣೆಕಟ್ಟುಗಳು ಬರಲಿರುವ ಜಾಗಗಳನ್ನು ಅನುಮಾನಕ್ಕೆ ಎಡೆಯಿಲ್ಲದಂತೆ ಗುರುತಿಸಲಾಗಿದೆ. ಇಂತಹ ಸ್ಥಳಗಳಲ್ಲಿ ಅರಣ್ಯನಾಶ ಮಾಡದೆ ಯೋಜನೆಯನ್ನು ಕಾರ್ಯಗತಗೊಳಿಸಲು ಸಾಧ್ಯವೇ ಇಲ್ಲ. ಯೋಜನೆ ಜಾರಿಗೆ ಬಂದರೂ ಏನೂ ಪ್ರಯೋಜನವಾಗುವುದಿಲ್ಲ. 'ಹಾವು ಹೊಡೆದು ಹದ್ದಿಗೆ ಹಾಕು' ಎಂಬ ಗಾದೆಯ ಮಾತಿನಂತೆ ಆಗುತ್ತದೆ, ಅಷ್ಟೆ. ಜಗತ್ತಿನ ಇತಿಹಾಸವನ್ನು ನೋಡಿದರೆ, ಇಂತಹ ಎಲ್ಲ ವಿಫಲ ಯೋಜನೆಗಳ ದುಷ್ಪರಿಣಾಮವನ್ನು ಎಲ್ಲರಿಗಿಂತ ಹೆಚ್ಚಾಗಿ ನಮ್ಮ ಬಡಜನರು ಅನುಭವಿಸಬೇಕಾಗುತ್ತದೆ ಎಂಬುದು ಕ್ರೂರ ಹಾಗೂ ನಗ್ನಸತ್ಯ. ಇದನ್ನು ತಪ್ಪಿಸಲು, ಸಂಘಟಿತ, ವಿಜ್ಞಾನಾಧಾರಿತ ಚಳವಳಿಯನ್ನು ಹಮ್ಮಿಕೊಳ್ಳಬೇಕಾಗಿದೆ, ಈಗಾಗಲೇ ಅಂತಹ ಚಳವಳಿಯನ್ನು ಹಮ್ಮಿಕೊಂಡಿರುವ ಕುದುರೆಮುಖ ವೈಲ್ಡ್‌ಲೈಫ್ ಫೌಂಡೇಷನ್‌ನಂತಹ ಸಂಘಟನೆಗಳಿಗೆ ಒಕ್ಕೊರಲಿನಿಂದ ಬೆಂಬಲ ಘೋಷಿಸಬೇಕಿದೆ.

**ಕೆ. ಎಸ್. ನವೀನ್**
ನಂ. ೫/೧, ಶ್ಯಾನುಭೋಗ ನಂಜುಂಡಪ್ಪ ಗಲ್ಲಿ, ಉಪ್ಪಾರಹಳ್ಳಿ
ಚಿಕ್ಕಮಾವಳ್ಳಿ ಅಂಚೆ, ಬೆಂಗಳೂರು – ೫೬೦ ೦೦೪




*ಗುಂಡ್ಯಾದಿಂದ ಸಕಲೇಶಪುರ – ಇಲ್ಲಿ ನೈಸರ್ಗಿಕ ಸಂಪನ್ಮೂಲಗಳ ವಿನಾಶವನ್ನು ಊಹಿಸಿರಿ.*





ಡಾ|| ಅರುಣ್ ಜೋಳದಕೂಡ್ಲಿಗಿ





**ಮಾ**ನವನ ಪ್ರಜ್ಞೆ ಮತ್ತು ಸಂವೇದನೆಯನ್ನು ಬದಲಿಸುವ ನೋಟಕ್ರಮವನ್ನು 'ಆಧುನಿಕತೆ' ಎಂದು ಸರಳವಾಗಿ ಗ್ರಹಿಸೋಣ. ಅಂದರೆ ಒಂದು ಕಾಲದ ಜನಸಮುದಾಯ ತಮ್ಮ ಹಿಂದಿನ ಕಾಲದ ಜನಸಮುದಾಯದ ಜತೆ ಹೋಲಿಕೆ ಮಾಡಿಕೊಳ್ಳುವ ಸಂದರ್ಭದಲ್ಲಿ ಆಧುನಿಕತೆ, ಸ್ವರೂಪ ಮೈದಾಳುತ್ತದೆ. ಆಧುನಿಕತೆಯನ್ನು ತೀರ ಖಚಿತವಾದ ಒಂದು ವ್ಯಾಖ್ಯಾನದಲ್ಲಿ ಹಿಡಿದಿಡುವುದು ಅಸಾಧ್ಯ. ಈ ಮಾತೇ ಆಧುನಿಕತೆಯ ಸ್ವರೂಪಕ್ಕೆ ಕನ್ನಡಿ ಹಿಡಿಯುತ್ತದೆ. ಮೊದಲೇ ಹೇಳಿದಂತೆ ಆಧುನಿಕತೆ ಮಾನವನ ಪ್ರಜ್ಞೆ ಮತ್ತು ಸಂವೇದನೆಯನ್ನು ಬದಲಿಸುತ್ತದೆ ಅಂತಾದರೆ ಈ ಬದಲಾವಣೆಯು ತರುವ ಹೊಸ ಜೀವನ ವಿಧಾನ, ಸಂಸ್ಕೃತಿ ಎರಡೂ ಭಿನ್ನವಾಗಿರುತ್ತವೆ. ಹೀಗೆ ಬದಲುಗೊಂಡ ಸಂವೇದನೆಯ ಜತೆ ಜಾನಪದ ಲೋಕ ಹೇಗೆ ಮುಖಾಮುಖಿಯಾಗಿದೆ ಎನ್ನುವುದು ತುಂಬ ಕುತೂಹಲದ ಸಂಗತಿ. ಜಾನಪದ ಅಧ್ಯಯನಗಳನ್ನು ಗಮನಿಸಿದರೆ, ಜಾನಪದ ಲೋಕವನ್ನು ಕುರಿತು ಅಧ್ಯಯನ ಮಾಡುವವರು ಸ್ವತಃ ಆಧುನಿಕತೆಗೆ ಮುಕ್ತವಾಗಿ ತೆರೆದುಕೊಂಡವರು. ಇನ್ನು ಆಧುನಿಕತೆ ಜಾನಪದದ ಮೇಲೆ ಹೇಗೆ ಪ್ರಭಾವ ಬೀರುತ್ತಿದೆ ಎಂದು ಅಭ್ಯಸಿಸಹೊರಟವರು. ಹೀಗೆ ಜನಪದರು ಮತ್ತು ಅವರನ್ನು ಕುರಿತು ಅಧ್ಯಯನ ಮಾಡುವವರನ್ನು 'ಆಧುನಿಕತೆ' ಹೇಗೆ ಪ್ರಭಾವಿಸಿದೆ, ಕರ್ನಾಟಕದ ಸಂದರ್ಭದಲ್ಲಿ ಜಾನಪದ ಅಧ್ಯಯನಗಳಲ್ಲಿ ಆಧುನಿಕತೆ ಹುಟ್ಟಿಸಿದ ಆಲೋಚನಾ ಮಾದರಿಗಳು ಯಾವುವು ಎನ್ನುವುದರ ಟಿಪ್ಪಣಿ ರೂಪದ ಬರಹವಿದು.

ಯಾವಾಗಲೂ ಹಳೆಯದು ಪರಂಪರೆಯೆನ್ನಿಸಿ ಇಂದಿನದು ಆಧುನಿಕವೆಂದು ಪರಿಗಣಿಸಲ್ಪಡುತ್ತದೆ. ಗತಕಾಲದ ಬದುಕಿನಲ್ಲಿ ತರುವ ಸುಧಾರಣೆಗಳಿಂದಾಗಿ ಆಧುನಿಕತೆಯ ಕಾಲ ನಿರ್ಮಾಣವಾಗುತ್ತದೆ. ಇದು ಗತಕಾಲದ ತಿಳುವಳಿಕೆಯ ಕ್ರಮವನ್ನು ಬದಲಾಯಿಸುತ್ತದೆ. ಇದರಲ್ಲಿ ಕೇವಲ ವಸ್ತು ಸೌಲಭ್ಯಗಳ ಬದಲಾವಣೆಯಷ್ಟೇ ಅಲ್ಲದೆ ಜನರ ಚಿಂತನೆ, ಮೌಲ್ಯಗಳು, ಜೀವನ ವಿಧಾನ ಹಾಗೂ ಸಾಮಾಜಿಕ ಸಂದರ್ಭಗಳಲ್ಲಿಯೂ ಪರಿವರ್ತನೆ ಕಂಡುಬರುತ್ತದೆ. ಹೀಗಾಗಿ ಆಧುನಿಕವೆಂಬುದು ಒಂದು ನಿರಂತರ ಪ್ರಕ್ರಿಯೆ.

ಇಂಗ್ಲಿಷ್‌ನ 'ಮಾಡರ್ನ್' ಎಂಬ ಶಬ್ದ ೧೫ನೇ ಶತಮಾನದ ಲ್ಯಾಟಿನ್‌ನ 'ಮಾಡರ್ನಸ್' ಎಂಬ ಪದದಿಂದ ರೂಪುಗೊಂಡಿದೆ. ಲ್ಯಾಟಿನ್‌ನಲ್ಲಿ 'ಮಾಡರ್ನ್ಸ್' ಎಂಬ ಪದವನ್ನು ೧೫ನೇ ಶತಮಾನದ ಕ್ರಿಶ್ಚಿಯನ್




# ಆಧುನಿಕತೆ ಮತ್ತು ಜಾನಪದ ಚರ್ಚೆಯ ಸಾಧ್ಯತೆಗಳು



ಆಧುನಿಕತೆಯು ಹಳತು-ಹೊಸತು, ಹಳೆ ತಲೆಮಾರು, ಹೊಸ ತಲೆಮಾರು, ಹಳೆಕಾಲ, ಹೊಸಕಾಲ, ಶಿಕ್ಷಿತರು-ಅಶಿಕ್ಷಿತರು, ಪಟ್ಟಣಿಗರು-ಹಳ್ಳಿಗರು ಮುಂತಾದ ವೈರುಧ್ಯಗಳನ್ನು ಸೃಷ್ಟಿಸಿದೆ. ಇವುಗಳ ನಡುವೆ ಕಂದರ ಏರ್ಪಟ್ಟಿದೆ. ಈ ವೈರುಧ್ಯಗಳನ್ನು ಗೆರೆ ಕೊರೆದು ಬೇರ್ಪಡಿಸಲಾಗದು. ಒಂದರೊಳಗೊಂದು ಹೆಣೆದುಕೊಂಡಿರುವಂತಹವುಗಳು. ಇವುಗಳನ್ನು ವೈರುಧ್ಯದ ನೆಲೆಯಲ್ಲಿಯೇ ವಿಶ್ಲೇಷಿಸಹೊರಟ ಆಲೋಚನೆ ಅಪೂರ್ಣ. ಬದಲಿಗೆ, ಅವುಗಳ ಹೆಣಿಗೆಯ ಸಂಕೀರ್ಣತೆಯನ್ನು ವಿಶ್ಲೇಷಿಸುವ ಕ್ರಮ ಹೆಚ್ಚು ಪ್ರಸ್ತುತ. ಕನ್ನಡದಲ್ಲಿ ನಡೆದ ಜಾನಪದ ಅಧ್ಯಯನಗಳಲ್ಲಿ ಆಧುನಿಕತೆಯನ್ನು ಅರ್ಥೈಸಿಕೊಂಡದ್ದು, ವಿಶ್ಲೇಷಿಸಿದ್ದು ಬಹುಪಾಲು ವೈರುಧ್ಯಗಳ ನೆಲೆಯಲ್ಲಿ. ಈಗ ಇಂತಹ ವೈರುಧ್ಯದ ನೆಲೆಯನ್ನು ಬಿಟ್ಟುಕೊಡಬೇಕಿದೆ. ಆಧುನಿಕತೆಯನ್ನು ಜಾನಪದ ಸ್ನೇಹಿಯಾಗಿ ನೋಡುವ ವೈಧಾನಿಕತೆಯ ಬಗ್ಗೆ ಯೋಚಿಸಬೇಕಾಗಿದೆ. ಅಂತೆಯೇ ಜಾನಪದವು ತನ್ನ ಬೇರುಗಳನ್ನು ಆಧುನಿಕತೆಯೊಳಗೆ ಚಾಚಿ ಹೇಗೆ ಕಸುವು ಪಡೆಯುತ್ತಿದೆ ಎನ್ನುವುದರ ಸೂಕ್ಷ್ಮತೆಯ ಕುರಿತೂ ನಾವಿಂದು ಅಧ್ಯಯನ ಮಾಡುವ ಅಗತ್ಯವಿದೆ.









ಘಟ್ಟವನ್ನು ರೋಮನ್ನರು ಕ್ಷುದ್ರ ಧರ್ಮಗಳ ಭೂತಕಾಲದಿಂದ ಪ್ರತ್ಯೇಕಿಸಲು ಬಳಸಿದರು. ಮಧ್ಯಯುಗದಲ್ಲಿ 'ಮಾಡರ್ನ್' ಎಂಬ ಪದವನ್ನು ಪ್ರಾಚೀನ ಎಂಬ ಪದದಿಂದ ಸಮಕಾಲೀನ ಘಟ್ಟವನ್ನು ಪ್ರತ್ಯೇಕಿಸಲು ಪ್ರಯೋಗಿಸಿದರು. ಕ್ರಮೇಣ 'ಮಾಡರ್ನಿಟಿ' ಎಂಬ ಪದ ೧೬ನೇ ಶತಮಾನದ ಹೊತ್ತಿಗೆ ಯುರೋಪಿನಲ್ಲಿ ಹುಟ್ಟಿದ ಸಾಮಾಜಿಕ ಸಂಸ್ಥೆಗಳನ್ನು ವಿವರಿಸಿಕೊಳ್ಳಲು ಹೆಚ್ಚು ಬಳಕೆಗೆ ಬಂತು. ಯುರೋಪ್ ಭೂಮಂಡಲವನ್ನು ಹೊಸದಾಗಿ ಶೋಧಿಸುವ ಹಾಗೂ ವಸಾಹತೀಕರಿಸುವ ಕೆಲಸದಲ್ಲಿ ತೊಡಗಿದಾಗ ಈ ಸಾಮಾಜಿಕ ಸಂಸ್ಥೆಗಳು 'ಮಾಡರ್ನಿಟಿ'ಯನ್ನು ಎಲ್ಲೆಡೆ ಹಬ್ಬಿಸತೊಡಗಿದವು.

"ಪುನರುಜ್ಜೀವನ ಯುಗ ಹಾಗೂ ಸುಧಾರಣಾ ಯುಗಗಳು ಕೂಡ 'ಆಧುನಿಕ ಯುಗ' ಹಾಗೂ ಮಧ್ಯಯುಗ ಎಂಬ ನಿರ್ಣಾಯಕ ವರ್ಗೀಕರಣವನ್ನು ಮಾಡಿದವು. ಧರ್ಮ ಹಾಗೂ ಆಧ್ಯಾತ್ಮಗಳಿಗೆ ಪರ್ಯಾಯವಾದ ಜ್ಞಾನವಾಗಿ ವಿಜ್ಞಾನ ಸ್ಥಾಪಿತಗೊಳ್ಳತೊಡಗಿದ ಘಟ್ಟ ಇದು. ಈ ದೃಷ್ಟಿಯಿಂದ ವಿಜ್ಞಾನ ಕೇಂದ್ರ ರಂಗಕ್ಕೆ ಬಂದ ನಂತರ ಸ್ಥಾಪಿತಗೊಂಡ ನೋಟಕ್ರಮ 'ಆಧುನಿಕತೆ'. ಆದರೆ ೧೭ನೇ ಶತಮಾನದ ಚಾರ್ಲ್ಸ್ ದೊರೆಯ ಕಾಲದಲ್ಲೇ ಜನ ತಮ್ಮನ್ನು ತಾವು 'ಮಾಡರ್ನ್' ಎಂದು ಕರೆದುಕೊಂಡ ಉದಾಹರಣೆಗಳಿವೆ. ಅಂದರೆ ಒಂದು ಕಾಲದ ಜನ ಭೂತದೊಂದಿಗೆ ತಮ್ಮ ಸಂಬಂಧವನ್ನು ಪುನರ್‌ವ್ಯಾಖ್ಯಾನಿಸಿಕೊಂಡಾಗ ಅಥವಾ ಭೂತದಿಂದ ತಮ್ಮನ್ನು ತಾವು ಕಡಿದುಕೊಂಡಾಗ ಅಥವಾ ಭೂತದೊಂದಿಗೆ ಕಡಿದುಹೋದ ಸಂಬಂಧವನ್ನು ಪುನರ್ ಸ್ಥಾಪಿಸಿಕೊಳ್ಳಲು ಯತ್ನಿಸಿದಾಗ, ಈ ಮೂರು ಹಂತಗಳಲ್ಲಿ 'ಆಧುನಿಕತೆ' ಎಂಬ ಪರಿಕಲ್ಪನೆ ಇತಿಹಾಸದಲ್ಲಿ ಚಾಲ್ತಿಗೆ ಬಂದಂತಿದೆ. ಆದರೆ ಆಧುನಿಕತೆ ಒಂದು ಬಹುದೊಡ್ಡ ಆಳುವ ಭಾಷೆಯಾಗಿ, ಸಂಕಥನವಾಗಿ, ವ್ಯವಸ್ಥೆಯಾಗಿ, ಧೋರಣೆಯಾಗಿ, ನಿರ್ದೇಶಿಸುವ ಹಾಗೂ ನಿಯಂತ್ರಿಸುವ ಸಾಧನವಾಗಿ ಮಾನವಪ್ರಜ್ಞೆ ಹಾಗೂ ಸಂವೇದನೆಗಳನ್ನು ನಿರ್ಣಾಯಕವಾಗಿ ಬದಲಿಸುವ ನೋಟಕ್ರಮವಾಗಿ ಪುನರುಜ್ಜೀವನದಿಂದೀಚೆಗೆ ಬೆಳೆದು ಬಂತು ಹಾಗೂ ೨೦ನೇ ಶತಮಾನದ ಮುಖವನ್ನೇ ಬದಲಿಸಿತು" ಎಂದು ನಟರಾಜ ಹುಳಿಯಾರ್ ಹೇಳುತ್ತಾರೆ.

ಯಾವುದೇ ಅಧ್ಯಯನ ಶಿಸ್ತನ್ನು ಅಭ್ಯಸಿಸ ಹೊರಟರೆ, 'ಆಧುನಿಕತೆ' ಉಂಟುಮಾಡಿದ ಪಲ್ಲಟಗಳು ಆಯಾ ಅಧ್ಯಯನ ಶಿಸ್ತಿನ ದಿಕ್ಕನ್ನೇ ಬದಲಿಸಿವೆ. ಇದು ಕರ್ನಾಟಕದಲ್ಲಿ ನಡೆದ ಜಾನಪದ ಅಧ್ಯಯನಗಳಿಗೂ ಅನ್ವಯವಾಗುವ ಮಾತು. ಯಾವುದು ಬದುಕಿನ ಭಾಗವಾಗಿತ್ತೋ, ಅದನ್ನು ಬೇರ್ಪಡಿಸಿ ನೋಡಲು ಕಲಿಸಿದ್ದೇ ಆಧುನಿಕತೆ. ಹಾಗಾಗಿ ಜಾನಪದ ಚಿಂತನೆ ಆಧುನಿಕತೆಯ ಫಲ. ಬ್ರಿಟಿಷರ ಮೂಲಕ ಆಧುನಿಕ ಮನೋಧರ್ಮ ಭಾರತಕ್ಕೆ ಪ್ರವೇಶಿಸುವ ತನಕ, ತಮ್ಮ ಬದುಕಿನ ಭಾಗವಾಗಿದ್ದ ಜನಪದ ಕತೆ, ಗೀತೆಗಳು, ಅಧ್ಯಯನದ ವಸ್ತು ಆಗಿರಲಿಲ್ಲ. ಜನಪದ ಮತ್ತು ಆಧುನಿಕತೆಯನ್ನು ಜತೆಜತೆಗೆ ಚರ್ಚಿಸುವಾಗ ಇವೆರಡೂ ವಿಚಿತ್ರವಾದ ಆಕರ್ಷಣೆಯನ್ನೂ ವಿಕರ್ಷಣೆಯನ್ನೂ ಹೊಂದಿದ ಎದುರುಬದುರು ಪದಗಳಾಗಿ ಕಾಣುತ್ತವೆ. ಇವೆರಡರ ಸಂಬಂಧವನ್ನು ಜಾನಪದ ವಿದ್ವಾಂಸರು ತುಂಬ ಭಿನ್ನವಾಗಿ ಚರ್ಚಿಸಿದ್ದಾರೆ. ಕರ್ನಾಟಕದ ಜಾನಪದ ಅಧ್ಯಯನಗಳಲ್ಲಂತೂ ಈ ಚರ್ಚೆಗೆ ಹಲವು ಮುಖಗಳಿವೆ.

ಕನ್ನಡ ಜಾನಪದ ಅಧ್ಯಯನಗಳಲ್ಲಿ 'ಆಧುನಿಕತೆ'ಯನ್ನು ಮುಖಾಮುಖಿ ಮಾಡಿದ ಪ್ರಮುಖ ನೆಲೆಗಳನ್ನು ಸ್ಥೂಲವಾಗಿ ಹೀಗೆ ಗ್ರಹಿಸಬಹುದು. ಒಂದು : ಅಕ್ಷರವು ಬಹುಕಾಲ ಉಳಿಯಬಲ್ಲುದು, ಚರಿತ್ರೆಯನ್ನು ಅಕ್ಷರ ರೂಪದಲ್ಲಿಯೇ ಉಳಿಸಬೇಕು ಎಂಬುದು ಆಧುನಿಕತೆಯಿಂದಾಗಿ ಬಂದ ತಿಳುವಳಿಕೆ. ಇದು ವಸಾಹತು ಧೋರಣೆ ಕೂಡ. ಹೀಗೆ ಮಾತಿನ ರೂಪದಲ್ಲಿರುವ ಜನಸಾಮಾನ್ಯರ ತಿಳುವಳಿಕೆಯನ್ನು ಅಕ್ಷರ ರೂಪದಲ್ಲಿ ಸಂಗ್ರಹಿಸಬೇಕೆಂಬ ಚಿಂತನೆ. ಎರಡು : ಜನಪದರ ಅಭಿವ್ಯಕ್ತಿಯ ನೆಲೆ, ಜೀವನ ವಿಧಾನದಲ್ಲಿ ಬದಲಾವಣೆ ಘಟಿಸಿದಂತೆ, ಅವರ ಸಾಂಸ್ಕೃತಿಕ ತಿಳುವಳಿಕೆಗಳು ಬದಲಾದ ಜೀವನ ವಿಧಾನದಲ್ಲಿ ವಿಸ್ಮೃತಿಗೆ ಒಳಗಾಗುತ್ತವೆ. ಹೀಗೆ ಮರೆ ಯಾಗಬಹುದಾದ ತಿಳುವಳಿಕೆಯನ್ನು ಸಂಗ್ರಹಿಸುವ ನೆಲೆ. ಮೂರು : ಯಾವ ಬದಲಾವಣೆಗಳು ಜನಪದರ ಸಾಂಸ್ಕೃತಿಕ ತಿಳುವಳಿಕೆಯನ್ನು ಮರೆಸುತ್ತದೆಯೋ, ಅಂತಹ ಬದಲಾವಣೆಯ ಕ್ರಮಗಳನ್ನೇ ವಿರೋಧಿಸುವ ನೆಲೆ. ನಾಲ್ಕು : ಕಾಲದ ಚಲನೆಯು ಪ್ರಕೃತಿದತ್ತವಾದುದು. ಹಾಗೆಯೇ ಸಮಾಜದ ಬದಲಾವಣೆ ಕೂಡ. ಇದರಿಂದಾಗಿ ಸಮಾಜದ ಬದಲಾವಣೆಯನ್ನು ವಿರೋಧಿಸುವುದು ಒಂದು ರೀತಿಯ ಸ್ಥಗಿತ ಆಲೋಚನೆ. ಆಗ ಬದಲಾವಣೆಯನ್ನು ನಮ್ಮತನಕ್ಕೆ ಒಗ್ಗಿಸಿಕೊಳ್ಳುವ ಪರ್ಯಾಯ ಆಲೋಚನೆಗಳು ಬಂದವು. ಸಹಜವಾಗಿ ಯಾವುದೇ ಪರಂಪರೆಗೆ ಹೊಸತನ್ನು ಜೀರ್ಣಿಸಿಕೊಂಡು ತನ್ನದನ್ನಾಗಿಸಿಕೊಳ್ಳುವ ಶಕ್ತಿ ಇರುತ್ತದೆ. ಈ ತಿಳುವಳಿಕೆಯನ್ನು ಆಧರಿಸಿ ಆಧುನಿಕತೆಯನ್ನು ಸ್ವೀಕರಿಸಬಹುದಾದ ಸಾಧ್ಯತೆಗಳ ಬಗ್ಗೆ ಜನಪದ ವಿದ್ವಾಂಸರ ಆಲೋಚನೆಗಳು ರೂಪುಗೊಂಡವು. ಐದು: ಜಾನಪದ ಅಧ್ಯಯನಗಳಲ್ಲಿ ಪ್ರಬಲವಾಗಿದ್ದ ಜನಪದ ನಶಿಸುತ್ತಿದೆ ಎನ್ನುವ ಆಲೋಚನೆ. ೮೦ರ ದಶಕದ ನಂತರ ಜನಪದ ನಶಿಸುತ್ತಿಲ್ಲ, ಕಾಲದ ಜತೆ ಬದಲಾಗುತ್ತಿದೆ, ಹೀಗೆ ಬದಲಾಗುವ ರೂಪವನ್ನು ಗುರುತಿಸಬೇಕು ಎನ್ನುವತ್ತ ಹೊರಳಿತು. ಹೀಗೆ ಆಧುನಿಕ ಆಲೋಚನಾ ವಿನ್ಯಾಸಗಳು ಜನಪದರ ಕುರಿತ ತಿಳುವಳಿಕೆಯ ಮೇಲೆ ಪ್ರಭಾವ ಬೀರಿದವು.

ಆಧುನಿಕತೆ ವಸ್ತುರೂಪದಲ್ಲಿಯೂ ಆಲೋಚನೆಯ ರೂಪದಲ್ಲಿಯೂ ಒಟ್ಟು ಸಮಾಜದ ಬದಲಾವಣೆಯ ರೂಪದಲ್ಲಿಯೂ ಹಲವು ಚಲನೆಗಳನ್ನು ಪಡೆದಿದೆ. ಈ ಚಲನೆ ಜನಪದರ ಬಗೆಗಿನ ಚಿಂತನೆಯ ಕ್ರಮಗಳನ್ನು ಬದಲಿಸಿದೆ. ಜನಪದ ಸಾಹಿತ್ಯ ಜನರ ಬದುಕಿನ ಅಭಿವ್ಯಕ್ತಿ. ಅವರ ಬದುಕಿನಲ್ಲಾದ ಬದಲಾವಣೆಗಳು, ಅವರ ಮಾತು, ನಡೆ, ನುಡಿ, ಆಚರಣೆ ಲೋಕದಲ್ಲೂ ಬದಲಾವಣೆಯನ್ನು ತರುತ್ತದೆ. ಜಾನಪದ ವಿದ್ವಾಂಸರು ಸ್ವತಃ ಆಧುನಿಕ ಶಿಕ್ಷಣ, ಸೌಲಭ್ಯಗಳನ್ನು ಪಡೆದು, ಆ ಮೂಲಕವೇ ಜನಪದರ ತಿಳುವಳಿಕೆಯನ್ನು ವಿಶ್ಲೇಷಿಸುತ್ತಾರೆ. ತಾವು ಆಧುನಿಕರು, ಜನಪದರು ಆಧುನಿಕರಲ್ಲ ಎನ್ನುವ ಭಿನ್ನತೆಗಳು ಈ ಕಾರಣಕ್ಕೆ ಜಾನಪದ ಅಧ್ಯಯನಗಳಲ್ಲಿ ತಾನೇ ತಾನಾಗಿ ನುಸುಳುತ್ತವೆ. ಆಧುನಿಕತೆ ಮತ್ತು ಜನಪದ ಎನ್ನುವ ಒಂದು ಒಟ್ಟಂದದ ಆಲೋಚನೆ ಮಾಡುವಾಗ ಇಂತಹ ಸೂಕ್ಷ್ಮತೆಗಳು ಅರಿವಿಗೆ ಬರುವುದಿಲ್ಲ. ಜನಪದರು ಯಾವುದನ್ನು ತುಂಬ ಇಷ್ಟಪಟ್ಟು ಸ್ವೀಕರಿಸುತ್ತಾರೋ, ಅಧ್ಯಯನಕಾರನಿಗೆ ಅದು ವಿರೋಧದ ವಿಷಯವಾಗುತ್ತದೆ. ಜನಪದ ಅಧ್ಯಯನಕಾರರು ಜನಪದರು ಅನುಸರಿಸಬೇಕಾದ ನಿಯಮಗಳಿವು ಎಂದು ಯಾವುದನ್ನು ಹೇಳುತ್ತಾರೋ ಅದನ್ನು ಜನಪದರು ಅನುಸರಿಸಲು ಇಷ್ಟಪಡುವುದಿಲ್ಲ. ಹೀಗೆ ಜನಪದರು ಮತ್ತು ಜಾನಪದ ಅಧ್ಯಯನಕಾರರ ನಡುವೆ ಒಂದು ಕಂದರ ಏರ್ಪಟ್ಟಿದೆ. ಇಂತಹ ಕಂದರವನ್ನು 'ಆಧುನಿಕತೆ' ಇನ್ನಷ್ಟು ಆಳಗೊಳಿಸಿದೆ.

ಆಧುನಿಕತೆಯ ಪ್ರವೇಶ ಸಾಮಾಜಿಕವಾಗಿ ಅನೇಕ ಪಲ್ಲಟಗಳಿಗೆ ಕಾರಣವಾಗಿದೆ. ಇದು ಜಾನಪದವೂ ಒಳಗೊಂಡಂತೆ, ಮಾನವಿಕ ವಿಜ್ಞಾನದ ಅನೇಕ ಶಾಖೆಗಳು ಇದನ್ನು ಭಿನ್ನವಾಗಿ ವಿವರಿಸಿಕೊಳ್ಳುತ್ತಿವೆ. ಸಮಾಜಶಾಸ್ತ್ರಜ್ಞರಾದ ಸುಸಾನ್ ರುಡಾಲ್ಫ್ ಮತ್ತು ಲಾಯ್ಡ್ ರುಡಾಲ್ಫ್ ಅವರು ಅಧ್ಯಯನ ಮಾಡಿ ಆಧುನಿಕತೆಯಿಂದಾಗುವ ಪಲ್ಲಟಗಳನ್ನು ಹೀಗೆ ಗುರುತಿಸುತ್ತಾರೆ :

"ಆಧುನಿಕತೆಯ ಪ್ರವೇಶದಿಂದಾಗಿ ಸ್ಥಳೀಯವಾದ ಸಂಬಂಧಗಳು ಹಾಗೂ ಮತಧರ್ಮಾಧಾರಿತ ದೃಷ್ಟಿಕೋನಗಳ ಸ್ಥಾನವನ್ನು ವಿಶ್ವಾಸಾತ್ಮಕ ಬದ್ಧತೆಗಳು ಹಾಗೂ ವಿಶ್ವಾಸಾತ್ಮಕ ಕಾಸ್ಮೊಪಾಲಿಟನ್ ಧೋರಣೆಗಳು ಆಕ್ರಮಿಸುತ್ತವೆ. ಸಾಂಪ್ರದಾಯಿಕ ಜಗತ್ತಿನ ಕೇಂದ್ರ ಸ್ಥಾನದಲ್ಲಿದ್ದ ಪಾವಿತ್ರ್ಯದ ಕಲ್ಪನೆ ಹಾಗೂ

**ಅಭಿನಂದನೆಗಳು**



**ಬಿ.ಎಂ.ಟಿ.ಸಿ.ಯವರು ಸ್ಥಾಪಿಸಿದ್ದು ಕನ್ನಡ ಸಾಹಿತ್ಯ ಪರಿಷತ್ತು ನೀಡುತ್ತಿರುವ ೨೦೧೩ರ ಸಾಲಿನ 'ನೃಪತುಂಗ ಸಾಹಿತ್ಯ ಪ್ರಶಸ್ತಿ'ಯನ್ನು ಈ ಬಾರಿ ಕನ್ನಡದ ಹಿರಿಯ ಸಾಹಿತಿ ಪ್ರೊ. ಬರಗೂರು ರಾಮಚಂದ್ರಪ್ಪ ಅವರಿಗೆ ನೀಡಲಾಗಿದೆ. ಪ್ರಶಸ್ತಿ ಪುರಸ್ಕೃತ ಲೇಖಕರಿಗೆ 'ಹೊಸತು' ಹಾಗೂ 'ನವಕರ್ನಾಟಕ' ಬಳಗದ ಅಭಿನಂದನೆಗಳು.**

ಅವೈಚಾರಿಕ ಧೋರಣೆಗಳ ಸ್ಥಾನವನ್ನು ವಿಜ್ಞಾನ ಪ್ರಯೋಜನತತ್ವ ಮುಂತಾದ ಮೌಲ್ಯಗಳು ಆಕ್ರಮಿಸಿಕೊಳ್ಳಲೆತ್ನಿಸುತ್ತವೆ. ಸಮೂಹದ ಬದಲಿಗೆ ವ್ಯಕ್ತಿಯ ಸಮಾಜದ ಹಾಗೂ ರಾಜಕೀಯ ಪ್ರಾಥಮಿಕ ಘಟಕವಾಗುತ್ತಾನೆ. ಮನುಷ್ಯರು ಬದುಕುವ ರೀತಿ ಹಾಗೂ ಕೆಲಸ ಮಾಡುವ ಬಗೆಗಳು ಹುಟ್ಟಿನಿಂದ ನಿರ್ಧರಿತವಾಗುವ ಬದಲು ಆಯ್ಕೆಯಿಂದ ನಿರ್ಧರಿತವಾಗುತ್ತವೆ. ವ್ಯಕ್ತಿಯೊಬ್ಬನಿಗೆ ವಿಶಿಷ್ಟ ಅಸ್ತಿತ್ವ ದಕ್ಕುವುದು ಸಾಧನೆಯಿಂದಲೇ ಹೊರತು ಅದು ಹುಟ್ಟಿನಿಂದ ಬಂದದ್ದಾಗಲೀ, ಕೊಡಲ್ಪಟ್ಟದ್ದಾಗಲೀ ಅಲ್ಲ ಎಂದು ಈ ಘಟ್ಟ ಪ್ರತಿನಿಧಿಸುತ್ತದೆ. ವೃದ್ಧಾಪ್ಯಕ್ಕಿಂತ ತಾರುಣ್ಯಕ್ಕೆ, ಹೆಚ್ಚು ಅಧಿಕಾರ ಪ್ರಾಪ್ತವಾಗುತ್ತದೆ. ಅಧಿಕಾರಶಾಹಿ ಸಂಸ್ಥೆಗಳಲ್ಲಿನ ಉದ್ಯೋಗಗಳು ಜಾತಿ ಮತ್ತು ಕುಟುಂಬಗಳ ಚೌಕಟ್ಟಿನಿಂದ ಬೇರ್ಪಡುತ್ತವೆ. ಪ್ರಭುತ್ವ ಎನ್ನುವುದು ಮಾನವಾತೀತವಾದ ಅಧಿಕಾರ ಕೇಂದ್ರವೆನ್ನುವ ಕಲ್ಪನೆಯ ಬದಲಿಗೆ ಅದು ಬಹುಸಂಖ್ಯಾತರ ಒಪ್ಪಿಗೆ, ಭಾಗವಹಿಸುವಿಕೆ ಹಾಗೂ ಸಾಂದರ್ಭಿಕ ಜವಾಬ್ದಾರಿಯಿಂದ ಕೂಡಿದ ವ್ಯವಸ್ಥೆಯಾಗಿರುತ್ತದೆ ಎನ್ನುವುದು ನಟರಾಜ ಹುಳಿಯಾರ್ ಅವರ ಅಭಿಪ್ರಾಯ.




ಇಲ್ಲಿ ಗುರುತಿಸುವ ಅಂಶಗಳು ಎಲ್ಲ ಕಾಲಕ್ಕೂ, ಎಲ್ಲ ಪ್ರದೇಶಕ್ಕೂ ಸಾರ್ವತ್ರಿಕವಾಗಿ ಅನ್ವಯವಾಗದೆ ಇರಬಹುದು. ಗ್ರಾಮೀಣ ಪ್ರದೇಶವೇ ಪ್ರಧಾನವಾದ ಭಾರತದಲ್ಲಿ ಇಲ್ಲಿನ ಕೆಲವು ಮಾತುಗಳು ಸರಿಹೊಂದದೆ ಹೋಗಬಹುದು. ಆದರೆ ಇಲ್ಲಿ ಸೂಚಿಸ ಲಾಗಿರುವ ಪಲ್ಲಟಗಳು ನಮ್ಮ ನಡುವೆ ಘಟಿಸಿದಂತಹವುಗಳು. ಆಂಶಿಕವಾಗಿ ಕೆಲವು ಅಂಶಗಳಲ್ಲಿ ವ್ಯತ್ಯಯವಿರಬಹುದು. ಆದರೆ ಬಹುಪಾಲು ಅಂಶಗಳು ನಾವು ಬದುಕು ತ್ತಿರುವ ಕಾಲದಲ್ಲಿ ಅನುಭವಕ್ಕೆ ಬಂದಂತಹವುಗಳು. ಈ ಬಗೆಯ ಪಲ್ಲಟಗಳು ಜಾನಪದ ಅಧ್ಯಯನಕಾರನನ್ನು ಆತಂಕಗೊಳಿಸುತ್ತವೆ. ತಮ್ಮೆದುರೇ ಜನಪದ ತಿಳಿವಿನ ಜಗತ್ತು ಕಣ್ಮರೆಯಾಗುತ್ತದೆ, ಹೇಗಾದರೂ ಮಾಡಿ ಇದನ್ನು ಉಳಿಸಬೇಕು, ಜನಪದರ ಸಾಹಿತ್ಯದಲ್ಲಿ ವ್ಯಕ್ತವಾಗುವ ಜೀವನ ವಿಧಾನ ಈಗ ಇಲ್ಲವಾಗುತ್ತಿದೆ. "ಜನಪದರೇ, ನಿಮ್ಮ ಜನಪದವನ್ನು ಉಳಿಸಿಕೊಳ್ಳಿ" ಎಂದು ಜಾಗ್ರತಗೊಳಿಸಬೇಕು, ಎಂಬ ಮುತುವರ್ಜಿಗೆ ಬಿದ್ದು ಅವಸರದ ನಿರ್ಧಾರಗಳನ್ನು ಅವರು ತೆಗೆದುಕೊಳ್ಳುತ್ತಾರೆ. ಇಂತಹ ಓಘದಲ್ಲಿ ಈ ಪಲ್ಲಟಗಳ ಸೂಕ್ಷ್ಮತೆಗಳನ್ನು ಅರ್ಥಮಾಡಿಕೊಳ್ಳುವುದು. ಆ ಮೂಲಕ ವಿಶ್ಲೇಷಿಸಿ ವ್ಯಾಖ್ಯಾನಿಸುವುದು ಗೌಣವಾಗುತ್ತದೆ. ಈ ಗುಣ ಕರ್ನಾಟಕದ ಜಾನಪದ ಅಧ್ಯಯನಗಳಲ್ಲಿ ಪ್ರಮುಖವಾಗಿ ಗುರುತಿಸಬಹುದಾದ್ದು.

ಕರ್ನಾಟಕದಲ್ಲಿ ನಡೆದ ಜಾನಪದ ಅಧ್ಯಯನಗಳಲ್ಲಿ ಆಧುನಿಕತೆಯ ಜತೆ ಜಾನಪದವನ್ನು ಬೇರೆ ಬೇರೆ ನೆಲೆಗಳಲ್ಲಿ ವಿವರಿಸಿದ್ದಾರೆ. ಗ್ರಾಮೀಣ ಭಾಗದಲ್ಲಿ ಆಧುನಿಕತೆಯ ಪ್ರಸರಣದ ಪ್ರಭಾವವು ಹೆಚ್ಚಾದಂತೆಲ್ಲಾ ಆ ಕುರಿತ ವಿವರಣೆಯ ದೃಷ್ಟಿಕೋನಗಳೂ ಬದಲಾಗಿವೆ. ಮೊದಲ ಘಟ್ಟದಲ್ಲಿ ಹಲಸಂಗಿ ಗೆಳೆಯರು, ಮತಿಘಟ್ಟ ಕೃಷ್ಣಮೂರ್ತಿ, ಮಾಸ್ತಿ, ಅರ್ಚಕ ಬಿ. ರಂಗಸ್ವಾಮಿ, ಮುಂತಾದವರಲ್ಲಿ, ಅದರಲ್ಲೂ ಸ್ವಾತಂತ್ರ್ಯಪೂರ್ವದ ಕಾಲಘಟ್ಟದಲ್ಲಿ ಆಧುನಿಕತೆಯ ವಸ್ತುರೂಪದ ಬಗೆಗಿನ ಆತಂಕಕ್ಕಿಂತ, ನಮ್ಮ ಸಂಸ್ಕೃತಿಯನ್ನು ಕಟ್ಟಿಕೊಳ್ಳಬೇಕೆಂಬ ಆಧುನಿಕತೆಯ ತಿಳುವಳಿಕೆ ರೂಪದ ಆಶಯ ಬಲವಾಗಿತ್ತು. ಅಕ್ಷರ ಜಾಯಮಾನದ ಸಾಹಿತ್ಯ ಚರಿತ್ರೆಯನ್ನು ಮುರಿಯಲು ಮೌಖಿಕ ಆಕರಗಳ ಸಾಹಿತ್ಯ ಚರಿತ್ರೆಯೊಂದನ್ನು ರೂಪಿಸುವ ಪ್ರಯತ್ನ ನಡೆಯಿತು. ಆಗ ಆಧುನಿಕತೆ ಪ್ರವೇಶವಾಗಿತ್ತಾದರೂ, ಅದು ಹಳ್ಳಿಗಳನ್ನು ಪ್ರವೇಶಿಸಿ ಅಲ್ಲಿನ ಜೀವನ ವಿಧಾನವನ್ನು ಬದಲಾಯಿಸುವಷ್ಟು ಶಕ್ತವಾಗಿರಲಿಲ್ಲ. ಆಗಿನ್ನೂ ಅದರ ವಾಸನೆಲೆ ನಗರ ಕೇಂದ್ರಿತವಾಗಿತ್ತು.

೧೯೬೦ರ ದಶಕದ ಕಾಲಘಟ್ಟದಲ್ಲಿ ನಿಧಾನವಾಗಿ ಆಧುನಿಕತೆಯ ವಾಸದ ನೆಲೆ ನಗರಗಳಿಂದ ಹಳ್ಳಿಗಳತ್ತ ಮುಖ ಮಾಡಿತು. ಈ ಚಲನೆಯನ್ನು ಗ್ರಹಿಸಿದ ಜನಪದ ವಿದ್ವಾಂಸರು ಸಹಜವಾಗಿ ಆತಂಕಕ್ಕೊಳಗಾದರು. ಹಳ್ಳಿಗಳತ್ತ ನಡೆಯುತ್ತಿರುವ ಆಧುನಿಕತೆಯನ್ನು ನಿಲ್ಲಿಸುವುದೇ ಜನಪದ ವಿದ್ವಾಂಸರ ಮುಖ್ಯ ಕೆಲಸ ಎಂದು ತಿಳಿದರು. ಆದರೆ ವಾಸ್ತವದಲ್ಲಿ ಹಾಗೆ ನಿಲ್ಲಿಸುವುದು ಸಾಧ್ಯವಾಗದ ಸಂಗತಿಯಾಗಿತ್ತು. ಹೆಚ್ಚೆಂದರೆ ಹಳ್ಳಿಗರನ್ನು ಉದ್ದೇಶಿಸಿ ನಿಮ್ಮ ಪರಂಪರೆಯನ್ನು ಬಿಡಬೇಡಿ ಎಂಬ ಕರೆ ಕೊಡಲು ಸಾಧ್ಯವಿತ್ತು. ಆದರೆ ಹಳ್ಳಿಗರು ಆಸೆಗಣ್ಣುಗಳಿಂದ ಬೆರಗಾಗಿ ಆಧುನಿಕತೆಯನ್ನು ಸ್ವೀಕರಿಸುತ್ತಿದ್ದರು. ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ, ಕನ್ನಡತ್ವವನ್ನು ಗಟ್ಟಿಗೊಳಿಸಲು ಜನಪದ ಪರಂಪರೆಯ ಗೀತೆ, ಕತೆ, ಗಾದೆಗಳು ಬಳಕೆಯಾದವು. ಯಾವುವು ಕನ್ನಡತ್ವದ ಸಂಕೇತಗಳೋ, ಅವುಗಳನ್ನೇ ಆಧುನಿಕತೆ ಇಲ್ಲವಾಗಿಸುತ್ತಿದೆ ಎನ್ನುವ ಅರ್ಥದಲ್ಲಿ 'ಕನ್ನಡತ್ವ'ದ ವಿರೋಧಿ ನೆಲೆಯಲ್ಲಿ ಆಧುನಿಕತೆಯನ್ನು ಅರ್ಥೈಸತೊಡಗಿದರು.

ಇನ್ನು ಆರ್ಥಿಕ ಚಿಂತಕರು ಆಧುನಿಕತೆ ಹಳ್ಳಿಹಳ್ಳಿಗಳಿಗೂ ಪ್ರವೇಶಿಸಿ, ಅಲ್ಲಿನ ಅಜ್ಞಾನ ಮೂಢನಂಬಿಕೆ ಮರೆಯಾಗಬೇಕು, ಹಳ್ಳಿಗಳು ಅಭಿವೃದ್ಧಿಯಾಗದ ಹೊರತು ದೇಶದ ಅಭಿವೃದ್ಧಿಯಾಗದು ಎಂದು ವ್ಯಾಖ್ಯಾನಿಸಿದರು. ಗ್ರಾಮ ಸ್ವರಾಜ್ಯದ ಬಗೆಗೆ ಆಲೋಚಿಸಿದ ಮಹಾತ್ಮ ಗಾಂಧಿ ಗ್ರಾಮೀಣ ಸ್ವಾವಲಂಬನೆಯ ಚಿಂತನೆಯನ್ನು ಮಂಡಿಸಿದರು. ಇವೆಲ್ಲವೂ ಜಾನಪದ ವಿದ್ವಾಂಸರು ಆಧುನಿಕತೆಯನ್ನು ವಿರೋಧಿಸಲು ಪ್ರೇರಣೆಯಾದವು. ಹೀಗೆ ಆಧುನಿಕತೆಯ ಸ್ವೀಕಾರದ ಎರಡು ಭಿನ್ನ ಕವಲುಗಳು ಬೇರೆ ಬೇರೆಯಾಗಿಯೇ ಚಲಿಸಿದವು. ಇವೆರಡರ ಮಧ್ಯದ ಸಮತೋಲನದ ಆಲೋಚನಾ ಕ್ರಮವೊಂದು ರೂಪುಗೊಳ್ಳಲಿಲ್ಲ.

ಇಲ್ಲಿ ಮುಖ್ಯವಾಗಿ ವಸಾಹತು ಆಡಳಿತ ನಂತರದ ಕರ್ನಾಟಕವನ್ನು ಗಮನದಲ್ಲಿ ಇಟ್ಟುಕೊಂಡು ನೋಡುವುದಾದರೆ, ವಸಾಹತು ವ್ಯವಸ್ಥೆ ದೇಶೀ ಸಂಸ್ಕೃತಿಯ ನೆನಪುಗಳನ್ನು, ನೋಟಕ್ರಮಗಳನ್ನು ಭಾವಿಸುವ ಬಗೆಗಳನ್ನು ಹೇಗೆ ನಾಶಮಾಡಿತು ಎನ್ನುವ ಸೂಕ್ಷ್ಮತೆಗಳನ್ನು ಗಮನಿಸಬೇಕು. ಈ ಹುಡುಕಾಟದ ನೆಲೆಯನ್ನು ವಿಮರ್ಶಕರಾದ ರಾಜೇಂದ್ರ ಚೆನ್ನಿ ಅವರು ಹೀಗೆ ಪರಿಭಾವಿಸುತ್ತಾರೆ :

"ನಮ್ಮ ಸಂದರ್ಭದಲ್ಲಿ ವಸಾಹತುಶಾಹಿ ಅನುಭವ ತನ್ನೊಂದಿಗೆ ಮಾನವತಾವಾದಿ ಧೋರಣೆಗಳುಳ್ಳ ಪಾಶ್ಚಿಮಾತ್ಯ ಚಿಂತನೆಯನ್ನು ಹೊತ್ತು ತಂದಿತು. ಆಧುನಿಕತೆಯನ್ನು ಕೂಡ. ಆದರೆ ದೀರ್ಘವಾದ ದೇಶೀ ಪರಂಪರೆಯುಳ್ಳ ದೇಶೀ ಸಂಸ್ಕೃತಿಯ ಕೆಲವು ಪರಿಕರಗಳನ್ನು ಅದು ನಾಶಮಾಡಿತು. ಇದರಿಂದಾಗಿ ನಮ್ಮ ಸಾಂಸ್ಕೃತಿಕ ವ್ಯಕ್ತಿತ್ವ ಛಿದ್ರವಾಯಿತು. ಅಂದಿನಿಂದ ಈವರೆಗೂ ಸಮಗ್ರವಾದ ಅಧಿಕೃತವಾದ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಶೋಧಿಸಿಕೊಳ್ಳುವ ಪ್ರಕ್ರಿಯೆ ನಿರಂತರವಾಗಿ ಸಾಗಿದೆ."

ಹೀಗೆ ಆಧುನಿಕತೆಯ ಬಗೆಗೆ ಆಲೋಚಿಸುವಾಗ ಛಿದ್ರಗೊಂಡ ವ್ಯಕ್ತಿತ್ವವನ್ನು ಒಂದುಗೂಡಿಸುವತ್ತ ಒಂದು ಬಗೆಯ ಸಾಂಸ್ಕೃತಿಕ ವ್ಯಕ್ತಿತ್ವದ ಶೋಧವಾಗಿಯೂ ಚಿಂತಿಸಬೇಕಿದೆ. ಹಾಗೆಯೇ ಇಂತಹ ಯೋಚನಾ ನೆಲೆ ಜಾನಪದ ಅಧ್ಯಯನಗಳಲ್ಲಿ ಯಾವ ಸ್ವರೂಪ ಪಡೆದಿದೆ ಎನ್ನುವುದನ್ನೂ ಗಮನಿಸಬೇಕು.

ಆಧುನಿಕತೆಯು ಹಳತು-ಹೊಸತು, ಹಳೆ ತಲೆಮಾರು, ಹೊಸ ತಲೆಮಾರು, ಹಳೆಕಾಲ, ಹೊಸ ಕಾಲ, ಶಿಕ್ಷಿತರು-ಅಶಿಕ್ಷಿತರು, ಪಟ್ಟಣಿಗರು-ಹಳ್ಳಿಗರು ಮುಂತಾದ ವೈರುಧ್ಯಗಳನ್ನು ಸೃಷ್ಟಿಸಿದೆ. ಇವುಗಳ ನಡುವೆ ಕಂದರ ಏರ್ಪಟ್ಟಿದೆ. ಈ ವೈರುಧ್ಯ ಗಳನ್ನು ಗೆರೆ ಕೊರೆದು ಬೇರ್ಪಡಿಸಲಾಗದು. ಒಂದರೊಳಗೊಂದು ಹೆಣೆದು ಕೊಂಡಿರುವಂತಹವುಗಳು. ಇವುಗಳನ್ನು ವೈರುಧ್ಯದ ನೆಲೆಯಲ್ಲಿಯೇ ವಿಶ್ಲೇಷಿಸ ಹೊರಟ ಆಲೋಚನೆ ಅಪೂರ್ಣ. ಬದಲಿಗೆ, ಅವುಗಳ ಹೆಣಿಗೆಯ ಸಂಕೀರ್ಣತೆ ಯನ್ನು ವಿಶ್ಲೇಷಿಸುವ ಕ್ರಮ ಹೆಚ್ಚು ಪ್ರಸ್ತುತ. ಕನ್ನಡದಲ್ಲಿ ನಡೆದ ಜಾನಪದ ಅಧ್ಯಯನಗಳಲ್ಲಿ ಆಧುನಿಕತೆಯನ್ನು ಅರ್ಥೈಸಿಕೊಂಡದ್ದು, ವಿಶ್ಲೇಷಿಸಿದ್ದು ಬಹುಪಾಲು ವೈರುಧ್ಯಗಳ ನೆಲೆಯಲ್ಲಿ. ಈಗ ಇಂತಹ ವೈರುಧ್ಯದ ನೆಲೆಯನ್ನು ಬಿಟ್ಟುಕೊಡ ಬೇಕಿದೆ. ಆಧುನಿಕತೆಯನ್ನು ಜಾನಪದ ಸ್ನೇಹಿಯಾಗಿ ನೋಡುವ ವೈಧಾನಿಕತೆಯ ಬಗ್ಗೆ ಯೋಚಿಸಬೇಕಾಗಿದೆ. ಅಂತೆಯೇ ಜಾನಪದವು ತನ್ನ ಬೇರುಗಳನ್ನು ಆಧುನಿಕತೆಯೊಳಗೆ ಚಾಚಿ ಹೇಗೆ ಕಸುವು ಪಡೆಯುತ್ತಿದೆ ಎನ್ನುವುದರ ಸೂಕ್ಷ್ಮತೆಯ ಕುರಿತೂ ನಾವಿಂದು ಅಧ್ಯಯನ ಮಾಡುವ ಅಗತ್ಯವಿದೆ.

**ಡಾ॥ ಅರುಣ್ ಜೋಳದಕೂಡ್ಲಿಗಿ**
ಜೋಳದಕೂಡ್ಲಿಗಿ (ಅಂಚೆ), ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ ಪಿನ್ - ೫೮೩ ೨೩೫




**ಕುವೆಂಪು ನಾಟಕಗಳು ಮತ್ತು ಸಮಕಾಲೀನತೆ**

*ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ*

**ಪುಟ : viii + ೫೬ = ೬೪**

**ಬೆಲೆ : ರೂ. ೩೦**

**ಜನಕಲಾ ಪಬ್ಲಿಕೇಷನ್,** C/o ಬೆಸ್ಟ್ ಕರೆಸ್ಪಾಂಡೆನ್ಸ್ ಕಾಲೇಜ್, ಪ್ರಭಾತ್ ಟಾಕೀಸ್ ರಸ್ತೆ, ಕಾಮಧೇನು ಹೋಟೆಲ್ ಎದುರು, ಕೋಲಾರ – ೫೬೩೧೦೧

*ಕುವೆಂಪು ನಾಟಕಗಳಲ್ಲಿನ ಸಂವೇದನೆಗಳು ಸಾರ್ವಕಾಲಿಕವಾಗಿರುವುದನ್ನು ಮನಗಂಡು ಈ ಪುಟ್ಟ ಹೊತ್ತಿಗೆ ರಚನೆಯಾಗಿದೆ. ಪುರಾಣಪಾತ್ರಗಳನ್ನೆತ್ತಿ ಕೊಂಡರೂ ನಮ್ಮ ಕಾಲದ ಸಮಾಜವನ್ನು ಅವಲೋಕಿಸಿದರೂ ಅಂದಿನವರೆಲ್ಲ ಇಂದೂ ಬೀಡು ಬಿಟ್ಟಿದ್ದಾರೆ. ಜಗತ್ತಿನಲ್ಲೆಲ್ಲ ವ್ಯಾಪಿಸಿದ್ದಾರೆ. ಸಾಮ್ರಾಜ್ಯಶಾಹಿ ಧೋರಣೆಯಿರಲಿ, ವರ್ಣವ್ಯವಸ್ಥೆಯಿರಲಿ, ಕುಟಿಲ ನೀತಿಗಳಿರಲಿ ಎಲ್ಲೂ ಯಾವ ಲೋಪವೂ ಇಲ್ಲದೆ ಮುಂದುವರಿದು ಬಂದಿದೆ. ಕುವೆಂಪು ಅವರ ನಾಟಕಗಳ ಸಂಭಾಷಣೆಯು ಬಂಡೆದ್ದ ಪಾತ್ರಗಳ ಅಂತರಂಗದ ಅನಿಸಿಕೆ. ಅವು ಸೂಕ್ಷ್ಮವಾಗಿ, ಕೆಲವೊಮ್ಮೆ ಗಟ್ಟಿಯಾಗಿ, ಮತ್ತೊಮ್ಮೆ ಆರ್ದ್ರವಾಗಿ ಬದಲಾವಣೆಯ ಅಗತ್ಯವನ್ನು ಸಾರುತ್ತವೆ. ಅಲ್ಲಿನ ಜೀವಪರ ನಿಲುವುಗಳು ಯುದ್ಧವಿರೋಧಿ ಭಾವನೆಯನ್ನೂ ಸಹಬಾಳ್ವೆಯ ಪಾಠವನ್ನೂ ಕಲಿಸುತ್ತವೆ. ಕಲಿಸುವವ ರಿದ್ದರೂ ಕಲಿಯುವವರೇ ಇಲ್ಲದ ಇಂದಿನ ದಿನಗಳಲ್ಲಿ ಈ ವಿಮರ್ಶೆ ನಮ್ಮಲ್ಲಿ ಅರಣ್ಯರೋದನವಾಗ ದಿರಲೆಂಬ ಆಶಯದಿಂದ ಇದನ್ನು ರಚಿಸಿದ್ದಾರೆ. ಜಾತಿ, ಮತ, ಸಂಕುಚಿತ ಭಾವನೆ ನಮ್ಮ ದೇಶಕ್ಕಂಟಿದ ಶಾಪ! ಮನಸ್ಸು ಪರಿವರ್ತನೆಯಾಗಬೇಕಾದ ಅಗತ್ಯ ಇಂದು ಜರೂರು ಇದೆ.*

**ಭೂಮಿಯ ಟೈಂ ಬಾಂಬ್ : ಜ್ವಾಲಾಮುಖಿ** *ಟಿ. ಆರ್. ಅನಂತರಾಮು*




**ಪುಟ : ೧೬೮** **ಬೆಲೆ : ರೂ. ೧೫೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ನಾವು ವಾಸಿಸುವ ಭೂಮಿ ನಮಗೆ ಬದುಕನ್ನು ಮಾತ್ರ ನೀಡಿದೆಯೆಂದು ನಾವು ಸಂಭ್ರಮಿಸುವುದೇನೂ ಬೇಡ. ಅದು ಪ್ರಕೃತಿಯ ಇನ್ನೊಂದು ಕರಾಳ ಮುಖವನ್ನೂ ಹೊಂದಿದೆ. ಬೆಂಕಿ–ಬಿರುಗಾಳಿ–ನೆರೆ–ಭೂಕಂಪಗಳಂತಹ ಅನಾಹುತಗಳೆಲ್ಲ ಪ್ರಕೃತಿಯ ವಿಕೋಪಗಳು. ಜ್ವಾಲಾಮುಖಿಗಳೇನೂ ಕಡಿಮೆ ಗಂಡಾಂತರ ತರುವವೆಂದು ತಿಳಿಯಬೇಡಿ. ಭೂಮಿಯೊಳಗಡೆಯೇ ರೂಪುಗೊಂಡು ಕುಲುಮೆಯಂತೆ ಕುದಿದು ಒತ್ತಡದಿಂದಾಗಿ ಬೂದಿ–ಬೆಂಕಿ–ಕಲ್ಲು–ಲಾವಾಗಳನ್ನು ಅಗ್ನಿಪರ್ವತಗಳ ಮುಖಗಳಿಂದ ವಾಯುಗೋಳಕ್ಕೆ ಚಿಲುಮೆಯಂತೆ ಚಿಮ್ಮುವುದನ್ನೇ ಜ್ವಾಲಾಮುಖಿ ಎಂದು ಹೇಳಲಾಗಿದೆ. ಇವುಗಳದ್ದೇ ಒಂದು ರೋಚಕ ಕಥೆ. ನೋಟಕ್ಕೆ ರಮ್ಯಾದ್ಭುತ ದೃಶ್ಯ, ಅನಾಹುತಗಳೋ ಅಪಾರ. ಇವು ಲಕ್ಷಾಂತರ – ಕೋಟ್ಯಾಂತರ ವರ್ಷಗಳ ಹಿಂದಿನಿಂದಲೂ ಕ್ರಿಯಾಶಾಲಿ ಯಾಗಿದ್ದುವೆಂದು ಅಂದಾಜಿಸಲಾಗಿದೆ. ಇವು ರೂಪುಗೊಳ್ಳುವ ಬಗೆ, ಸ್ವರೂಪ, ಬೆಂಕಿ ಚೆಂಡುಗಳನ್ನು ಉಗುಳಲು ಕಾರಣವನ್ನೆಲ್ಲ ಪತ್ತೆ ಮಾಡಿ ಭೂವಿಜ್ಞಾನಿಗಳು ನಮ್ಮ ಮುಂದಿರಿಸಿದ್ದಾರೆ. ಬಹಳ ಸಂಶೋಧನೆಗಳು ನಡೆದು ಇಂದು ಅಪಾಯದಿಂದ ನಗರಗಳನ್ನೂ ಜನತೆಯನ್ನೂ ರಕ್ಷಿಸುವತ್ತ ಹೆಜ್ಜೆ ಇಡಲಾಗಿದೆ. ಹುಲುಮಾನವನೆಂದು ಎಷ್ಟೇ ಹಗುರವಾಗಿ ಹಂಗಿಸಿದರೂ ಆತ ಇಂಥ ಅದ್ಭುತಗಳ ಬೇರನ್ನೇ ತಿಳಿದುಕೊಂಡಿದ್ದಾನೆ. ಇದೀಗ ಪ್ರಪಂಚದಾದ್ಯಂತ ಜ್ವಾಲಾಮುಖಿಗಳು ನಡೆಸಿದ ಹಾವಳಿಗಳ ಬಗ್ಗೆ ತಿಳಿಯೋಣ.*




**ದಲಿತ ಲೇಖಕನ ಆತ್ಮಕಥನ – ಬಲುತ** (ಆಯಗಾರಿಕೆ)

*ಮರಾಠಿ ಮೂಲ : ದಯಾ ಪವಾರ, ಕನ್ನಡಕ್ಕೆ : ಪ್ರೊ|| ಚಂದ್ರಕಾಂತ ಪೋಕಳೆ*

**ಪುಟ : ೨೦೪** **ಬೆಲೆ : ರೂ. ೧೨೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಇದು ಮರಾಠಿ ಭಾಷೆಯಲ್ಲಿ ಬಂದ ಆತ್ಮಕಥನ. ದಯಾ ಪವಾರರು ಬರೆದುಕೊಂಡಿದ್ದು. ಅವರು ಸಮಾಜದ ಕೆಳಸ್ತರದಿಂದ ಬಂದವರಾದ್ದರಿಂದಲೇ ಇದಕ್ಕೆ ಇಷ್ಟೊಂದು ಮಹತ್ವ. ನಮ್ಮ ದೇಶದ ವರ್ಣ ವ್ಯವಸ್ಥೆಯ ಕರಾಳರೂಪವೊಂದು ತನ್ನ ದಟ್ಟ ಛಾಯೆಯನ್ನು ಮೂಡಿಸಿದ ನಂತರದ ದಿನಗಳಲ್ಲಿ ಬರೆಯಲ್ಪಟ್ಟದ್ದು. ದಲಿತ ಸಮುದಾಯ ಅಕ್ಷರ ಕಲಿತು ಸಮಾನತೆಗಾಗಿ ಸವರ್ಣೀಯರ ವಿರುದ್ಧ ಹೋರಾಡಿದ ಕಾಲಘಟ್ಟದಲ್ಲಿನ ಜೀವನ ಚಿತ್ರಣ. ಒಂದು ರೀತಿಯಲ್ಲಿ ತೀರಾ ಇತ್ತೀಚಿನದು. ಹಿಂದೂ ಧರ್ಮದ ಒಂದು ಕಳಂಕವಾದ ಜಾತಿಪದ್ಧತಿ ಮೇರೆ ಮೀರಿದ ಸಮಯದ ಚಿತ್ರಣ. ಸರಕಾರದ ಕೆಲ ಕಠಿಣ ಕಾನೂನುಗಳಿಂದ ವ್ಯವಸ್ಥೆ ಬದಲಾಗಿರಬಹುದು. ಆದರೆ ಮನಸ್ಸುಗಳು ಬದಲಾದಂತಿಲ್ಲ. ಇಂದಿನ ಸಮಾಜ ವ್ಯವಸ್ಥೆ ಬೆಣ್ಣೆಯಲ್ಲಿ ಸೂಜಿ ಚುಚ್ಚುವಂತಹ ಒಂದು ನವಿರಾದ ಕ್ರೌರ್ಯ ತೋರ್ಪಡಿಸುತ್ತಿದೆ. ಜಾತಿ ವ್ಯವಸ್ಥೆ ಪ್ರಜ್ವಲಿಸದೆ ಬೂದಿ ಮುಚ್ಚಿದ ಕೆಂಡದಂತಿದೆ. ಶೋಷಿತ ವರ್ಗ ಎದ್ದುನಿಂತು ಪ್ರತಿಭಟಿಸಿದಾಗ ಶೋಷಕವರ್ಗ ಅದನ್ನು ದಮನಿಸಲು ಬೇರೆಯೇ ದಾರಿ ಹುಡುಕತೊಡಗುತ್ತದೆ. ಸಂಘರ್ಷಗಳು ಸಾಂಸ್ಕೃತಿಕ ರಂಗ ಪ್ರವೇಶಿಸಿದರೆ ಅಲ್ಲೂ ದಲಿತ ಲೇಖಕರೆಂಬ ಹಣೆಪಟ್ಟಿ ಅಂಟಿಕೊಳ್ಳುವುದೇಕೆ? ಜಾತಿ–ಮತ–ಧರ್ಮಗಳ ಹೆಸರಿನಲ್ಲಿ ಆಗುವ ಕ್ರೌರ್ಯಗಳನ್ನು ತೊಡೆದುಹಾಕಬೇಕಾದ ಅಗತ್ಯವನ್ನು ಇಂಥ ಆತ್ಮಕಥನಗಳು ಒತ್ತಿ ಹೇಳುತ್ತಿವೆ.*

**ಚಂದ್ರಮಾನ** (ನಾಗತಿಹಳ್ಳಿ ಚಂದ್ರಶೇಖರ ಅವರ ಬದುಕು–ಬರಹ–ಆಸಕ್ತಿ–ಸಾಧನೆ ಕುರಿತ ವಿಮರ್ಶಾ ಬರಹಗಳ ಸಂಕಲನ)




*ಸಂಪಾದಕರು : ಶಿಲ್ಪಶ್ರೀ ಹರವು, ಶಿವಕುಮಾರ ಕಾರೇಪುರ*

**ಪುಟ : xvi + ೨೧೨** **ಬೆಲೆ : ರೂ. ೨೫೦**

**ಕನ್ನಡ ಸಾಹಿತ್ಯ ಪರಿಷತ್ತು,** ಜಿಲ್ಲಾ ಘಟಕ, ಮಂಡ್ಯ, ಒಂದನೇ ತಿರುವು, ಬಂದೀಗೌಡ ಬಡಾವಣೆ, ಮಂಡ್ಯ

*ನಾಗತಿಹಳ್ಳಿ ಚಂದ್ರಶೇಖರ್ ಅವರ ಜನ್ಮದಿನಾಂಕ ಆಗಸ್ಟ್ ೧೫. ಅದು ಸರಿರಾತ್ರಿಯಲ್ಲಿ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಘೋಷಿಸಿ ಸೂರ್ಯೋದಯಕ್ಕೆ ಮುಂಚೆ ಬ್ರಿಟಿಷರು ಪೇರಿ ಕಿತ್ತ ದಿನ. ನಾಗತಿಹಳ್ಳಿಯವರದ್ದು ಸ್ವತಂತ್ರ ಯೋಚನೆ. ನಿರ್ಭಯ ಸ್ವಭಾವ. ಯಾರೂ ಬಂಧಿಸಿಡಲಾಗದ, ಚೌಕಟ್ಟಿನಿಂದಾಚೆಗೆ ಜಿಗಿದು ಎತ್ತರಕ್ಕೆ ಬೆಳೆಯುವ ವ್ಯಕ್ತಿತ್ವ. ಇವರು ಸಂದರ್ಶಿಸಿದ ದೇಶ–ವಿದೇಶಗಳ ವಿವರ–ಪ್ರವರಗಳು ಪ್ರವಾಸ ಕಥನಗಳಾಗಿ ನಮ್ಮನ್ನೂ ತಲುಪಿವೆ. ಓದುತ್ತಿದ್ದರೆ ನಾವಿಲ್ಲಿರುತ್ತೇವೆ; ನಮ್ಮ ಮನಸ್ಸು ಅವರು ಹೋದಲ್ಲೆಲ್ಲ ಗಿರಕಿ ಹೊಡೆಯುತ್ತಿರುತ್ತದೆ. ಇವರು ಮೆಟ್ಟಿದ ಮೊದಲ ವಿದೇಶಿ ನೆಲ ಫ್ರಾನ್ಸ್. ಇಲ್ಲಿ ಇವರನ್ನು ಸತ್ಕರಿಸಲು ನಿಯೋಜಿತರಾದ ಫ್ರೆಂಚ್ ದಂಪತಿಗಳು 'ನ್ಯಗಾತಿ ಹ್ಯಾಲಿ ಚಾಂದ್ ಶಿಕಾರ್' ಎಂದು ಬರೆದ ಫಲಕ ಹಿಡಿದು, ಇವರ ಗಮನ ಸೆಳೆದು ಅತಿಥಿಯನ್ನು ಕರೆದೊಯ್ದರಂತೆ! ಇದಲ್ಲವೇ ದೇಶ ಭಾಷೆಯನ್ನೂ ಮೀರಿದ ಪ್ರೀತಿ! ಭಾರತ ದೇಶದಲ್ಲಿ ಯುವತಿಯೊಬ್ಬಳು ಅರ್ಧರಾತ್ರಿಯಲ್ಲಿ ನಿರ್ಭೀತಳಾಗಿ ರಸ್ತೆಯಲ್ಲಿ ಸಂಚರಿಸುವಂಥ ದಿನ ಬಂದೀತೇ ಎಂಬ ಪ್ರಶ್ನೆ ಕಾಡಿದ್ದೂ ಕೂಡ ಅರ್ಧರಾತ್ರಿಯಲ್ಲೇ! ತಮ್ಮ ಫ್ರಾನ್ಸ್ ಪ್ರವಾಸಕಾಲದಲ್ಲಿ, ತಮ್ಮೊಂದಿಗೆ ಇಷ್ಟು ಹೊತ್ತೂ ಅದೂ ಇದೂ ಮಾತಾಡುತ್ತಿದ್ದ ನರ್ಸೊಬ್ಬಳು ತನ್ನ ಸ್ಟೇಷನ್ ಬಂದೊಡನೆ ಸರಿರಾತ್ರಿಯಲ್ಲಿ ಒಬ್ಬಳೇ ಇಳಿದು ಹೋದಳಂತೆ. ಹೌದು, ಭಾರತೀಯರಿಗೆ ಇದು ಶಾಕ್ ನ್ಯೂಸ್! ಇವರು ತಮ್ಮ ಧಾರಾವಾಹಿಯಲ್ಲಿ ನಾಯಕಿ ಡಾಕ್ಟರ್ ಅರ್ಧರಾತ್ರಿಯಲ್ಲಿ ರಸ್ತೆಗಿಳಿದು ತನ್ನ ಡ್ಯೂಟಿ ಮುಗಿಸಿ ಹಿಂದಿರುಗುವಾಗ ಭಾರತದಲ್ಲೇನಾಗಬಹುದೆಂದೂ ಚಿತ್ರಿಸಿದ್ದಾರೆ. ಪೂರ್ವಿ ಕಥೆಯ ನಾಯಕಿ ಸದ್ದಿಲ್ಲದೆ ಒಂಟಿಯಾಗಿ ದೇಶ ಬಿಟ್ಟು ವಿದೇಶಕ್ಕೆ ಹಾರುವುದೂ ಅರ್ಧರಾತ್ರಿಯಲ್ಲೇ! ಇವರ ಕಥೆ, ಧಾರಾವಾಹಿ, ಸಿನೆಮಾ ನಾಯಕಿ ಬಲು ದಿಟ್ಟೆ! ಅಳುಬುರುಕಿಯಲ್ಲ. ಸಂಪ್ರದಾಯದ ಚೌಕಟ್ಟಿನಿಂದ ಸಿಡಿದು ನಿಂತವಳು. ಈ ಮೇಷ್ಟ್ರು ನಾಲ್ಕು ಗೋಡೆಗಳ ಮಧ್ಯೆ ತರಗತಿಯಲ್ಲಿ ಮಾಡಿದ ಪಾಠಕ್ಕಿಂತಲೂ ಕೃತಿಗಳ ಮೂಲಕ ಸಮಾಜಕ್ಕೆ ಹೇಳಿದ ಪಾಠ – ನೀಡಿದ ಸಂದೇಶ ಹೆಚ್ಚು ಪವರ್‌ಫುಲ್!!*

– **ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು - ೨೨*

# ಪಾತಾಳಗರಡಿಗೂ ನಿಲುಕದ ಬಾವಿ : ಶಿಕ್ಷಣ ಹಕ್ಕು ಮಸೂದೆ




ಡಾ॥ ಮಹಾಬಲೇಶ್ವರ ರಾವ್

ಆರರಿಂದ ಹದಿನಾಲ್ಕು ವರ್ಷ ಪ್ರಾಯದ ದೇಶದ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಒದಗಿಸುವ ಕಾನೂನಿನ ಬದ್ಧತೆಯನ್ನು ಪಾಲಿಸಬೇಕಾದ ೧೩೦ ರಾಷ್ಟ್ರಗಳ ಸಾಲಿಗೆ ಭಾರತ ದೇಶವು ಏಪ್ರಿಲ್ ೧, ೨೦೧೦ರಂದು ಸೇರಿತು. ಶಿಕ್ಷಣ ಹಕ್ಕು ಮಸೂದೆ (ಆರ್. ಟಿ. ಇ. ಕಾಯ್ದೆ – ೨೦೦೯)ಯು ನೂರು ವರ್ಷಗಳಿಗೂ ಮಿಕ್ಕಿ ನಾವು ಪೊರೆಯುತ್ತಾ ಬಂದಿರುವ ಕನಸೊಂದನ್ನು ನನಸು ಮಾಡಲು ಇಟ್ಟ ದಿಟ್ಟ ಹೆಜ್ಜೆ.

ಭಾರತೀಯ ಸಂವಿಧಾನದ ೪೫ನೇ ವಿಧಿಯ ನಿರ್ದೇಶಕ ಸೂತ್ರಗಳ ಪ್ರಕಾರ ಸರಕಾರವು ೬–೧೪ ವರ್ಷ ಪ್ರಾಯದ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಸಂವಿಧಾನ ಸ್ಥಾಪನೆಯಾದ ಹತ್ತು ವರ್ಷಗಳೊಳಗೆ ಒದಗಿಸಬೇಕಾಗಿತ್ತು. ಆದರೆ ನಿರ್ದೇಶಕ ಸೂತ್ರಗಳನ್ವಯ ವೈಫಲ್ಯಕ್ಕೆ ಸರಕಾರವನ್ನೇ ನೇರವಾಗಿ ಕಾನೂನಿನ ಪ್ರಕಾರ ಗುರಿಮಾಡಲು ಬರುವುದಿಲ್ಲವಾದುದರಿಂದ ಕಳೆದ ಆರು ದಶಕಗಳಲ್ಲಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಗುರಿ ಸಾಧನೆ ಎಡವುತ್ತ ಕುಂಟುತ್ತ ಸಾಗಿದೆ.

ಆದರೆ ಡಿಸೆಂಬರ್ ೨೦೦೨ರಲ್ಲಿ ಭಾರತೀಯ ಸಂವಿಧಾನಕ್ಕೆ ೮೬ನೆಯ ತಿದ್ದುಪಡಿ ತರುವ ಮೂಲಕ ಸಂವಿಧಾನದ ೨೧ನೆಯ ವಿಧಿಗೆ ೨೧–ಎಅನ್ನು ಮೂಲಭೂತ ಹಕ್ಕುಗಳ ಪಟ್ಟಿಗೆ ಸೇರಿಸಲಾಯಿತು. ಅಂತೆಯೇ ವಿಧಿ ೪೫ಅನ್ನು ಒಂದಿಷ್ಟು ಮಾರ್ಪಡಿಸಲಾಯಿತು. ಹಾಗೆಯೇ ವಿಧಿ ೫೧ಎ (ಮೂಲಭೂತ ಕರ್ತವ್ಯಗಳು)ಗೆ ಒಂದು ಹೊಸ ಕಲಂಅನ್ನು ಸೇರಿಸಲಾಯಿತು. ಹೀಗೆ ಮಾಡುವ ಮೂಲಕ ಆರರಿಂದ ಹದಿನಾಲ್ಕರ ಪ್ರಾಯದ ಮಕ್ಕಳಿಗೆ ಶಿಕ್ಷಣ ಒದಗಿಸುವ ಜವಾಬ್ದಾರಿಯನ್ನು ಹೆತ್ತವರು ಅಥವಾ ಪಾಲಕರಿಗೆ ವಹಿಸಲಾಯಿತು. ಉಚಿತ ಹಾಗೂ ಕಡ್ಡಾಯ ಶಿಕ್ಷಣದ ಮಕ್ಕಳ ಹಕ್ಕು ಕಾಯ್ದೆಯನ್ನು ೨೦೦೫ರಲ್ಲಿ ಕರಡು ರೂಪದಲ್ಲಿ ರಚಿಸಿ ೨೦೦೯ರಲ್ಲಿ ಮತ್ತೆ ಪರಿಷ್ಕರಿಸಿ ಕಾನೂನಿನ ಸ್ವರೂಪ ನೀಡಲಾಯಿತು. ಆಗಸ್ಟ್ ೨೬, ೨೦೦೯ರಲ್ಲಿ ರಾಷ್ಟ್ರಪತಿಯವರ ಅಂಗೀಕಾರ ಪಡೆದ ಮೇಲೆ ಈ ಕಾಯ್ದೆಯು ಏಪ್ರಿಲ್ ೧, ೨೦೧೦ರಿಂದ ಅನುಷ್ಠಾನಕ್ಕೆ ಬಂದಿದೆ. ಶಿಕ್ಷಣ ಹಕ್ಕು ಕಾಯ್ದೆ ಜಾರಿಗೆ ಬಂದುದರಿಂದಾಗಿ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ 'ಸರ್ವ ಶಿಕ್ಷಾ ಅಭಿಯಾನ'ದ ಮೂಲಕ ಮಾಡುತ್ತಾ ಬಂದಿರುವ ಕಾರ್ಯಗಳಿಗೆ ಸ್ಪಷ್ಟ ದಿಕ್ಕು ದೆಸೆ ಲಭಿಸಿರುವುದರ ಜೊತೆಗೆ ಕಾನೂನಿನ ಶ್ರೀರಕ್ಷೆಯೂ ಲಭಿಸಿದಂತಾಗಿದೆ. ಈ ಕಾಯ್ದೆಯ ದೆಸೆಯಿಂದಾಗಿ ಶಾಲಾ ಆಡಳಿತ ಮಂಡಳಿಗಳು, ಪಾಲಕರು, ಶಿಕ್ಷಕರು, ಶೈಕ್ಷಣಿಕ ಆಡಳಿತಗಾರರು ಹಾಗೂ ಸರಕಾರಗಳು ಈಗ ಹೆಚ್ಚಿನ ಜವಾಬ್ದಾರಿ ಹಾಗೂ ಸಂಕಲ್ಪ ಬಲದಿಂದ ದುಡಿಯಬೇಕಾದ ಅನಿವಾರ್ಯತೆ ಒದಗಿದೆ.

### ಕಾಯ್ಕೆಯ ಮುಖ್ಯ ಲಕ್ಷಣಗಳು

ಶಿಕ್ಷಣ ಹಕ್ಕು ಕಾಯ್ದೆಯು ಶಾಲೆಗಳು, ಶಿಕ್ಷಕರು, ಪಠ್ಯಕ್ರಮ, ವಿದ್ಯಾರ್ಥಿಗಳು, ಮೌಲ್ಯಮಾಪನ, ಶಿಕ್ಷಣಾವಕಾಶಗಳು, ಆಡಳಿತ ಮಂಡಳಿಗಳು ಹಾಗೂ

ಸರಕಾರಗಳ ಪಾತ್ರ ಮತ್ತು ಜವಾಬ್ದಾರಿಗಳ ಬಗ್ಗೆ ಖಚಿತವಾದ ದಿಗ್ದರ್ಶನ ನೀಡುತ್ತವೆ. ಈ ಕಾಯ್ದೆಯ ಕೆಲವು ಮುಖ್ಯ ಲಕ್ಷಣಗಳೆಂದರೆ :

* ಆರರಿಂದ ಹದಿನಾಲ್ಕರ ಪ್ರಾಯದ ಪ್ರತಿ ಮಗುವಿಗೂ ತನ್ನ ಮನೆಗೆ ಸಮೀಪದಲ್ಲಿರುವ ಶಾಲೆಯಲ್ಲಿ ಉಚಿತ ಹಾಗೂ ಕಡ್ಡಾಯ ಶಿಕ್ಷಣ ಪಡೆಯುವ ಹಕ್ಕು ಇದೆ.
* ಈ ಕಾಯ್ದೆಯ ವ್ಯಾಪ್ತಿ ತರಗತಿ ಒಂದರಿಂದ ಎಂಟನೆಯ ತರಗತಿವರೆಗೆ ಮಾತ್ರ. ಆದರೆ ಪೂರ್ವ ಪ್ರಾಥಮಿಕ ತರಗತಿಗಳಿಂದಲೇ ಶಾಲೆ ವ್ಯವಸ್ಥೆ ಹೊಂದಿರುವ ಸಂಸ್ಥೆಗಳಿಗೂ ಈ ಕಾಯ್ದೆ ಅನ್ವಯಿಸುತ್ತದೆ.
* ಶಾಲೆಯಲ್ಲಿ ಪ್ರವೇಶ ಪಡೆದ ಮಗುವನ್ನು ಪ್ರಾಥಮಿಕ ವಿದ್ಯಾಭ್ಯಾಸ ಮುಗಿಸುವ ತನಕ ಶಾಲೆಯಿಂದ ಹೊರಗೆ ಹಾಕುವಂತಿಲ್ಲ; ಅನುತ್ತೀರ್ಣಗೊಳಿಸುವಂತಿಲ್ಲ.
* ೬–೧೪ ವಯೋಮಾನದ ಮಕ್ಕಳಿಗೆ ದೇಹದಂಡನೆ ನೀಡುವುದನ್ನು, ಮಾನಸಿಕ ಹಿಂಸೆ ಕೊಡುವುದನ್ನು ನಿಷೇಧಿಸಲಾಗಿದೆ.
* ಶಾಲಾ ಪ್ರವೇಶಕ್ಕಾಗಿ ಪರೀಕ್ಷೆ, ಸಂದರ್ಶನ ಇತ್ಯಾದಿಗಳನ್ನು ನಡೆಸುವಂತಿಲ್ಲ. ದಾನ ಶುಲ್ಕವನ್ನು ನಿಷೇಧಿಸಲಾಗಿದೆ.
* ಎಲ್ಲ ಶಾಲೆಗಳೂ ಸರಕಾರದಿಂದ ಮಾನ್ಯತೆ ಪಡೆದಿರಬೇಕು. ಕಾಯ್ದೆಯ ನಿಯಮಗಳನ್ನು ಪಾಲಿಸದ ಶಾಲೆಗಳ ಮಾನ್ಯತೆಯನ್ನು ಸರಕಾರ ರದ್ದುಪಡಿಸಬಹುದು. ಭಾರಿ ಮೊತ್ತದ ದಂಡ ವಿಧಿಸಬಹುದು.
* ಅನುದಾನರಹಿತ ಅಲ್ಪಸಂಖ್ಯಾತ ಶಾಲೆಗಳನ್ನು ಹೊರತುಪಡಿಸಿ ಎಲ್ಲ ಅನುದಾನರಹಿತ ಖಾಸಗಿ ಶಾಲೆಗಳಲ್ಲಿ ಶೇ. ೨೫ರಷ್ಟು ಸ್ಥಾನಗಳನ್ನು ಒಂದನೆಯ ತರಗತಿಯ ಪ್ರವೇಶದಲ್ಲಿ ದುರ್ಬಲ ವರ್ಗದ ಹಾಗೂ ಅವಕಾಶವಂಚಿತ ಮಕ್ಕಳಿಗೆ ಮೀಸಲಿಡಬೇಕು. ಪ್ರವೇಶ ಪ್ರಕ್ರಿಯೆಗೆ ಸಂಬಂಧಿಸಿದಂತೆ ಕಾಲಕಾಲಕ್ಕೆ ಸರಕಾರಗಳು ನೀಡುವ ನಿರ್ದೇಶನಗಳನ್ನು ಖಾಸಗಿ ಶಾಲೆಗಳು ತಪ್ಪದೆ ಪಾಲಿಸಬೇಕು. ಪ್ರವೇಶಕ್ಕೆ ಸಂಬಂಧಿಸಿದ ವಿಧಿ ವಿಧಾನಗಳು ಪಾರದರ್ಶಕವಾಗಿರಬೇಕು.
* ಸರಕಾರಗಳು, ಸ್ಥಳೀಯ ಆಡಳಿತ ಸಂಸ್ಥೆಗಳು ಹಾಗೂ ಪಾಲಕರ ಪಾತ್ರ ಹಾಗೂ ಜವಾಬ್ದಾರಿಗಳನ್ನು ಕಾಯ್ದೆಯು ಸ್ಪಷ್ಟಪಡಿಸಿದೆ.
* ಪ್ರವೇಶ ಪ್ರಕ್ರಿಯೆ, ಮೂಲಭೂತ ಸೌಲಭ್ಯಗಳು, ಶಿಕ್ಷಕರ ವಿದ್ಯಾರ್ಹತೆಗಳು, ಶಿಕ್ಷಕ – ವಿದ್ಯಾರ್ಥಿ ನಿಷ್ಪತ್ತಿ, ಶಾಲಾಡಳಿತ ಮಂಡಳಿ ರಚನೆ, ಬೋಧನೆಯ ಗುಣಮಟ್ಟ ಮೊದಲಾದ ವಿಷಯಗಳಲ್ಲಿ ಕಾಯ್ದೆಯು ನಿರ್ದಿಷ್ಟವಾದ ಮಾನದಂಡಗಳನ್ನು ರೂಪಿಸಿದೆ. ಮುಂದಿನ ಮೂರು ವರ್ಷಗಳಲ್ಲಿ ಅನುದಾನರಹಿತ ಹಾಗೂ ಅನುದಾನಿತ ಶಾಲೆಗಳು ಈ ಮಾನದಂಡಗಳನ್ನು ಪಾಲನೆ ಮಾಡದಿದ್ದಲ್ಲಿ ಮುಚ್ಚುಗಡೆ ಮಾಡಲು ಆದೇಶಿಸಬಹುದು.




* ವಿದ್ಯಾರ್ಥಿಸ್ನೇಹಿ, ಚಟುವಟಿಕೆ ಆಧಾರಿತ, ವಿದ್ಯಾರ್ಥಿ ಕೇಂದ್ರಿತ ಪಠ್ಯಕ್ರಮದ ಅನುಷ್ಠಾನಕ್ಕೆ ಒತ್ತು ನೀಡಲಾಗಿದೆ.
* ಚುನಾವಣೆಗಳು, ಜನಗಣತಿ ಹಾಗೂ ಸಂತ್ರಸ್ತರ ಸೇವೆಯಂಥ ತುರ್ತು ಸಂದರ್ಭಗಳನ್ನು ಹೊರತುಪಡಿಸಿ, ಉಳಿದಂತೆ ಶಿಕ್ಷಕರ ಮೇಲೆ ಯಾವುದೇ ಬಗೆಯ ಶೈಕ್ಷಣಿಕೇತರ ಹೊರೆ ಹೊರಿಸುವುದನ್ನು ಕಾಯ್ದೆ ನಿಷೇಧಿಸುತ್ತದೆ.
* ಜನನ ಪ್ರಮಾಣ ಪತ್ರ, ವರ್ಗಾವಣಾ ಪ್ರಮಾಣ ಪತ್ರದ ನೆಪ ಮಾಡಿಕೊಂಡು ಪ್ರವೇಶ ನಿರಾಕರಿಸುವುದನ್ನು ಕಾಯ್ದೆ ನಿರ್ಬಂಧಿಸುತ್ತದೆ. ಬಹುಬಿಂದು (Multiple Entry) ಪ್ರವೇಶಕ್ಕೆ ಹಾಗೂ ನೆರೆಹೊರೆಯ ಶಾಲಾ ಪರಿಕಲ್ಪನೆಗೆ ಮಹತ್ತ್ವ ನೀಡಲಾಗಿದೆ.
* ಅರೆ ಶಿಕ್ಷಕರು ಹಾಗೂ ನಿರ್ದಿಷ್ಟ ಶೈಕ್ಷಣಿಕ ಅರ್ಹತೆ ಇಲ್ಲದ ಶಿಕ್ಷಕರ ಸೇವೆಯನ್ನು ಕಾಯ್ದೆಯು ನಿಷೇಧಿಸುತ್ತದೆ. ಶಿಕ್ಷಕರ ಗುಣಮಟ್ಟ ಪರಿಶೀಲನೆ ದೃಷ್ಟಿಯಿಂದ ಕಾಲಕಾಲಕ್ಕೆ ಶಿಕ್ಷಕರ ಅರ್ಹತಾ ಪರೀಕ್ಷೆ ನಡೆಸಲು ಕಾಯ್ದೆಯು ಶಿಫಾರಸು ಮಾಡಿದೆ.
* ರಾಷ್ಟ್ರೀಯ ಮಕ್ಕಳ ಹಕ್ಕುಗಳ ಸುರಕ್ಷಾ ಆಯೋಗ ಅಥವಾ ರಾಜ್ಯ ಮಕ್ಕಳ ಹಕ್ಕುಗಳ ಆಯೋಗದ ಮೂಲಕ ಮಕ್ಕಳ ಹಕ್ಕುಗಳ ಸಂರಕ್ಷಣೆ ಹಾಗೂ ಜಾಗೃತಿಗಾಗಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಸೂಚಿಸಲಾಗಿದೆ.
* ಮಕ್ಕಳ ಶಿಕ್ಷಣ ಹಕ್ಕು ಕಾಯ್ದೆಯ ಕಲಮುಗಳನ್ನು ಪಾಲನೆ ಮಾಡುವುದು ಶಾಲೆಗಳ ಆದ್ಯಕರ್ತವ್ಯ. ಕಾಯ್ದೆಯ ಉಲ್ಲಂಘನೆಯ ಪ್ರಕರಣಗಳು ಕಂಡುಬಂದಲ್ಲಿ ಅಂಥ ಶಾಲೆಗಳ ಮಾನ್ಯತೆ ರದ್ದಾಗಬಹುದು. ಮಕ್ಕಳಿಗೆ ದೈಹಿಕ ಹಾಗೂ ಮಾನಸಿಕ ಹಿಂಸೆ ನೀಡುವ ಶಿಕ್ಷಕರು ಸೆರೆಮನೆ ವಾಸ ಅನುಭವಿಸಬೇಕಾಗಬಹುದು. ಇಲ್ಲವೇ ಅವರನ್ನು ಸೇವೆಯಿಂದ ವಜಾಗೊಳಿಸಬಹುದು.

ಒಟ್ಟಾರೆಯಾಗಿ, ಒಳಗೊಳ್ಳುವ ಶಿಕ್ಷಣವನ್ನು ಖಾತ್ರಿಪಡಿಸುವುದು ಈ ಕಾಯ್ದೆಯ ಉದ್ದೇಶ.

**ಇತಿಹಾಸದ ಹೆಜ್ಜೆ ಸಾಲು**

ಹಲವು ವಲಯಗಳಲ್ಲಿ 'ಕ್ರಾಂತಿಕಾರಿ' ಎಂದು ಬಿಂಬಿತವಾಗಿರುವ ಶಿಕ್ಷಣ ಹಕ್ಕು ಕಾಯ್ದೆ ಜನ್ಮ ತಳೆಯಲು ಎಂಟು ಹತ್ತು ವರ್ಷಗಳು ಬೇಕಾದವು. ಆದರೆ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸ ಬೇಕೆಂಬ ಪ್ರಯತ್ನಕ್ಕೆ ಒಂದು ಶತಮಾನದ ಇತಿಹಾಸವೇ ಇದೆ.

ಶ್ರೀ ಗೋಪಾಲಕೃಷ್ಣ ಗೋಖಲೆಯವರು ೧೯೧೧ರಲ್ಲಿ ಬ್ರಿಟನ್ನಿನ ಶಾಸಕಾಂಗ ಸಭೆಯಲ್ಲಿ ಭಾರತಕ್ಕೆ ಸಂಬಂಧಿಸಿದಂತೆ ಕಡ್ಡಾಯ ಉಚಿತ ಪ್ರಾಥಮಿಕ ಶಿಕ್ಷಣದ ಮಸೂದೆಯೊಂದನ್ನು ಮಂಡಿಸಿ ಅದಕ್ಕೆ ಸೋಲಾಗಬಹುದೆಂದು ಗೊತ್ತಿದ್ದರೂ ಬಲು ದೀರ್ಘವಾಗಿ ವಾದಿಸಿ ಸೋತರು. ಮುಂದೊಂದು ದಿನ ತನ್ನ ಕಾಲಾನಂತರದಲ್ಲಾದರೂ ಈ ಕನಸು ನನಸಾಗುತ್ತದೆ ಎಂಬ ಆಶಾವಾದ ವ್ಯಕ್ತಪಡಿಸಿದ್ದರು. ಹೆಚ್ಚು ಕಡಿಮೆ ಇದಾದ ನೂರು ವರ್ಷಗಳ ಬಳಿಕ ಶಿಕ್ಷಣ ಹಕ್ಕು ಕಾಯ್ದೆ ಜಾರಿಗೆ ಬಂದಿದೆ. ೧೯೧೭ರಿಂದ ಮೊದಲ್ಗೊಂಡು ೧೯೩೭ರ ತನಕ ಮುಂಬಯಿ, ಬಂಗಾಳ, ಬಿಹಾರ, ಪಂಜಾಬ್, ಮದ್ರಾಸ್, ಅಸ್ಸಾಂ, ಮೈಸೂರು ಮೊದಲಾದ ಪ್ರಾಂತ್ಯಗಳಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಕಾಯ್ದೆಗಳು ಜಾರಿಗೆ ಬಂದವು.

ಸ್ವಾತಂತ್ರ್ಯ ಪಡೆದ ನಂತರ, ೧೯೫೦ರಲ್ಲಿ ನಾವು ನಮ್ಮದೇ ಆದ ಸಂವಿಧಾನವನ್ನು ಮಾನ್ಯ ಮಾಡಿದಾಗ ನಿರ್ದೇಶಕ ಸೂತ್ರಗಳಡಿ ಬರುವ ೪೫ನೆಯ ವಿಧಿಯ ಅನ್ವಯ ಮುಂದಿನ ಹತ್ತು ವರ್ಷಗಳಲ್ಲಿ ದೇಶದಲ್ಲಿರುವ ಎಲ್ಲ ಮಕ್ಕಳಿಗೆ ೧೪ ವರ್ಷ ತುಂಬುವವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಸರಕಾರ ನೀಡುವುದು ಎಂಬುದನ್ನು ಅಳವಡಿಸಲಾಯಿತು. ಆದರೆ ೧೯೪೬–೪೭ರಲ್ಲಿ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಮೂಲಭೂತ ಹಕ್ಕುಗಳ ಪಟ್ಟಿಗೆ ಸೇರಿಸಲಾಗಿತ್ತು. ಆ ಪ್ರಕಾರ ಪ್ರತಿಯೊಬ್ಬ ನಾಗರಿಕನಿಗೂ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಪಡೆಯುವ ಹಕ್ಕು ಇದೆ. ಆದುದರಿಂದ ಸಂವಿಧಾನ ಜಾರಿಗೆ ಬಂದ ಮುಂದಿನ ಹತ್ತು ವರ್ಷಗಳಲ್ಲಿ ಈ ಗುರಿಯನ್ನು ಮುಟ್ಟುವುದು ಸರಕಾರದ ಜವಾಬ್ದಾರಿ ಎಂದು ವಾದಿಸಲಾಯಿತು. ಆದರೆ ಶಾಸನಸಭೆಯ ಸಲಹಾ ಸಮಿತಿಯು ಸರಕಾರಗಳ ಬಳಿಯಲ್ಲಿ ಹಣವಿಲ್ಲದಿದ್ದರೆ ಎಲ್ಲ ಮಕ್ಕಳಿಗೆ ಶಿಕ್ಷಣ ಕೊಡುವುದು ಸಾಧ್ಯವಿಲ್ಲ ಎಂದು ಆಕ್ಷೇಪವೆತ್ತಿ ಶಿಕ್ಷಣವನ್ನು ಮೂಲಭೂತ ಹಕ್ಕಾಗಿ ಮಾಡಬೇಕೆಂಬ ಪ್ರಸ್ತಾಪವನ್ನು ತಿರಸ್ಕರಿಸಿತು. ಹೀಗಾಗಿ ಅದು ಮುಂದೆ ನಿರ್ದೇಶಕ ಸೂತ್ರಗಳ ಪಟ್ಟಿಗೆ ಸೇರ್ಪಡೆಗೊಂಡಿತು. ಇದರ ಪರಿಣಾಮವಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಹಣಕಾಸಿನ ದುಸ್ಥಿತಿಯನ್ನು ಮುಂದೊಡ್ಡಿ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಗುರಿ ದಿನಾಂಕಗಳನ್ನು ಮುಂದೂಡುತ್ತಲೇ ಬಂದವು.

ಮುಂದೆ 'ಸರ್ವ ಶಿಕ್ಷಾ ಅಭಿಯಾನ' ಜಾರಿಗೆ ಬಂದಮೇಲೆ ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣಕ್ಕೆ ಹೊಸ ನೆಗೆತ ಲಭಿಸಿತು. ಸಂವಿಧಾನಕ್ಕೆ ಮಾಡಿದ ೮೬ನೆಯ ತಿದ್ದುಪಡಿಯ ದೆಸೆಯಿಂದಾಗಿ ಶಿಕ್ಷಣ ಮೂಲಭೂತ ಹಕ್ಕು ಆಗಿ ಮಾರ್ಪಟ್ಟು ಅಂತೂ ೨೦೧೦ರಲ್ಲಿ ಅದು ಕಾಯ್ದೆಯಾಗಿ ಜಾರಿಗೆ ಬಂದಿತು.

**ಸದ್ಯದ ಸ್ಥಿತಿ**

ಶಿಕ್ಷಣ ಹಕ್ಕು ಕಾಯ್ದೆ ಜಾರಿಗೆ ಬಂದು ಮೂರು ವರ್ಷಗಳು ಕಳೆದಿವೆ. ಈ ಮೂರು ವರ್ಷಗಳಲ್ಲಿ ನಮ್ಮ ಸಾಧನೆ ನಿರೀಕ್ಷಿಸಿದ ಮಟ್ಟದಲ್ಲಿದೆಯೆ? ಇಂದಿಗೂ ನಿನ್ನೆಗೂ ನಡುವೆ ಏನಾದರೂ ವ್ಯತ್ಯಾಸ ಕಂಡುಬಂದಿದೆಯೆ? ಎಂಬ ಪ್ರಶ್ನೆಗಳು ಪರಿಣತರನ್ನು ಕಾಡುತ್ತಿವೆ. ಮಸೂದೆ ಸೂಚಿಸಿದ ಗುರಿಗಳನ್ನು ಹಲವು ನೆಲೆಗಳಲ್ಲಿ ತೃಪ್ತಿಕರವಾಗಿ ಸಾಧಿಸಲಾಗಿದೆ. ಪ್ರಾಥಮಿಕ ಶಿಕ್ಷಣದ ಸುಧಾರಣೆಗಾಗಿ ಭಾರಿ ಪ್ರಮಾಣದಲ್ಲಿ ಕೇಂದ್ರ ಸರಕಾರ ಧನ ವಿನಿಯೋಗ ಮಾಡಿದೆ. ಕೆಲವೊಂದು ರಾಚನಿಕ ಬದಲಾವಣೆಗಳಾಗಿವೆ. ಭರವಸೆ ಹುಟ್ಟಿಸುವಂಥ ಕಾರ್ಯಗಳು ನಡೆದಿವೆ; ಆದರೂ ಸಮತೆ ಹಾಗೂ ಗುಣಮಟ್ಟದ ನೆಲೆಯಲ್ಲಿ ಪ್ರತಿ ಮಗುವಿಗೂ ದಕ್ಕಬೇಕಾದ ಶಿಕ್ಷಣದ ಹಕ್ಕು ಕಾಯ್ದೆಯ ಅನುಷ್ಠಾನ ಭಾರಿ ನಿರಾಸೆ ಮೂಡಿಸಿದೆ.

ವಾಗ್ವಾದಗಳು, ವಿವಾದಗಳು ಮಡುಗಟ್ಟಿವೆ. ಪ್ರಯತ್ನಶೀಲತೆ ಹಾಗೂ ಸಂಕಲ್ಪ ಬಲದ ಕೊರತೆ ಮತ್ತು ಸಾರ್ವಜನಿಕ ಜಾಗೃತಿಯ ಅಭಾವ ಎದ್ದು ಕಾಣುತ್ತಿವೆ.




# – ಅದಲು ಬದಲು –



ನಮ್ಮಿಬ್ಬರ ಗೆಳೆತನಕ್ಕೆ ಬಾಲ್ಯ ಮುನ್ನುಡಿ ಕೊಟ್ಟರೂ
ಹತ್ತಿರ ತಂದು ದೂರಮಾಡದೆ ನೆನಪು ಉಕ್ಕಿದ್ದು
ಶಾಲೆಯಲ್ಲಿ ಪಕ್ಕಪಕ್ಕ ಕುಳಿತು ಮಾತಿಗೆ ಚಾಲನೆ ಕೊಟ್ಟಾಗ
ನೀನು ಸಂಧ್ಯಾವಂದನೆ ಗಾಯತ್ರಿ ಮಂತ್ರವೆಂದು ಪಠಿಸುತ್ತಿದ್ದೆ
ನಾನು ಐದು ಹೊತ್ತಿನ ನಮಾಜಿಗೆ ಬುರ್ಖಾ ಹಾಕಿಕೊಂಡಿದ್ದೆ
ಮಾತಿಗೆ ಮಾತು
ಧಾತುಗೆ ಧಾತು ಬೆರೆತು
ಚಲನೆ ಸಿಕ್ಕಿ ಹೂ ಅರಳಿತು
ಸೈಕಲ್ಲೇರಿ ಕಾಲೇಜಿಗೆ ಲಗ್ಗೆಯಿಟ್ಟರೆ
ಹುಡುಗರ ಕಣ್ಣು ಕಾಲುಂಗುರ ನುಣುಪು ಚರ್ಮಕ್ಕೆ ದಗ್ಧ
ಮುಟ್ಟು ರಗಳೆಗಳ ಯಾತನೆ
ತಪ್ಪದೆ ಬರುವ ಮಾಹೆಯ ಜಿಗಿತ
ರಕ್ತ ಬಸೆದು ಬನ ಬೆಸೆದು ಆತ್ಮದಲ್ಲಿ ಮರುಹುಟ್ಟು ಪಡೆದು,
ಬಚ್ಚಲು ಮನೆಯ ಜಗತ್ತು ನಮಗೆ ಮಹಾಕಾವ್ಯಗಳು
ಲೆಕ್ಕವಿಡದ ಮುಟ್ಟಿಗೆ ಅಮ್ಮನ ಗೋಣು
ಎಚ್ಚರಿಕೆ ನೀಡಿತೇ ವಿನಃ
ಜೀವನದ ಸರಳಸೂತ್ರ ಧ್ವನಿಸಲಿಲ್ಲ
ನಾವು ಮೂರು ಜನರು ಹೆಂಗಸರೇ
ಮಾತಿಗೆ ಮಾತು ತೂಕಬಂದು
ವಯಸಿಲ್ಲದ ಋತುವಿನಂತೆ
ನಿನ್ನ ಗೊಣಗು ನನ್ನಲ್ಲಿ ಆತಂಕದ ಹುಣ್ಣು
ಅಮ್ಮನ ಮಡಿಲಿಗೆ ನೀನು ನಾಲ್ಕನೆಯ ಬೆಂಕಿ
ನಾನು ಅಪ್ಪನ ಮುದ್ದಿನ ಬೆಕ್ಕು
ಒಳಗೊಳಗೆ ತಾಯ್ತನದ ಹುಂಬು
ಬಿಡದೆ ಬಾಳುವ ಸೂರ್ಯಭೂಮಿಯಂತೆ
ಪ್ರಕೃತಿ ಋತುವಿನಂತೆ
ಸಾವು ಬದುಕಿನ ವಾಸ್ತವದಂತೆ
ಗಳಿಸಿ ಉಳಿಸಿ ದಕ್ಕಿದ್ದು, ಹಸುರೆಲೆಗೆ ಯೌವ್ವನ
ಅಲ್ಲೋ ಬಂದೂಕಿನ ಶಬ್ದಗುಡುಗು
ಇಲ್ಲೋ ಗರ್ಭಿಣಿ ಹೊಟ್ಟೆ ಸೀಳಿ ಭ್ರೂಣ ಅಂತ್ಯ
ದಾರಿ ದಾರಿಯಲ್ಲಿ ಮುಸುಕಿನ ಮಲ್ಲಯುದ್ಧ
ಬುದ್ಧನಿಂದ ಬಸವಣ್ಣನ ತನಕ
ಹರಿತಕಾಲ ಹರಿದು ಬಿಸಾಡುತ್ತಿದೆ
ಕಾಲದ ಪ್ರೀತಿ ಮೆಲುದನಿಗೆ
ಯಾರ ಮೇಲೆ ಯಾರು ಸವಾರಿ
ಆಗ ಸೂರ್ಯ ಚೆಂದ
ಈಗ ಸೂರ್ಯ ನಡುಕ
ಇತ್ತೀಚೆಗೆ ಜೊತೆಯಲ್ಲಿ ಹೆಜ್ಜೆಹಾಕಲು ಭೂಮಿ ಕೆಂಡವಾಗಿದೆ
ಅದಕ್ಕೆ
ನಾನು ನೀನು ಬದಲಾಗೋಣ
ನೀನು ಬುರ್ಖಾ ತೊಟ್ಟು, ಹೊಸ ಗಾಳಿ ಸೇವಿಸಿ ನನ್ನ ಮನೆಗೆ ಹೋಗು
ನಾನು ಕುಂಕುಮವಿಟ್ಟು, ಗಾಯತ್ರಿ ಮಂತ್ರ ಪಠಿಸಿ ನಿನ್ನ ಮನೆಗೆ ಹೋಗುತ್ತೇನೆ
ನೀನು ಸಂಧ್ಯಾ
ನಾನು ಗುಲ್ಜಾರ್

**ಈಚನೂರು ಇಸ್ಮಾಯಿಲ್**, ತುಮಕೂರು

ಶಿಕ್ಷಣ ಹಕ್ಕು ಕಾಯ್ದೆಯ ಪ್ರಧಾನ ವಾಹಕವಾಗಿರುವ 'ಸರ್ವ ಶಿಕ್ಷಾ ಅಭಿಯಾನ'ಕ್ಕೆಂದು ಕೇಂದ್ರ ಸರಕಾರ ೨೦೧೩–೧೪ನೇ ಸಾಲಿಗೆ ರೂ. ೨೭,೨೫೮ ಕೋಟಿ ಮೀಸಲಿಟ್ಟಿದೆ. ಕಳೆದ ಒಂದು ದಶಕದಲ್ಲಿ ಮೂರೂವರೆ ಲಕ್ಷ ಶಾಲೆಗಳನ್ನು ತೆರೆಯಲಾಗಿದೆ. ಭಾರತದ ಗ್ರಾಮೀಣ ಜನತೆಯ ಶೇ. ೯೯ರಷ್ಟು ಮಂದಿಗೆ ಒಂದು ಕಿಲೋ ಮೀಟರ್ ವ್ಯಾಪ್ತಿಯಲ್ಲಿ ಪ್ರಾಥಮಿಕ ಶಾಲೆಗಳಿವೆ; ಆ ಮೂಲಕ 'ನೆರೆಹೊರೆಯ ಶಾಲೆ' ಪರಿಕಲ್ಪನೆ ಸಾಕಾರಗೊಂಡಿದೆ. ೨೦೦೯ರಿಂದ ೨೦೧೧–೧೨ರ ನಡುವೆ ೧೧ ಮಿಲಿಯ ಮಕ್ಕಳು ಶಾಲೆಗಳಲ್ಲಿ ನೋಂದಣಿ ಆಗಿದ್ದಾರೆ. ಇಷ್ಟಾದರೂ ಹಲವಾರು ಕೊರತೆಗಳು ನಮ್ಮ ಮುಖಕ್ಕೆ ರಾಚುತ್ತಿವೆ. ಇನ್ನೂ ಎಂಟು ಮಿಲಿಯ ಮಕ್ಕಳು ಶಾಲೆಗಳಿಂದ ಹೊರಗೆ ಉಳಿದಿದ್ದಾರೆ! ಇವರನ್ನು ಇವರ ಪ್ರಾಯಕ್ಕೆ ತಕ್ಕಂತೆ ತರಗತಿಗಳಿಗೆ ತಂದು ತುಂಬುವುದು ದೊಡ್ಡ ಸಾಹಸವೇ ಸರಿ. ಈ ನಡುವೆ ಎಂಟನೆಯ ತರಗತಿ ಮುಗಿಸುವುದರೊಳಗೆ ಮಿಲಿಯಗಟ್ಟಲೆ ಮಕ್ಕಳು ಅರ್ಧದಲ್ಲೇ ಶಾಲೆಗಳನ್ನು ಬಿಟ್ಟು ಬಾಲಕಾರ್ಮಿಕರಾಗುತ್ತಿದ್ದಾರೆ. ಬಾಲಕಾರ್ಮಿಕ ನಿಷೇಧ ಕಾಯ್ದೆ ಜಾರಿಯಲ್ಲಿದ್ದರೂ ನಿರೀಕ್ಷಿತ ಪ್ರಮಾಣದಲ್ಲಿ ಸುಧಾರಣೆಗಳಾಗುತ್ತಿಲ್ಲ.

ಶಾಲೆಗಳ ಮೂಲಭೂತ ಸೌಕರ್ಯಗಳ ಸುಧಾರಣೆಯ ನಿಟ್ಟಿನಲ್ಲಿ ಕಳೆದ ಒಂದು ದಶಕದಲ್ಲಿ ಗಮನಾರ್ಹ ಪ್ರಗತಿ ಆಗಿದ್ದರೂ ಆಟದ ಮೈದಾನ, ಅಡುಗೆ ಕೋಣೆ, ಶಾಲಾ ಕಾಂಪೌಂಡ್, ವಿದ್ಯಾರ್ಥಿನಿಯರಿಗೆ ಪ್ರತ್ಯೇಕ ಶೌಚಾಲಯ, ಕುಡಿಯುವ ನೀರು, ವಿಕಲಚೇತನರಿಗೆ ವಿಶೇಷ ಸೌಲಭ್ಯ, ಇವುಗಳನ್ನು 'ಒಳಗೊಳ್ಳುವ ಶಿಕ್ಷಣ' ಇತ್ಯಾದಿ ವಿಷಯಗಳಲ್ಲಿ ಆಗಿರುವ ಪ್ರಗತಿ ನಿರಾಶಾದಾಯಕವಾಗಿದೆ.

ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು ೨೦೦೫ರ ಹಿನ್ನೆಲೆಯಲ್ಲಿ ವಿದ್ಯಾರ್ಥಿಸ್ನೇಹಿ, ಚಟುವಟಿಕೆ ಆಧಾರಿತ, ಭಾಗಿತ್ವದ ತರಗತಿಗಳನ್ನು ನಡೆಸುವುದು ಅನಿವಾರ್ಯ. ಆದರೆ ಬಹಳಷ್ಟು ಶಾಲೆಗಳಲ್ಲಿ ಇಂದಿಗೂ ಶಿಕ್ಷಕ ಆಧಿಪತ್ಯವೇ ಪ್ರಧಾನವಾಗಿದೆ. ದೇಹದಂಡನೆ ಹಾಗೂ ಮಾನಸಿಕ ಹಿಂಸೆಯನ್ನು ನಿಷೇಧಿಸಲಾಗಿದೆ. ಹೀಗೆ ಮಾಡುವ ಶಿಕ್ಷಕರು ತೀವ್ರ ಸ್ವರೂಪದ ಶಿಸ್ತು ಕ್ರಮ ಎದುರಿಸಬೇಕಾಗುತ್ತದೆ ಎಂಬ ಎಚ್ಚರಿಕೆ ಕೊಟ್ಟಿದ್ದರೂ ಪ್ರತಿನಿತ್ಯವೆಂಬಂತೆ ರಾಷ್ಟ್ರದ ವಿವಿಧ ಭಾಗಗಳಿಂದ ಹಲವು ಶಿಕ್ಷಕರ 'ಭಯೋತ್ಪಾದನೆ'ಯ ಕರಾಳ ವರದಿಗಳು ಬರುತ್ತಲೇ ಇವೆ!

ಶಿಕ್ಷಕರ ವೃತ್ತಿಪರತೆಯನ್ನು ಕಾಯ್ದೆ ಒತ್ತಿ ಹೇಳಿದೆಯಾದರೂ ಅನೇಕ ರಾಜ್ಯಗಳಲ್ಲಿ ವೃತ್ತಿಪರ ಅರ್ಹತೆ ಉಳ್ಳ ಶಿಕ್ಷಕರ ಪ್ರಮಾಣ ಶೇ. ೭೦ಕ್ಕಿಂತಲೂ ಕಡಿಮೆ ಇದೆ. ಬಿ.ಎಡ್, ಡಿ.ಎಡ್ ಮಾಡಿದ ಶಿಕ್ಷಕರಲ್ಲಿ ಬಹುಮಂದಿ ೨೦೧೨ರ ನವೆಂಬರ್ ತಿಂಗಳಿನಲ್ಲಿ ನಡೆಸಿದ 'ಕೇಂದ್ರೀಯ ಶಿಕ್ಷಕ ಅರ್ಹತಾ ಪರೀಕ್ಷೆ'ಯಲ್ಲಿ ಅನುತ್ತೀರ್ಣರಾಗಿರುವುದು ಇವರು ಪಡೆದಿರುವ ಶಿಕ್ಷಕರ ಶಿಕ್ಷಣದ ಗುಣಮಟ್ಟದ ಬಗ್ಗೆಯೇ ಗಂಭೀರ ಪ್ರಶ್ನೆಗಳನ್ನು ಎತ್ತುವಂತೆ ಮಾಡಿದೆ. ಶಿಕ್ಷಕರ ಪ್ರಶಿಕ್ಷಣ ಸಂಸ್ಥೆಗಳ ಗುಣಮಟ್ಟವಂತೂ ಕಳವಳಕಾರಿ ಸ್ವರೂಪದಲ್ಲಿ ಕುಸಿಯುತ್ತಲೇ ಇದೆ. ಶಿಕ್ಷಕರ ಸಿದ್ಧತೆಯ ಹಂತದಲ್ಲೇ ಅಕ್ರಮಗಳು ತಾಂಡವವಾಡುತ್ತಿವೆ!

ಮಕ್ಕಳ ನೋಂದಣಿ ಪ್ರಮಾಣದ ಗುರಿಯನ್ನು ಪ್ರತಿಶತ ಸಾಧಿಸಬಹುದು. ಆದರೆ ಎಂಟು ವರ್ಷಗಳ ವಿದ್ಯಾಭ್ಯಾಸದಲ್ಲಿ ಅವರೇನು ಕಲಿತರು? ಅವರ ಕಲಿಕೆಯ ಮಟ್ಟ ಹೇಗಿದೆ? ಎಂಬ ಪ್ರಶ್ನೆಗಳು ಗಂಭೀರವಾದುವು. ಕೊನೆಗೂ ಶಿಕ್ಷಣದ ಪ್ರಸ್ತುತತೆಯ ಮೌಲ್ಯಮಾಪನದಲ್ಲಿ ಕಲಿಕೆಯ ಗುಣಮಟ್ಟ ಮುಖ್ಯವೇ ಹೊರತು ಉತ್ತೀರ್ಣತೆ ಅಥವಾ ಅನುತ್ತೀರ್ಣತೆಯಲ್ಲ. ಎಂಟು ವರ್ಷಗಳ ಕಾಲ ಶಾಲೆಗಳಲ್ಲಿ ಕಲಿಯುವ ಮಕ್ಕಳು ಓದುಬರೆಹ, ಲೆಕ್ಕಕ್ಕೆ ಸಂಬಂಧಿಸಿದ ಮೂಲಭೂತ ಕೌಶಲಗಳನ್ನೇ ಕರಗತ ಮಾಡಿಕೊಂಡಿರುವುದಿಲ್ಲ. ಇದು ಎಲ್ಲ ಬಗೆಯ ಶಾಲೆಗಳಿಗೂ ಅನ್ವಯಿಸುವ ಮಾತು ಎಂಬುದನ್ನು ಹಲವಾರು ಸಮೀಕ್ಷಾ ವರದಿಗಳು ಸಾರಿ ಹೇಳುತ್ತಿವೆ. ಅಂಕಿ–ಅಂಶಗಳ ಪ್ರಕಾರ ಶಾಲೆಗಳಲ್ಲಿ ಕಲಿಸಲು ಶಿಕ್ಷಕರೇ ಇಲ್ಲ; ಇನ್ನು ಗುಣಮಟ್ಟದ ಮಾತೇನು? ಒಟ್ಟು ೧೨ ಲಕ್ಷ ಪ್ರಾಥಮಿಕ ಶಾಲಾ ಶಿಕ್ಷಕರ ಕೊರತೆ ನಮ್ಮ ಮುಂದಿದೆ. ಎಂಟು ಲಕ್ಷದ ಅರುವತ್ತು ಸಾವಿರ ಶಿಕ್ಷಕರು ಪ್ರಶಿಕ್ಷಣವನ್ನು ಪಡೆದುಕೊಂಡಿರುವುದಿಲ್ಲ! ಕಾಯ್ದೆ ಸೂಚಿಸಿರುವ ಪ್ರಕಾರ ವಿವಿಧ ರಾಜ್ಯಗಳ ಶಾಲೆಗಳಲ್ಲಿ ಶೇ. ೭೫ರಷ್ಟು ಹೆತ್ತವರ ಪ್ರತಿನಿಧಿಗಳಿಂದ ಕೂಡಿದ ಶಾಲಾ ನಿರ್ವಹಣಾ ಸಮಿತಿಗಳನ್ನೇ ರಚಿಸಲಾಗಿಲ್ಲ.

ಶೇ. ೨೫ರಷ್ಟು ಮೀಸಲಾತಿಗೆ ಸಂಬಂಧಿಸಿದಂತೆ ಖಾಸಗಿ ಅನುದಾನರಹಿತ ಶಾಲೆಗಳು ಕಾನೂನಿನ ಸಮರ ಹೂಡಿ ಸೋತು ಈಗ ಬಗೆಬಗೆಯಲ್ಲಿ ಪಾಲಕರನ್ನು ವಂಚಿಸುತ್ತಿವೆ. ಶಿಕ್ಷಣ ಹಕ್ಕು ಮಸೂದೆ ಅವುಗಳ ಪಾಲಿಗೆ 'ಬಿಸಿ ತುಪ್ಪ'ದಂತಾಗಿದೆ. ಉಗುಳುವಂತಿಲ್ಲ, ನುಂಗುವಂತಿಲ್ಲ! ಹಿಂದುಳಿದ ವರ್ಗಗಳ ಮಕ್ಕಳಿಗೆ ಪ್ರವೇಶ ನಿರಾಕರಿಸಲು ಹೊಸ ಹೊಸ ಯೋಜನೆಗಳನ್ನು ಹೊಸೆಯುತ್ತ ಸೋತು ಅಂಥ ಮಕ್ಕಳಿಗೆ ಪ್ರವೇಶ ಕೊಟ್ಟರೂ ಆ ಮಕ್ಕಳ ವಿಷಯದಲ್ಲಿ ತಾರತಮ್ಯ ನೀತಿ ಅನುಸರಿಸುತ್ತಿರುವ ಪ್ರಕರಣಗಳೂ ವರದಿಯಾಗಿವೆ. ಅನುದಾನ ರಹಿತ ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳು ಕಾಯ್ದೆಯ ವ್ಯಾಪ್ತಿಯಿಂದ ಪಾರಾದರೂ ಸರಕಾರಗಳ 'ಅಲ್ಪಸಂಖ್ಯಾತ' ಪರಿಕಲ್ಪನೆಯ ನಿರ್ವಚನದಲ್ಲಿ ಸಿಲುಕಿ ಪರದಾಡುತ್ತಿವೆ! ಆಡಳಿತ ಮಂಡಳಿಗಳು ಬಗೆಬಗೆಯಲ್ಲಿ 'ಅಲ್ಪಸಂಖ್ಯಾತ' ಹಣೆಪಟ್ಟಿಯ ಲಾಭ ಗಳಿಸಲು ಏನೇನೋ ಕಸರತ್ತು ಮಾಡುತ್ತಿವೆ.

ತುಲನಾತ್ಮಕವಾಗಿ ಗುಣಮಟ್ಟದ ಶಿಕ್ಷಣ ಎಂದು ಕಾಯ್ದೆ ಸೂಚಿಸಿದರೂ ಗುಣಮಟ್ಟದ ಪರಿಕಲ್ಪನೆ ಬಗೆಗೆ ಸಾಕಷ್ಟು ಗೊಂದಲಗಳು, ಪರಸ್ಪರ ಸಂಧಿಸಲಾರದ ವಿಭಿನ್ನ ನಿರ್ವಚನಗಳೂ ಇವೆ. ಬೋಧನೆಯ ಗುಣಮಟ್ಟ, ಶಿಕ್ಷಕರ ಗುಣಮಟ್ಟ ಹಾಗೂ ಕಲಿಕೆಯ ಗುಣಮಟ್ಟಗಳ ವಿಷಯದಲ್ಲಿ ವಿವಿಧ ರಾಜ್ಯಗಳ ನಡುವೆ, ವಿವಿಧ ಬಗೆಯ ಶಾಲೆಗಳ ನಡುವೆ ಏಕಸೂತ್ರತೆಯನ್ನು ಕಾಯ್ದೆಯ ಮೂಲಕ ಕಂಡುಕೊಳ್ಳುವುದು ಹುಚ್ಚು ಸಾಹಸವೇ ಸರಿ. ಪ್ರಶಿಕ್ಷಣದ ಹಂತ, ಶಿಕ್ಷಕರ ನೇಮಕಾತಿ, ಸೇವಾನಿರತ ಶಿಕ್ಷಣ ಹಾಗೂ ಶಾಲಾ ಹಂತದಲ್ಲಿ ತರಗತಿ ಬೋಧನೆ ಮುಂತಾದ ನೆಲೆಗಳಲ್ಲಿ ನಿರಂತರ ವಿಧಾಯಕ ಕಾರ್ಯಕ್ರಮಗಳ ಮೂಲಕ ಪರಿಸ್ಥಿತಿಯನ್ನು ಸುಧಾರಿಸಬಹುದೇನೋ.

ಇವೆಲ್ಲಕ್ಕೂ ಮಿಗಿಲಾಗಿ ಶಿಕ್ಷಣ ಹಕ್ಕು ಮಸೂದೆ ಬಗ್ಗೆ ಸರಕಾರಗಳು ಕೊಡಬೇಕಾದಷ್ಟು ಪ್ರಚಾರ ಕೊಟ್ಟಿಲ್ಲ ಎಂಬ ಗುರುತರ ಆರೋಪವೂ ಇದೆ. ಪ್ರಚಾರ ಕೊಟ್ಟರೆ ಸಾರ್ವಜನಿಕರು ಕೇಳುವ ನಾನಾ ಬಗೆಯ ಪ್ರಶ್ನೆಗಳಿಗೆ ಶಿಕ್ಷಣ ಇಲಾಖೆ ಹಾರಿಕೆಯ ಉತ್ತರ ಕೊಡಲು ಬರುವುದಿಲ್ಲ. ಉತ್ತರಗಳು ಕಾನೂನಿನ ಚೌಕಟ್ಟಿನಲ್ಲಿ ಖಚಿತವಾಗಿರಬೇಕು. ಕಾಯ್ದೆಯ ವಿವರಗಳು ಸಾರ್ವಜನಿಕರಿಗೆ ತಿಳಿದರೆ ಅವರು ಸರಕಾರಗಳ ಮೇಲೆ ನ್ಯಾಯಾಲಯಗಳಲ್ಲಿ ದಾವೆ ಹೂಡಿ ಮಕ್ಕಳ ಹಕ್ಕುಗಳನ್ನು ಖಾತ್ರಿಪಡಿಸಬಹುದೆಂಬ ಭಯ. ಹೀಗಾಗಿ ಸರಕಾರಗಳು ಕಾಯ್ದೆಯನ್ನು ಜಾರಿಗೊಳಿಸಿ ಅನುಷ್ಠಾನದ ಬಗ್ಗೆ ಹೆಚ್ಚೇನೂ ಕೆಲಸ ಮಾಡದಿರುವುದು ನಾಚಿಕೆಗೇಡಿನ ಸಂಗತಿ ಎಂದು ಸಂಶೋಧಕಿ ಕಿರಣ್ ಭಟ್ಟಿ ಅಭಿಪ್ರಾಯಪಡುತ್ತಾರೆ.

ಭಾರತದ ಪ್ರಾಥಮಿಕ ಶಿಕ್ಷಣದ ಇತಿಹಾಸದಲ್ಲಿ ಶಿಕ್ಷಣ ಹಕ್ಕು ಕಾಯ್ದೆ – ೨೦೦೯ ಚರಿತ್ರಾರ್ಹವಾದ ಹೆಜ್ಜೆ ಎಂಬುದು ನಿರ್ವಿವಾದದ ಸಂಗತಿ; ಆದರೆ ಶಿಕ್ಷಣದಲ್ಲಿ ಗುಣ, ಪ್ರಮಾಣ, ಸಮತೆ, ಸಮಾನತೆ ಮೊದಲಾದ ಕಾರಕಗಳನ್ನು ಪ್ರತಿಷ್ಠಾಪಿಸುವುದು ಕಾಯ್ದೆಯ ಮೂಲಕ ಎಷ್ಟರಮಟ್ಟಿಗೆ ಸಾಧ್ಯ ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ಕಾಯ್ದೆಗಳನ್ನು ಮೂಲ ಆಶಯಗಳಿಗೆ ತಕ್ಕಂತೆ ಜಾರಿಗೆ ತರದಿದ್ದರೆ ಅವು 'ಕಾಗದದ ಹುಲಿ'ಗಳಾಗಿ ಉಳಿಯುವ ದುರಂತಕ್ಕೆ ನಾವೆಲ್ಲ ಸಾಕ್ಷಿಯಾಗಿದ್ದೇವೆ. ಶಿಕ್ಷಣ ಹಕ್ಕು ಕಾಯ್ದೆ ಜನತೆಯ ಸಾಧನವಾದಾಗ ನಿಜಕ್ಕೂ ಶಿಕ್ಷಣದಲ್ಲಿ ಗುಣಾತ್ಮಕ ಪರಿವರ್ತನೆಗಳು ಆಗಲಿವೆ. ಆದರೆ ಒಂದಂತೂ ಸತ್ಯ. ಕಳೆದ ಮೂರು ವರ್ಷಗಳಲ್ಲಿ ಈ ಕಾಯ್ದೆ ಒಂದು ದೊಡ್ಡ ಸಂಕಥನವನ್ನೇ ಸೃಷ್ಟಿಸಿಬಿಟ್ಟಿದೆ. ಈ ಎಲ್ಲ ಚರ್ಚೆ, ವಾದ–ವಿವಾದ–ವಾಗ್ವಾದಗಳನ್ನು ಗಮನಿಸಿದವರ ಅನುಭವಕ್ಕೆ ಬರುವ ಮಾತೆಂದರೆ ಶಿಕ್ಷಣ ಹಕ್ಕು ಕಾಯ್ದೆ ಎಂಬುದು ಪಾತಾಳಗರಡಿ ಹಿಡಿದರೂ ತಳ ಸಿಗದ ಬಾವಿ!

***ಸೂಚನೆ :*** *ಶಿಕ್ಷಣ ಹಕ್ಕು ಕಾಯ್ದೆ ೨೦೦೯ ಭಾರತ ಸರಕಾರದ ಅಂತರ್ಜಾಲದಲ್ಲಿ ಲಭ್ಯ. ಅಂತೆಯೇ ಅದರ ಕನ್ನಡ ಆವೃತ್ತಿ ಕರ್ನಾಟಕ ಸರಕಾರದ ಅಂತರ್ಜಾಲ ತಾಣದಲ್ಲೂ ಲಭ್ಯ. ಆಸಕ್ತ ಪಾಲಕರು, ಪ್ರಜ್ಞಾವಂತರು ಹೆಚ್ಚಿನ ಮಾಹಿತಿಗಾಗಿ ಸಮೀಪದ ಕ್ಷೇತ್ರ ಶಿಕ್ಷಣಾಧಿಕಾರಿಗಳನ್ನು ಸಂಪರ್ಕಿಸಬಹುದು. ಮಕ್ಕಳ ಹಕ್ಕುಗಳ ಉಲ್ಲಂಘನೆಯಾದಲ್ಲಿ 'ಮಕ್ಕಳ ಸಹಾಯವಾಣಿ'ಯನ್ನಾಗಲಿ, ರಾಜ್ಯ ಮಕ್ಕಳ ಹಕ್ಕುಗಳ ಆಯೋಗದ ಅಧ್ಯಕ್ಷರನ್ನಾಗಲಿ ಸಂಪರ್ಕಿಸಬಹುದು.*

**ಡಾ॥ ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ॥ ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು
ಉಡುಪಿ – ೫೭೬ ೧೦೨



# ಹೆಣದ ಮುಂದೆ ಸೂತಕ ಮನಸ್ಸುಗಳು

"ನೀನು ನೋಡಿರೊ ಹುಡ್ಗ ಕೆಲಸದಾಗದಾನ್ಯೆ ? ಇದ್ರೆ, ಮದ್ವೆ ಮಾಡ್ಕ"... ಹೀಗೆ ಜಾತಿಗಳ ಹಂಗಿಲ್ಲದೆ ಬದುಕನ್ನು ಪ್ರ್ಯಾಕ್ಟಿಕಲ್ ಆಗಿ ನೋಡಲೆತ್ನಿಸಿದ ನನ್ನ ಅಜ್ಜಿ ಮೇ ತಿಂಗಳಲ್ಲಿ ತೀರಿಕೊಂಡರು. ಸಿರಾದಿಂದ ಅಜ್ಜಿಯ ಹೆಣವನ್ನು ನಮ್ಮೂರು ದಾಸರಹಳ್ಳಿಗೆ ಕೊಂಡೊಯ್ಯಬೇಕಾಯಿತು. ಟ್ರ್ಯಾವೆಲ್ಸ್ ಕಾರಿಗೆ ಕೇಳಿದಾಗ ಮೊದಲು ಬರುತ್ತೇನೆಂದು ಒಪ್ಪಿಕೊಂಡವ ನಂತರ 'ಡೆಡ್ ಬಾಡೀನಾ ? ಅಂದ್ರೆ ನಾವು ಹಾಕ್ಕೋಲ್ಲ' ಅಂತ್ಹೇಳಿದವರು ತಮ್ಮ ತಮ್ಮಲ್ಲೆ ಉರ್ದುವಿನಲ್ಲಿ ಮಾತಾಡಿಕೊಂಡು ಹಳೆ ಅಂಬಾಸಿಡರ್ ಕಾರಿಗೆ ಒಬ್ಬ ಮುದುಕ ಡ್ರೈವರ್‌ಅನ್ನು ಜೊತೆಮಾಡಿ ಕಳಿಸಿದರು. ಸಿರಾದಿಂದ ದಾಸರಹಳ್ಳಿಗೆ ತಲುಪುವಾಗ ಸಂಜೆ ೬ರಿಂದ ೭ ಗಂಟೆ ಆಗಿತ್ತು. ಅಲ್ಲಿಂದ ಹೊರಡುವಾಗಲೆ ನಾವು ಊರಿನ ಸಂಬಂಧಪಟ್ಟವರಿಗೆ ಎಲ್ಲಾ ಸಿದ್ಧತೆಯನ್ನು ಮಾಡಿಕೊಂಡಿರಲು ತಿಳಿಸಿದ್ದೆವು. ಊರಿಗೆ ಬಂದ ಮೇಲೆ ಹೆಣವನ್ನು ಮನೆಗೆ ಕೊಂಡೊಯ್ಯಲಾಗಲಿಲ್ಲ. ಏಕೆಂದರೆ ಊರಿನ ಹೊರಗೆ, ಅಂದರೆ ಬೇರೆ ಕಡೆ ಸತ್ತವರನ್ನು ಮನೆಗೆ ತರದೆ ಹಾಗೇ ಸತ್ತೋರ ಗುಡ್ಡೆಗೆ ತಗಂಡು ಹೋಗೋದು ಇಲ್ಲಿನ ತಾತಮುತ್ತಾತರ ಕಾಲದಿಂದ ನಡೆಸಿಕೊಂಡು ಬಂದ ಸಂಪ್ರದಾಯವಂತೆ. ಒಲ್ಲದ ಮನಸ್ಸಿನಿಂದಲೆ ನಾವು ಅಜ್ಜಿಯ ಹೆಣದೊಂದಿಗೆ ನೇರ ಸತ್ತೋರ ಗುಡ್ಡೆ ಹತ್ತಿರ ಹೋದೆವು. ಇನ್ನೂ ಯಾರ ಸುಳಿವೂ ಇರಲಿಲ್ಲ ಅಲ್ಲಿ. ಬರಬೇಕಾದವರಿಗೆ ಮತ್ತೆ ಫೋನುಗಳನ್ನು ಮಾಡಿ, ಕತ್ತಲೆ ಬಯಲಲ್ಲಿ ತಗೊಂಡುಹೋಗಿದ್ದ ಒಂದು ಗ್ಯಾಸ್ ಲೈಟ್‌ಅನ್ನು ಹಚ್ಚದೆ (ಮುಗಿದು ಹೋದರೆ ಬೇರೆ ಪರ್ಯಾಯವಿರಲಿಲ್ಲ, ಅಂಥ ಯಾವ ಸಹಾಯವನ್ನು ಆ ಹಳ್ಳಿಯಲ್ಲಿ ನಿರೀಕ್ಷಿಸುವಂತಿರಲಿಲ್ಲ. ಕಾರಣ ಅಲ್ಲಿಯವರಿಗೆ ಇಂಥ ಕೆಲಸಕ್ಕೆ ಸಹಾಯ ಮಾಡಿದರೆ ಎಲ್ಲಿ ಸೂತಕವಾಗಿ ಬಿಡುತ್ತೋ ಎಂಬ ಭಯ !) ಗುಂಡಿ ತೋಡುವವರ ಬರುವಿಕೆಗಾಗಿ ಕಾಯುತ್ತಿದ್ದೆವು. ಗುಂಡಿ ತೋಡುವವರು ಬೇರೆ ಯಾರೂ ಅಲ್ಲ, ಹಟ್ಟಿಯ ಅಣ್ಣತಮ್ಮಂದಿರೆ. ಸುಮಾರು ಒಂದು ಗಂಟೆ ಕಾಲ ಕಾದರೂ ಯಾರ ಸುಳಿವೂ ಇರಲಿಲ್ಲ. ಇತ್ತ ಕಾರಿನವ 'ನಿಮ್ಮವರೆ(ಹಿಂದುಗಳೆ) ಹೀಗೆ' ಎನ್ನುತ್ತ, "ಹೆಣಾನಾ ಇಳಿಸ್ಕಳಿ. ನಾನು ಹೋಗ್ಬೇಕು. ಲೇಟ್ ಆಗುತ್ತೆ" ಎಂದು ಒತ್ತಾಯಪಡಿಸುತ್ತಿದ್ದ.

ಮುಂದೇನು ಎಂಬ ಚಿಂತೆಯಲ್ಲಿ ಗುಂಡಿ ಸಿದ್ಧವಾಗುವವರೆಗೂ ಅಜ್ಜಿಯ ಹೆಣವನ್ನು ಮನೆ ಹತ್ತಿರವೇ ತಗಂಡು ಹೋಗಾನ ಎಂದುಕೊಂಡು ವಾಪಸ್ಸು ಮನೆ ಕಡೆ ಹೋದೆವು. ಅಷ್ಟರಲ್ಲಿ ಈ ವಿಚಾರ ತಿಳಿದು ಅಲ್ಲಿಗೆ ಹಟ್ಟಿಯ ಯಜಮಾನ ಬಂದು, "ಊರಿಂದ ವರ್ಗೆ ಸತ್ರೆ ಹೆಣಾನಾ ಹಟ್ಟಿ ಒಳ್ಗೆ ತಂದ್ರೆ ದಂಡ ಕಟ್ಬೇಕಾತ್ತೈದೆ" ಎಂದು ಎಚ್ಚರಿಸಿದ. ನಾವೂ ಸ್ವಲ್ಪ ಜೋರಾದೆವು. "ಎಲಾ ಇವುನ ? ನಮ್ಮಜ್ಜಿ ಹೆಣಾನಾ ನಮ್ಮನೆ ಬಾಗ್ಲಿಗೆ ಹಾಕ್ಕೊಂಡ್ರೆ ಇವಂದೇನು ? ದಂಡ ಕಟ್ಟಿದರೆ ಎಣಿಸ್ಕಮಕೆ ಬತ್ತತೇನು ? ಕೇಳ್ಲಾ ಅವ್ನ ?" ಎಂದು ಎಗರಾಡಿದೆವಷ್ಟೆ. ಅಷ್ಟ್ರಲ್ಲಿ ದಾಯಾದಿ

**ಡಾ|| ಸುಮಂಗಳಾ ಎಲ್.**

ನಮ್ಮ ಹಟ್ಟಿಯ ಇತಿಹಾಸದಲ್ಲೆ ಮೊದಲ ಬಾರಿಗೆ ಇರಬೇಕು ನಾನು ನಮ್ಮಜ್ಜಿಯ ಹೆಣವನ್ನು ಹೊರಲು ಹೆಗಲು ಕೊಟ್ಟಿದ್ದು. ಹಾಲು ನೀರು ಆದ ನಂತರ 'ಹೆಗಲು ಇಳಸುವ' ಅಂದರೆ ಸೂತಕ ಕಳೆದುಕೊಳ್ಳುವ ಶಾಸ್ತ್ರ. ಅದೇನೆಂದರೆ ಹೆಗಲು ಕೊಟ್ಟವರು ಒನಕೆಗಳ ಮೇಲೆ ನಿಂತುಕೊಂಡರೆ ಹಟ್ಟಿಯ ಯಜಮಾನ ಗೋಮೂತ್ರ ಸಿಂಪಡಿಸುತ್ತಾನೆ, ಮತ್ತ್ಯಾರೊ ತಲೆಯ ಮೇಲೆ ನೀರು ಸುರಿಯುತ್ತಾರೆ. ನಾವು ಸ್ನಾನಮಾಡಿಕೊಳ್ಳಬೇಕು. ಇಂಥ ಸ್ನಾನಕ್ಕೆ ನಾನು ಒಪ್ಪಲಿಲ್ಲ. ''ಬೆಳಗ್ಗೇನೆ ಸ್ನಾನ ಮಾಡಿದ್ದೀನಿ. ಈಗ ತಿರುಗ ಮಾಡಲ್ಲ'' ಎಂದರೂ ಕೇಳದೆ, ''ನಿನ್ಗೆ ಇದೆಲ್ಲಾ ಗೊತ್ತಾಗಲ್ಲ. 'ದ್ರೋಷ' ಅದು. ಸುಮ್ಕೆ ಎದ್ದೋಗಿ ನೀರಾಕ್ಯಂಡು ಬಾ. ಹಿಂದ್ನಿಂದ ನಡ್ಕಂಡು ಬಂದೈತೆ'' ಅಂದದಕ್ಕೆ ಅದನ್ನು ಪ್ರತಿಭಟಿಸಲಿಕ್ಕಾಗದೆ ಮುಖ ತೊಳೆದು ಕಾಲಿಗೆ ನೀರು ಹಾಕ್ಕೊಂಡು ಬಂದೆ. ಇದನ್ನು ಗಮನಿಸಿದವರೊಬ್ಬರು, ''ಸುಮ, ನೀನು ನೀರು ಹಾಕ್ಯಂಬ್ಲಿಲ್ವೆ ?'' ಅಂತ ಕೇಳದರು. ಇಲ್ಲ ಅಂದೆ. ''ನಿನಗೇನು ಗೊತ್ತಾಗುತ್ತೆ ? ಪಾಪ ಏನೂ ತಿಳಿಯುವುದಿಲ್ಲ'' ಅನ್ನುವ ಮುಖಭಾವನೆ ವ್ಯಕ್ತಪಡಿಸಿದರು.

ದೊಡ್ಡಪ್ಪ ಬಂದು, "ನಿಮ್ಮಿಷ್ಟ ಬಂದಂಗೆ ಮಾಡ್ಕಮಂಗಿದ್ರೆ ಏನಾದ್ರು ಮಾಡ್ಕಳ್ಳಿ, ನಾವು ಅಣ್ಣತಮ್ಮಂದಿರ್‍ಯಾರೂ ಬರಲ್ಲ" ಎಂದು ಒದರಾಡುತ್ತ ಹೋದ. ಆತನ ಹಿಂದೆಯೇ ಬಂದ ದಾಯಾದಿ ಅಣ್ಣ, "ಏನ್ರಮ್ಮಣ್ಣಿ, ಇಷ್ಟೊತ್ತಾಗೆ ಬಂದು ಇಂಗಾಡ್ತಿದ್ದೀರಾ ? ಸುಮ್ಕಿರ್ರಿ, ನಮ್ಗೆ ವಿಷಯ ಗೊತ್ತಾಗಿದ್ದೆ ಸಂಜೆ ಹೊತ್ತ್ನಾಗೆ. ಕೆಲ್ಸಕ್ಕೋದೋರು ಎಲ್ಲಾ ಈಗ ಬಂದು ಉಂಬ್ತಾ ಕುಂತವ್ರೆ, ಇನ್ನೇನು ಆತು. ಎಲ್ರೂ ಬತ್ತಾರೆ, ಹೆಣಾನಾ ಗುಡ್ಡೆಗೆ ತಗಂಡು ನಡೀರಿ" ಎಂದು ಸಿಡುಕುತ್ತ ಹೋದ.

"ಎಲ್ಲಾ ದಾನಕ್ಕಿಂತ ಮಹಾದಾನ 'ನಿಧಾನ' (ಸಮಾಧಾನ)" ಎಂದೆನ್ನುತ್ತಿದ್ದರು ಅಜ್ಜಿ. ಅಕ್ಷರಶಃ ಹೀಗೆ ಬದುಕಿದ ಅಜ್ಜಿ ಸತ್ತಮೇಲೂ ಅದನ್ನೇ ಪಾಲಿಸುವಂತಾಯ್ತು. ಪಾಪ ಅಜ್ಜಿಯ ಹೆಣ ಅವರುಗಳು ಉಂಡು ಬರೋವರೆಗೂ ಕಾಯ ಬೇಕಾಯ್ತು. ಸರಿ, ಮತ್ತೆ ಡ್ರೈವರ್‌ನನ್ನು ಪುಸಲಾಯಿಸಿ ಸತ್ತೋರ ಗುಡ್ಡೆಗೆ ತಗೊಂಡು ಹೋಗಿ ಹೆಣವನ್ನಿಳಿಸಿ ಗ್ಯಾಸ್ ಲೈಟ್ ಹೊತ್ತಿಸಿ ಕಾಯ್ಕೊಂಡು ಇರುವಾಗಲೆ ಗುಂಡಿ ತೋಡುವವರ ದಂಡು ಬಂತು. ಗುಂಡಿ ಸಿದ್ಧವಾಗುವಷ್ಟರಲ್ಲಿ ರಾತ್ರಿ ೧೦ ಗಂಟೆಯಾಗಿ ಬರುವವರಿಗಾಗಿ ಕಾದು ಮಣ್ಣು ಮುಚ್ಚೋದ್ರೊಳಗೆ ರಾತ್ರಿ ಇನ್ನೂ ೧೨ ಗಂಟೆ ದಾಟಿರಲಿಲ್ಲ. ಕಾರಣ ಅವತ್ತು ಸೋಮವಾರ. "ಒಳ್ಳೇ ವಾರ. ಬೆಳಕರದ್ರೆ ಮಂಗ್ಳಾರ ದಿನ ಸೆನಾಕಿಲ್ಲ, ಇವತ್ತು ಎಷ್ಟೊತ್ತನಾಗ್ಲಿ ಮಣ್ಣು ಮಾಡ್ಲೇಬೇಕು" ಎಂದು ಹಠಕ್ಕೆ ಬಿದ್ದವರಂತೆ ಮಾಡಿ ಮುಗಿಸಿದರು. ಮಣ್ಣು ಮಾಡುವ ಈ ಪ್ರಸಂಗವಾದ ಮೇಲೆ ಮಂಗಳವಾರ ಕಳೆದು ಬುಧವಾರ ಮೂರನೇ ದಿನಕ್ಕೆ ತಿಥಿಯನ್ನು ಏರ್ಪಡಿಸಿದರು. ಇನ್ನು 'ಈ ತಿಥಿ ಊಟವನ್ನು ಬಂದವರ್‍ಯಾರೂ 'ಸೂತಕ' ಅಂತ ತಿಂಬಲ್ಲ. ಅದ್ಕೆ ಬ್ಯಾರೆ ಕಡೆ




ಮಾಡಸ್ಬೇಕು' ಅಂದದಕ್ಕೆ, ತಿಥಿಗೆಂದು ತಂದ ದಿನಸಿಯಲ್ಲೆ ಬೇರೆ ಕಡೆ ಅಡಿಗೆ ಮಾಡಿಸಿದ್ದಾಯಿತು. ಇನ್ನೂ ಕೆಲವರಿಗೆ ಬೇರೆ ಕಡೆ ಮಾಡಿದ ಅಡಿಗೆಯು 'ಸೂತಕವಾಗುತ್ತೆ' ಎಂದು ಕೊಂಡು ಅಲ್ಲೂ ಊಟ ಮಾಡದೆ ಹೊರಟು ಹೋದರು.

ನಮ್ಮ ಹಟ್ಟಿಯ ಇತಿಹಾಸದಲ್ಲೆ ಮೊದಲ ಬಾರಿಗೆ ಇರಬೇಕು ನಾನು ನಮ್ಮಜ್ಜಿಯ ಹೆಣವನ್ನು ಹೊರಲು ಹೆಗಲು ಕೊಟ್ಟಿದ್ದು. ಹಾಲು ನೀರು ಆದ ನಂತರ 'ಹೆಗಲು ಇಳಿಸುವ' ಅಂದರೆ ಸೂತಕ ಕಳೆದುಕೊಳ್ಳುವ ಶಾಸ್ತ್ರ. ಅದೇನೆಂದರೆ ಹೆಗಲು ಕೊಟ್ಟವರು ಒನಕೆಗಳ ಮೇಲೆ ನಿಂತುಕೊಂಡರೆ ಹಟ್ಟಿಯ ಯಜಮಾನ ಗೋಮೂತ್ರ ಸಿಂಪಡಿಸುತ್ತಾನೆ, ಮತ್ತ್ಯಾರೊ ತಲೆಯ ಮೇಲೆ ನೀರು ಸುರಿಯುತ್ತಾರೆ. ನಾವು ಸ್ನಾನಮಾಡಿ ಕೊಳ್ಳಬೇಕು. ಇಂಥ ಸ್ನಾನಕ್ಕೆ ನಾನು ಒಪ್ಪಲಿಲ್ಲ. "ಬೆಳಿಗ್ಗೇನೆ ಸ್ನಾನ ಮಾಡಿದ್ದೀನಿ. ಈಗ ತಿರುಗ ಮಾಡಲ್ಲ" ಎಂದರೂ ಕೇಳದೆ, "ನಿನ್ಗೆ ಇದೆಲ್ಲಾ ಗೊತ್ತಾಗಲ್ಲ. 'ದ್ರೋಷ' ಅದು. ಸುಮ್ಕೆ ಎದ್ದೋಗಿ ನೀರಾಕ್ಕಂಡು ಬಾ. ಹಿಂದ್ನಿಂದ ನಡ್ಕಂಡು ಬಂದ್ಯೆತೆ" ಅಂದದಕ್ಕೆ ಅದನ್ನು ಪ್ರತಿಭಟಿಸಲಿಕ್ಕಾಗದೆ ಮುಖ ತೊಳೆದು ಕಾಲಿಗೆ ನೀರು ಹಾಕ್ಕೊಂಡು ಬಂದೆ. ಇದನ್ನು ಗಮನಿಸಿದವ ರೊಬ್ಬರು, "ಸುಮ, ನೀನು ನೀರು ಹಾಕ್ಯಂಬಿಲ್ವೆ ?" ಅಂತ ಕೇಳಿದರು. ಇಲ್ಲ ಅಂದೆ. "ನಿನಗೇನು ಗೊತ್ತಾಗುತ್ತೆ ? ಪಾಪ ಏನೂ ತಿಳಿಯುವುದಿಲ್ಲ" ಅನ್ನುವ ಮುಖಭಾವನೆ ವ್ಯಕ್ತಪಡಿಸಿದರು.

ನನಗೆ ಇದನ್ನೆಲ್ಲಾ ಹೇಳಿಕೊಳ್ಳುವ ತುರ್ತು ಏಕೆಂದರೆ ಮೌಢ್ಯದ ಪರಮಾವಧಿಯಿಂದ ತತ್ತರಿಸುತ್ತಿರುವ ಇಂಥ ಕಂದಾಚಾರಗಳಿಂದ ಬಿಡಿಸಲು ಅಥವಾ ಸರಿ ಅಲ್ಲ ಅಂತ ಹೇಳಿಕೊಡಲೂ ಆಗದ ನಮ್ಮ ಬೌದ್ಧಿಕ ದಿವಾಳಿತನವೊ ? ಅಥವಾ ತಮ್ಮ ಅಜ್ಞಾನವನ್ನೆ ಜ್ಞಾನದ ತುತ್ತ ತುದಿ ಎಂದು ಭಾವಿಸಿರುವ ಅವರ ತಲೆತಲಾಂತರದ ಮೌಢ್ಯವನ್ನು ಮುಂದುವರಿಯಲು ಅನುವು ಮಾಡಿಕೊಡುತ್ತಿದ್ದೇವೆಯೊ ? ಎಂಬ ಗೊಂದಲದಲ್ಲಿರುವುದರಿಂದ ಅವರ ಈ ಕಂದಾಚಾರಗಳ 'ತಿಳುವಳಿಕೆಯ' ಮುಂದೆ ನಮ್ಮ ಅಲ್ಪ ಓದಿನ ಪ್ರಜ್ಞೆಯು ಕೇವಲವಾಯಿತೆ ? ಹತ್ತಿಕ್ಕಲಾರದ ಇಂಥ ಆಚರಣೆಗಳನ್ನು ನಮಗೂ ಪಾಲಿಸುವಂತೆ ಒತ್ತಾಯಪಡಿಸುವುದು, ಅವರ ಒತ್ತಾಯವನ್ನು ಮೀರಲು ಆಗದೆ ಇರುವಂಥ ನಮ್ಮ ಮಿತಿಗಳನ್ನು ಯಾವಾಗ ಮೀರುವಂತಾಗುವುದು ? ಇದನ್ನು ಕೊನೆಗಾಣಿಸುವುದೆಂತು ? ಕಡೇ ಪಕ್ಷ ಅವರಿಗೆ ಅರ್ಥಮಾಡಿಸುವಷ್ಟು ಆಗದಿರುವ ನಮ್ಮ ತಿಳುವಳಿಕೆಯ ಅಸಹಾಯಕತೆ ಎಂಥ ದುರಂತದ್ದು ? ಎಂಬೆಲ್ಲಾ ಪ್ರಶ್ನೆಗಳಿಗೆ ಅಡ್ಡಗೋಡೆಯ ಮೇಲೆ ಇಟ್ಟ ದೀಪದ ಬೆಳಕಿನಂತೆ ಉತ್ತರಗಳು ಹಾದುಹೋದವಷ್ಟೆ.

ಆ ದಿನ ಮತ್ತೊಂದು ಮುಖ್ಯ ಸಂಗತಿ ನನ್ನ ಗಮನ ಸೆಳೆಯಿತು. ದಿವಸಕ್ಕೆಂದು ಬಂದ ದೊಡ್ಡಮ್ಮನವರ ಮಗ ಕೃಷ್ಣ ತಿಥಿ, ಪೂಜೆ ಆದ ನಂತರ ಕೊಡುವ ಫಲಾಹಾರವನ್ನು ಮುಟ್ಟಲಿಲ್ಲ. ಯಾಕೆಂದು ಅವರಮ್ಮನನ್ನು ಕೇಳಿದಾಗ, "ಏಸಪ್ಪಂಗೆ ನಡ್ಕಂಬ್ತಾ ಅವ್ರೆ, ನಮ್ದೇನ್ನೂ ಮುಟ್ಕಂಬಲ್ಲ" ಎಂದು ಅವರು ಹೇಳುತ್ತಿದ್ದಂಗೆ ಇತ್ತ ಕೃಷ್ಣ ಏನನ್ನೋ ಸಾಧಿಸಿದ್ದೇನೆಂಬ ವಿಜಯದ ಮುಗುಳ್ನಗೆಯನ್ನು ಮುಕ್ಕಳಿಸುತ್ತಿದ್ದ. ದಿಗ್ಭ್ರಮೆಯಾಗುವ ಸರದಿ ನನ್ನದಾಗಿತ್ತು. ಎಂದಿಗೂ ಹತ್ತಿಕ್ಕಲಾಗದಂತಹ ಕಂದಾಚಾರಗಳಲ್ಲಿ ಮುಳುಗಿಹೋದವರು ಮತ್ತೊಂದು ಕಂದಾಚಾರಕ್ಕೆ ಜೋತುಬೀಳಲು ಮುಂದಾಗುತ್ತಿರುವ ಮುಗ್ಧತೆಯನ್ನು ಕಂಡು ಮನಸ್ಸು ತೊಯ್ದಾಡಿತು.

ಡಾ॥ ಸುಮಂಗಳಾ ಎಲ್.
ಕನ್ನಡ ಉಪನ್ಯಾಸಕರು
ಸಿಎಂಆರ್ ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ಸ್ಟಡೀಸ್
ಕಲ್ಯಾಣನಗರ, ಹೆಚ್‌ಆರ್‌ಬಿಆರ್ ಬಡಾವಣೆ
ಬೆಂಗಳೂರು – ೫೬೦ ೦೪೩

## ಹೊಸತು ಜನವರಿ ಸಂಚಿಕೆ

ಈ ಸಲದ ವಿಶೇಷ ಸಂಚಿಕೆಯ ಓದುಗರ ವೇದಿಕೆಗೆ 'ಅಂಧಶ್ರದ್ಧೆ : ಕಾರಣ, ಪರಿಣಾಮ, ಹಾಗೂ ನಿರ್ಮೂಲನೆ' ವಿಷಯ ಕುರಿತು ಅಭಿಪ್ರಾಯಗಳನ್ನು ಆಹ್ವಾನಿಸಲಾಗಿದೆ. ಮಹಾರಾಷ್ಟ್ರದ ವಿಚಾರವಾದಿ ನರೇಂದ್ರ ದಾಭೋಲ್ಕರ ಅವರ ಹತ್ಯೆಯ ನಂತರ ಅಂಧಶ್ರದ್ಧೆ , ಮೌಢ್ಯಾಚರಣೆಗಳನ್ನು ಕಾನೂನಿನ ಮುಖಾಂತರ ನಿಯಂತ್ರಿಸುವ ಯತ್ನ ಹಲವಾರು ರಾಜ್ಯಗಳಲ್ಲಿ ನಡೆದಿದೆ. ಈ ಹಿನ್ನೆಲೆಯಲ್ಲಿ ವಿವಿಧ ಅಂಧಶ್ರದ್ಧೆಯ ಆಚರಣೆಗಳ ಹಿನ್ನೆಲೆಯ ಕಾರಣ, ಪರಿಣಾಮ ಹಾಗೂ ವೈಜ್ಞಾನಿಕ ಮನೋಭಾವನೆಯ ಹಿನ್ನೆಲೆಯಲ್ಲಿ ಅವುಗಳ ನಿರ್ಮೂಲನೆ ಕುರಿತು ಓದುಗರು ತಮ್ಮ ವಿಚಾರಗಳನ್ನು 'ಹೊಸತು' ವಿಶೇಷ ಸಂಚಿಕೆಯ ಓದುಗರ ವೇದಿಕೆಯಲ್ಲಿ ವ್ಯಕ್ತಪಡಿಸಲು ಕೋರುತ್ತೇವೆ.

ನಿಮ್ಮ ಅನಿಸಿಕೆಗಳು ೨೫೦ ಪದ ಮೀರದಿರಲಿ. ೨೫ ನವೆಂಬರ್ ೨೦೧೩ರೊಳಗೆ ಹೊಸತು ಕಾರ್ಯಾಲಯಕ್ಕೆ ತಲುಪುವಂತಿರಲಿ. ಆಯ್ದ ಲೇಖನಗಳನ್ನು ಪ್ರಕಟಿಸಲಾಗುವುದು.

–ಸಂ.

# ಚಾಪ್ಲಿನ್ ಕಂಡ ಮಹಾತ್ಮ

*(ಚಾರ್ಲಿ ಚಾಪ್ಲಿನ್ ಅವರ ಆತ್ಮಕಥೆ ಒಂದು ಸುಂದರ ಸಾಹಿತ್ಯ ಕೃತಿ. ೧೯೬೪ರಿಂದಲೂ ಹಲವು ಆವೃತ್ತಿಗಳಲ್ಲಿ ಹಲವು ಪ್ರಕಾಶಕರು ಇದನ್ನು ಪ್ರಕಟಿಸುತ್ತಲೆ ಇದ್ದಾರೆ. ಇತ್ತೀಚೆಗೆ ಇದು ಪೆಂಗ್ವಿನ್ ಪ್ರಕಾಶಕರಲ್ಲೂ ಲಭ್ಯ. ಇದು ಕನ್ನಡಕ್ಕೂ ಭಾಷಾಂತರವಾಗಬೇಕು. ಇಲ್ಲಿಯ ಲೇಖನ ಈ ಆತ್ಮಕಥೆಯನ್ನು ಆಧರಿಸಿದ್ದು)*

**ಚಾ**ರ್ಲಿ ಚಾಪ್ಲಿನ್ ಯಾರು ಅಂತ ಪರಿಚಯ ಮಾಡಿಸಬೇಕೆ ? ಅವನ ಆತ್ಮಕತೆ ೧೯೬೪ರಲ್ಲಿ ಪ್ರಕಟಿತವಾಯ್ತು. ಸಿನಿಮಾರಂಗದ ಮೂಕಿಯಿಂದ ಟಾಕಿಯವರೆಗಿನ ಅಪ್ರತಿಮ ವಿದೂಷಕನೆಂದೇ ಹೆಸರಾಂತ ಈತ ಸಿನಿಮಾರಂಗದ ಇತರರಂತೆ ಒಮ್ಮೆ ನೋಡಿ, ನಕ್ಕು ಮರೆಯುವ ವ್ಯಕ್ತಿಯಾಗದೆ ಅದಕ್ಕೆ ಮೀರಿದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳ ಮೇಲೂ ತನ್ನ ಛಾಪು ಮೂಡಿಸಿ ಬೆರಗುಗೊಳಿಸಿದವ. ಆತನು ಸಂಪರ್ಕ ಹೊಂದಿದ್ದ ಸಮಕಾಲೀನ ಸಾರ್ವಜನಿಕ ದಿಗ್ಗಜರುಗಳ ಪಟ್ಟಿ ವಿಸ್ಮಯ ಉಂಟುಮಾಡುತ್ತದೆ. ಚರ್ಚಿಲ್, ಡಿ. ಎಚ್. ವೆಲ್ಸ್, ಐನ್‌ಸ್ಟೈನ್, ಕ್ರುಶ್ಚೆವ್, ಚೌಎನ್‌ಲೈ, ಹಲವಾರು ಪ್ರಧಾನಿಗಳು, ಅಧ್ಯಕ್ಷರುಗಳು ಹೀಗೆ ಅವರೆಲ್ಲರೊಡನಾಡಿ, ಅವರ ಗೆಳೆತನವನ್ನು ಗಿಟ್ಟಿಸಿಕೊಂಡಿದ್ದ. ಆತ ಮಹಾತ್ಮ ಗಾಂಧೀಜಿಯವರನ್ನು ಜವಹರಲಾಲ್ ನೆಹರೂರವರನ್ನು ಭೇಟಿ ಮಾಡಿದ್ದ ಸಂದರ್ಭ ಆತ್ಮಕತೆಯಲ್ಲಿ ಪ್ರಸ್ತಾಪಿಸಲಾಗಿದ್ದು, ಇಲ್ಲೆಲ್ಲ ಚಾಪ್ಲಿನ್‌ಗಿಂತ ಹೆಚ್ಚಾಗಿ, ಈ ವ್ಯಕ್ತಿಗಳನ್ನು ಕುರಿತು ಅವನು ಮೂಡಿಸುವ ಚಿತ್ರ ನಮಗೆ ಪ್ರಸ್ತುತ. ಯುದ್ಧ, ಶಾಂತಿ, ಸ್ವಾತಂತ್ರ್ಯ, ಪ್ರಗತಿ, ಬಡತನ ನಿರ್ಮೂಲನ, ಆರ್ಥಿಕ ಬೆಳವಣಿಗೆ ಮುಂತಾದ ಸಮಕಾಲೀನ ತುಯ್ತಗಳ ಬಗ್ಗೆ ಅವನಿಗಿದ್ದ ನಿಖರವಾದ ತಿಳುವಳಿಕೆ ಮತ್ತು ಅನುಕಂಪಗಳು ಅಭಿಪ್ರಾಯಗಳು ಈಗಲೂ ಗಮನಾರ್ಹ.

೧೯೨೯–೩೦ರ ಸುಮಾರಿಗೆ ಚಾಪ್ಲಿನ್ ತನ್ನ ತಾಯ್ನಾಡು ಬ್ರಿಟನ್ನಿಗೆ ತನ್ನದೇ ಸಿನಿಮಾ ಪ್ರದರ್ಶನಗಳ ಕಾರ್ಯಕ್ರಮಗಳನ್ನು ಮುಂದಿಟ್ಟುಕೊಂಡು ಪ್ರವಾಸ ಬಂದಿದ್ದ ಕಾಲ. ಚರ್ಚಿಲ್ ಅಂದಿನ ಲೇಬರ್ ಪಕ್ಷದ ಆಡಳಿತದ ಮೇಲೆ, ಅವರ ಹಿಟ್ಲರನ ಜರ್ಮನಿ ಕುರಿತ ನೀತಿಯ ಮೇಲೆ ಕಿಡಿಕಾರುತ್ತಿದ್ದ ಕಾಲ. ಆಗಷ್ಟೆ ಗಾಂಧೀಜಿ ಮೊದಲ ಸುತ್ತಿನ ರೌಂಡ್ ಟೇಬಲ್ ಸಭೆಗೆ ಲಂಡನ್ನಿಗೆ ಬರುವವರಿದ್ದರು. ಗಾಂಧೀಜಿಯವರೊಡನೆ ಚಾಪ್ಲಿನ್ ಭೇಟಿಯನ್ನು ಕೆಲವು ಸಾಮಾನ್ಯ ಗೆಳೆಯರು ಏರ್ಪಡಿಸಿದ್ದರು. ಅದಕ್ಕೆ ಸ್ವಲ್ಪ ಮುಂಚೆ ಚರ್ಚಿಲನೊಡನೆ ಒಂದು ಔತಣ ಕೂಟದಲ್ಲಿ ಭಾಗಿಯಾಗಿದ್ದ ಸಂದರ್ಭ ಚಾಪ್ಲಿನ್ ನಮೂದಿಸಿದ್ದಾನೆ. ಆ ಕೂಟದಲ್ಲಿ ಯುವ ಪಾರ್ಲಿಮೆಂಟ್ ಸದಸ್ಯರಾಗಿದ್ದು ಲಾರ್ಡ್ ಬ್ರಾಕೆನ್ ಇದ್ದ. ಚಾಪ್ಲಿನ್ ಅವನೊಡನೆ ತಾನು ಆಗಷ್ಟೆ ಲಂಡನ್ನಿಗೆ ಬಂದಿದ್ದ ಗಾಂಧಿಯವರನ್ನು ಭೇಟಿಯಾಗುವುದಾಗಿ ಹೇಳಿದ. ಅದಕ್ಕೆ ಅವನು ಪ್ರತಿಕ್ರಿಯಿಸಿದ್ದು "ಈತನನ್ನು ನಾವು ಅಗತ್ಯಕ್ಕೆ ಮೀರಿ ಹಚ್ಚಿಕೊಂಡು ಬಿಟ್ಟಿದ್ದೇವೆ; ಉಪವಾಸ ಸತ್ಯಾಗ್ರಹ ಮಾಡಲಿ, ಬಿಡಲಿ; ಈತನನ್ನು ಬಂದೀಖಾನೆಗೆ ಕಳುಹಿಸಬೇಕು; ಅಲ್ಲಿಂದ ಆತನನ್ನು ಹೊರಗೆ ಬಿಡಬಾರದು. ನಾವು ಈ ಕುರಿತು ಸ್ಪಷ್ಟ ನಿಲುವನ್ನು ತಾಳದೆ ಹೋದರೆ, ನಾವು ಭಾರತವನ್ನು ಕಳೆದುಕೊಳ್ಳುವುದು ನಿಶ್ಚಯ" ಅವನ ಮಾತನ್ನು

**ಕೆ. ಎಸ್. ಪಾರ್ಥಸಾರಥಿ**



*ಗಾಂಧೀಜಿಯವರೊಡನೆ ಚಾರ್ಲಿ ಚಾಪ್ಲಿನ್ ಮತ್ತು ಸರೋಜಿನಿ ನಾಯ್ಡು, ಇತರರು*

# ಚಾಪ್ಲಿನ್ ಕಂಡ ಚಾಚಾ ನೆಹರು

ನೆಹರೂ ಅಂದರೆ – ಜವಹರಲಾಲ್ – ಚಾಚಾ ನೆಹರೂ ಅವರೊಬ್ಬ ಯಾವಾಗಲೂ ಚಡಪಡಿಸುವ, ಸ್ವಲ್ಪವೂ ವಿಶ್ರಾಂತಿ ಇಲ್ಲದೆ ಹಿಂದೂ ಮುಂದೂ ಎಲ್ಲೆಲ್ಲೂ ಏಕಕಾಲದಲ್ಲಿ ಓಡಾಡ ಬಯಸುತ್ತಿದ್ದ, ದಢಾಪಡ ವ್ಯಕ್ತಿ ಅಂತ ಆ ಕಾಲದಲ್ಲಿ ಅವರನ್ನು ಕಂಡಿದ್ದ ನನ್ನಂಥ ಎಳೆಯನಿಗೂ ಅನ್ನಿಸಿತ್ತು. ಇನ್ನೂ ಸ್ವಾತಂತ್ರ್ಯ ಬಂದೇ ಇರಲಿಲ್ಲ; ಆಗಲೇ ಬಂದಮೇಲೆ ಏನು ಮಾಡಬೇಕು ಅನ್ನುವ ತರಾತುರಿ. ಮೊದಲನೆಯ ಆರ್ಥಿಕ ಯೋಜನೆ ಮಾಡುತ್ತಿರುವಾಗಲೇ ಹತ್ತನೆಯ ಯೋಜನೆ ಹೇಗಿರಬೇಕೆಂಬ ಮುನ್ನೋಟದ ಹಂಬಲ. ಯಾರೋ ಒಬ್ಬ ವಿದೇಶಿ ಅತಿಥಿ ಬರುತ್ತಾನೆಂದರೆ ಅವರ ಸ್ವಾಗತ ಊಟ ಉಪಚಾರ ಮುಂತಾದ ವಿವರಗಳಿಗೆ ಅಷ್ಟೊಂದು ಜನರಿದ್ದರೂ ಎಲ್ಲವನ್ನೂ ವೈಯಕ್ತಿಕವಾಗಿ ಗಮನಿಸಿ, ನಿರ್ದೇಶಿಸುವ ಚಪಲ. ಆ ಕಾಲದ ಶಂಕರ್ಸ್ ವೀಕ್ಲಿ. ಕಾರ್ಟೂನ್ ಪತ್ರಿಕೆ ಈ ಚಿತ್ರವನ್ನು ಸುಂದರವಾಗಿ ಬಿಡಿಸಿತ್ತು. ಹೂದಾನಿಯಿಂದ ಹಿಡಿದು ಹಾರದವರೆಗೆ ಎಲ್ಲವೂ ಸರಿಯಾಗಿದೆಯೆ ಎಂದು ಪರೀಕ್ಷಿಸುತ್ತಾ ವಿಮಾನದ ಏಣಿಯ ಬಳಿ ಕೆಂಪು ಹಾಸನ್ನು ತಾವೇ ಬಿಚ್ಚಿ ಹರಡಿ, ನಂತರ ಅತಿಥಿಯೊಡನೆ ತಾವು ಕೈಹಿಡಿದು ಆ ಹಾಸಿನ ಮೇಲೆ ನಡೆಯುತ್ತಾ ಬರುವ ಸರಣಿ ಚಿತ್ರ ಬಿಡಿಸಿದ್ದರು ಶಂಕರ್. ವರ್ತಮಾನದ ಬಗ್ಗೆ ಮಾತನಾಡುತ್ತಾ, ಭವಿಷ್ಯದ ಚಿತ್ರಣಕ್ಕೆ ಮಾರುಹೋಗಿ, ಪ್ರಸ್ತುತವನ್ನು ಮರೆತರೇ ಅನ್ನುವಷ್ಟು ಆದರ್ಶವಾದಿ. ಪ್ರಧಾನಿಯಾಗಲು ಅವರು ನಾಲಾಯಕ್ಕು ಅಂತ ಹಲವರು ಈ ಕಾರಣಕ್ಕೆ ಹೇಳಿದ್ದೂ ಉಂಟು. ಆದರೆ ಅಂದಿನ ಆ ಪ್ರಾರಂಭಿಕ ಹುರುಪಿನ ಹುಮ್ಮಸ್ಸಿನಲ್ಲಿ ಅಂಥವರ ನಾಯಕತ್ವ ನಮಗೆ ದೊರೆತದ್ದು ನಮ್ಮ ಪುಣ್ಯ. ಭಾರತವನ್ನು ಪುನರ್ನಿರ್ಮಾಣ ಮಾಡುವ ತಮ್ಮ ಹುಚ್ಚನ್ನು ತನ್ನ ಸಮೀಪ ಬಂದವರಿಗೆಲ್ಲ ಹಂಚುವ ಆ ಸದಾ ಕನಸುಗಾರ ನಮಗೆ ದೊರೆತ ವರ.

ಚಾರ್ಲಿ ಚಾಪ್ಲಿನ್ ಸ್ವಿಟ್ಜರ್‌ಲೆಂಡ್‌ನಲ್ಲಿ ೧೯೫೦ರ ದಶಕದ ಪ್ರಾರಂಭದಲ್ಲಿ ಇದ್ದಾಗ, ನೆಹರು ಅಲ್ಲಿಯ ಲುಸರ್ನ್ ನಗರದಲ್ಲಿ ಯಾವುದೋ ರಾಯಭಾರಿಗಳ ಸಮ್ಮೇಳನಕ್ಕೆ ಹೋಗಿದ್ದರು. ಶ್ರೀಮತಿ ಮೌಂಟ್ ಬ್ಯಾಟನ್ ಸಲಹೆಯ ಮೇರೆಗೆ ಅಲ್ಲಿ ಚಾಪ್ಲಿನ್ ಮತ್ತು ನೆಹರು ಭೇಟಿಯಾಯ್ತು. ನೆಹರೂ ಚಾಪ್ಲಿನ್ ಅವರನ್ನು ತಾವು ಇರುವ ಬಳಿಗೆ ಬರಬೇಕೆಂತಲೂ, ನಂತರ ತಾವು ಅವರೊಡನೆ ಅವರ ಮನೆಗೆ ಬರುವುದಾಗಿಯೂ ಹೇಳಿಕಳುಹಿಸಿದ್ದರು. ಅದರಂತೆ ನೆಹರೂ ಕಳುಹಿಸಿದ್ದ ವಾಹನದಲ್ಲಿ ಚಾಪ್ಲಿ ನೆಹರೂರನ್ನು ಸಂಧಿಸಲು ಆಗಮಿಸಿದರು.

'ನನಗೆ ನೆಹರೂ ನನ್ನಂತೆಯೇ ಅಷ್ಟೊಂದು ಸಣ್ಣ ಶರೀರವೆಂದು ನೋಡಿ ಬೆರಗಾಯ್ತು.' ಅವರ ಮಗಳು ಇಂದಿರಾ ಗಾಂಧಿ – ಬಹಳ ಆಕರ್ಷಕ ವ್ಯಕ್ತಿ – ಅವರೊಡನೆ ಇದ್ದರು. ನೆಹರೂ ಅವರನ್ನು ಗಮನಿಸುತ್ತಿದ್ದಂತೆಯೇ ಅವರು ಒಬ್ಬ ಪ್ರಾಮಾಣಿಕ, ಸರಳ, ಸೂಕ್ಷ್ಮ ಭಾವುಕ ವ್ಯಕ್ತಿಯಂತೆ ನನಗೆ ಕಂಡುಬಂದರು; ಅದು ನನಗೆ ಪ್ರಿಯವಾಯ್ತು. ಪ್ರತಿಕ್ಷಣವೂ ಎಚ್ಚರಿಕೆಯಿಂದ ವರ್ತಿಸುತ್ತಾ, ಸುತ್ತಲಿನದನ್ನು ಅಳೆಯುತ್ತಿರುವಂತೆ ಕಂಡುಬಂದರು. ಮೊದಮೊದಲು ಮನಬಿಚ್ಚಿ ವರ್ತಿಸಲಿಲ್ಲ. ನಂತರ ಲೂಸರ್ನ್‌ನಿಂದ ನಾವಿಬ್ಬರೂ ನಮ್ಮ ಮನೆಗೆ ಹೊರಟೆವು. ನಮ್ಮ ಮನೆಯಲ್ಲೆ ಮಧ್ಯಾಹ್ನದ ಭೋಜನ ಏರ್ಪಾಡಾಗಿತ್ತು. ಅವರ ಮಗಳು ನಮ್ಮ ಹಿಂದೆಯೇ ಮತ್ತೊಂದು ಕಾರಿನಲ್ಲಿ ಹಿಂಬಾಲಿಸಿದರು. ಅವರು ಜಿನೀವಾಕ್ಕೆ ಹೋಗುವವರಿದ್ದರು. ನಮ್ಮ ಮನೆಗೆ ಹೋಗುವ ತಿರುವಿನಲ್ಲಿ ಆಕೆಯ ದಾರಿ ಪ್ರತ್ಯೇಕವಾಗುತ್ತಿತ್ತು. ಆ ತಿರುವು



ನೆಹರು ಮತ್ತು ಚಾಪ್ಲಿನ್

ಬರುವವರೆಗೂ ನಮ್ಮ ಪ್ರಯಾಣ ನನಗೆ ಆತಂಕವುಂಟುಮಾಡಿದ್ದಕ್ಕೆ ಕಾರಣ ನೆಹರೂ ಕಾರಿನ ಚಾಲಕ ೭೦ ಮೈಲಿ ವೇಗದಲ್ಲಿ ಆ ಗುಡ್ಡಗಾಡಿನ ದಾರಿಯಲ್ಲಿ ಅಪಾಯಕಾರಿ ಎನ್ನುವಂತೆ ಚಲಿಸುತ್ತಿದ್ದದ್ದು. ಆದರೆ ಇದಾವುದರ ಪರಿವೆಯೂ ಇಲ್ಲದೆ ನೆಹರೂ ಒಂದೇ ಸಮನೆ ಮಾತನಾಡುತ್ತಿದ್ದರು. ಲಾರ್ಡ್ ಮೌಂಟ್ ಬ್ಯಾಟನ್ ಬಗ್ಗೆ ನೆಹರು ತುಂಬ ಮೆಚ್ಚುಗೆ ವ್ಯಕ್ತಪಡಿಸಿದರು. ಭಾರತದ ವೈಸರಾಯ್ ಆಗಿ ಇಂಗ್ಲೆಂಡಿನಿಂದ ಆಡಳಿತವನ್ನು ವಿಭಜಿಸುವ ಪ್ರಕ್ರಿಯೆಯನ್ನು ತುಂಬ ಪರಿಣತರಾಗಿ ನಿರ್ವಹಿಸಿದರು ಎಂದರು.

ನಾನು ನಿಮ್ಮ ದೇಶವನ್ನು ಯಾವ ಸಿದ್ಧಾಂತದ ದಿಸೆಯಲ್ಲಿ ಕೊಂಡೊಯ್ಯುತ್ತಿದ್ದೀರಿ ಎಂದು ಕೇಳಿದೆ. "ಅದಾವುದೇ ದಿಸೆ ಇರಲಿ; ಮೂಲತಃ ಅದು ನಮ್ಮ ಜನರ ಜೀವನವನ್ನು ಉತ್ತಮಗೊಳಿಸುವುದು ಮುಖ್ಯ" ಅಂದರು. ತಾವು ಈಗಾಗಲೇ ಇದಕ್ಕಾಗಿ ಪಂಚವಾರ್ಷಿಕ ಯೋಜನೆಯನ್ನು ಪ್ರಾರಂಭಿಸಿರುವುದಾಗಿ ಹೇಳಿದರು. ಅವರ ಮಾತಿನ ಚಾತುರ್ಯ, ವೈವಿಧ್ಯ, ಆಸಕ್ತಿಪೂರ್ಣ ಮಾತುಗಳು ಒಂದು ಕಡೆ, ಅವರ ಚಾಲಕನ ಸಾಹಸೀ ಚಲನೆ ಮತ್ತೊಂದು ಕಡೆ. ನೆಹರೂ ಭಾರತದ ರಾಜಕೀಯದ ಕ್ಲಿಷ್ಟತೆ ಸಂಕೀರ್ಣಗಳನ್ನು ವಿವರಿಸುತ್ತಿದ್ದರು. ನನಗೆ ಆ ರಸ್ತೆಯ ಅಪಾಯದ ಪ್ರಯಾಣ ಆತಂಕದಿಂದಾಗಿ ಅವರು ಹೇಳಿದ್ದನ್ನೆಲ್ಲ ಕೇಳಿಸಿಕೊಂಡೆನೋ ಇಲ್ಲವೋ ತಿಳಿಯದು. ಆದರೆ ನೆಹರು ಅವರಿಗೆ ಮಾತ್ರ ಈ ಕುರಿತ ಆತಂಕ ಒಂದಿನಿತೂ ಇರಲಿಲ್ಲ. ಅಂತೂ ಇಂದಿರಾ ಹೋಗಬೇಕಾಗಿದ್ದ ತಿರುವು ಬಂದಾಗ ಧುತ್ತೆಂದು ನಮ್ಮ ಗಾಡಿ ನಿಂತಿತು. ಅಷ್ಟೊಂದು ವಿವಾದಗಳ ಹೊರೆ ಹೊತ್ತ ಆ ನೆಹರು ಕ್ಷಣಾರ್ಧದಲ್ಲಿ ಅಕ್ಕರೆ ತುಂಬಿದ ಅಪ್ಪನಾಗಿ ಇಂದಿರಾ ಅವರನ್ನು ಬೀಳ್ಕೊಳ್ಳಲು ಧಾವಿಸಿದರು. ಅವರನ್ನು ಸಪ್ರೇಮ ಆಲಂಗಿಸಿಕೊಂಡರು. ವಿದಾಯ ಹೇಳುವ ಕ್ಷಣ ಬಂತು. ನೆಹರು ಆರ್ದ್ರವಾಗಿ ಇಂದಿರಾಗೆ "ಮಗಳೇ! ಎಚ್ಚರಿಕೆ ವಹಿಸು" ಎಂದು ಹಿತ ನುಡಿದು ಬೀಳ್ಕೊಟ್ಟರು. ನನಗೆ ಆ ಕ್ಷಣ ಅನ್ನಿಸಿದ್ದು – ಇಂದಿರಾ ನೆಹರೂಗೇ ಆ ಮಾತನ್ನು ಹೇಳಬೇಕಿತ್ತು ಅಂತ!

ಅರ್ಥದಲ್ಲಿಯೇ ತಡೆದು ಚಾಪ್ಲಿನ್ ಹೇಳಿದ್ದು: ಆತನನ್ನು ಜೈಲಿನಲ್ಲಿಡುವುದರಿಂದ ಪ್ರಯೋಜನವಾಗುವುದಾದರೆ ಅದೇನೂ ಕಷ್ಟದ ಕೆಲಸವಲ್ಲ. ಆದರೆ ನೀವು ಒಬ್ಬ ಗಾಂಧಿಯನ್ನು ಜೈಲಿನಲ್ಲಿ ಇಟ್ಟರೆ ಮಗದೊಬ್ಬ ಗಾಂಧಿ ಎದ್ದುಬರುತ್ತಾನಲ್ಲ ಅಲ್ಲಿ! ಭಾರತೀಯರು ಏನು ಬಯಸುತ್ತಿದ್ದಾರೆಯೇ ಅದರ ಪ್ರತೀಕವಷ್ಟೆ ಗಾಂಧಿ. ಅದು ದೊರಕುವವರೆಗೂ ಆ ಜನ ಒಬ್ಬರಾದ ಮೇಲೆ ಒಬ್ಬರಂತೆ ಗಾಂಧಿಗಳನ್ನು ಸೃಷ್ಟಿಸುತ್ತಲೇ ಇರುತ್ತಾರೆ!"

ಇದನ್ನೆಲ್ಲ ಕೇಳಿಸಿಕೊಳ್ಳುತ್ತಿದ್ದ ಚರ್ಚಿಲ್ ಹೇಳಿದ "ಚಾರ್ಲಿ! ನೀನೊಬ್ಬ ಉತ್ತಮ ಲೇಬರ್ ಪಕ್ಷದ ಸದಸ್ಯನಾಗಬಲ್ಲೆ!"

ಕೆಲವು ದಿವಸಗಳ ನಂತರ, ಚಾಪ್ಲಿನ್–ಗಾಂಧಿ ಭೇಟಿಯ ನಂತರ, ಚರ್ಚಿಲ್‌ನ ಬಗ್ಗೆ ಆಲೋಚಿಸುತ್ತಾ ಚಾಪ್ಲಿನ್ ಹೇಳುವ ಮಾತು ಸ್ವಾರಸ್ಯವಾದುದು. 'ಈ ಮನುಷ್ಯನಲ್ಲಿ ಹಲವಾರು ಮೆಚ್ಚುವ ದೊಡ್ಡ ಗುಣಗಳು ತುಂಬಿವೆ' ಎಂದು ಹೇಳುತ್ತಾ, ನನಗೆ ಆತನ ರಾಜಕೀಯ ಮಾತ್ರ ಎಂದಿಗೂ ಹಿಡಿಸಲಿಲ್ಲ ಎನ್ನುತ್ತಾನೆ. "ಬ್ರಿಟಿಷ್ ಸಾಮ್ರಾಜ್ಯವನ್ನು ವಿಸರ್ಜಿಸುವ ಕೆಲಸಕ್ಕಾಗಿ ನಾನು ಈ ಸರ್ಕಾರದ ಯಾಜಮಾನ್ಯತೆ ಪಡೆದಿಲ್ಲ" ಎಂದು ಚರ್ಚಿಲ್ ಗುಟುರು ಹಾಕಿದ್ದ. ಚಾಪ್ಲಿನ್ ಬರೆಯುತ್ತಾನೆ: "ಇದು ಪ್ರಬಲವಾದ ಆಲಂಕಾರಿಕ ಹೇಳಿಕೆ; ಆದರೆ ಇತ್ತೀಚಿನ ವಾಸ್ತವಾಂಶಗಳ ಎದುರು ಇದು ಕೇವಲ ಪೊಳ್ಳು ಮಾತು."

"ಸಾಮ್ರಾಜ್ಯ ವಿಸರ್ಜನೆಯೆ ಕ್ರಿಯೆ ರಾಜಕೀಯದ ಅಥವಾ ಕ್ರಾಂತಿಕಾರೀ ಸೈನಿಕ ಪಡೆಗಳ ಅಥವಾ ಕಮ್ಯುನಿಸ್ಟ್ ಪ್ರಚಾರದ, ಗುಲ್ಲೆಬ್ಬಿಸಿ, ಕರತಾಡನ ಪಡೆಯುವ ಬೀದಿ ಬದಿಯ ಬಡಾಯಿ ಭಾಷಣಗಳ ಪರಿಣಾಮವಲ್ಲ. ಪರಿಸ್ಥಿತಿಯನ್ನು ಕವಿದಿರುವ ಸಮಕಾಲೀನ ಜಾಹಿರಾತಿನ ರೀತಿಯ ಆಕರ್ಷಕ ಹೊದಿಕೆಗಳ ಕೆಲಸ ಇದು. ಅಂತರರಾಷ್ಟ್ರೀಯ ಪ್ರಚಾರದ ಮುಖ್ಯ ಸಾಧನವಾದ ರೇಡಿಯೋ; ಟೆಲಿವಿಷನ್ ಮತ್ತು ಚಲನಚಿತ್ರಗಳು – ಮೋಟಾರು ವಾಹನಗಳು, ಟ್ರಾಕ್ಟರ್‌ಗಳು, ವಿಜ್ಞಾನದಲ್ಲಿನ ನವೋನವ ಆವಿಷ್ಕಾರಗಳು ಸಂಪರ್ಕ ಮತ್ತು ವೇಗಸಾಧನಗಳ ಆಲೋಚನೆಗೆ ಮೀರಿದ ದ್ರುತಗತಿ – ಇವೆಲ್ಲ ಈ ಚಕ್ರಾಧಿಪತ್ಯ ವಿಸರ್ಜನೆಯಲ್ಲಿ ಭಾಗಿ. ಇವೇ ಆ ಕ್ರಾಂತಿಕಾರಿಗಳು."

ತನಗೆ ಅನುಭವವಿದ್ದ ಚಲನಚಿತ್ರ ಜಗತ್ತಿನ ಕಣ್ಣಿನಿಂದ ಈತ, ಅದಕ್ಕೆ ಮೀರಿದ, ಸಾಮ್ರಾಜ್ಯಗಳು ಹೇಗೆ ಬುಡಮೇಲಾಗಿ, ಚದುರಿಹೋಗುತ್ತವೆ ಎಂದು ದೂರದೃಷ್ಟಿಯಿಂದ ಗಮನಿಸುವ ಕಾಣ್ಕೆ ಅವನ ಚಿಂತನೆಗಳು ಅವನ ಕಾಲಕ್ಕೆ ಮೀರಿದವಾಗಿದ್ದುದನ್ನು ದ್ರಷ್ಟಾರನ ಚಿತ್ರವನ್ನು ಮುಂದಿಡುತ್ತದೆ. ಜಾಗತಿಕವಾಗಿ ಕ್ರಾಂತಿಕಾರಕ ಪರಿವರ್ತನೆಯಲ್ಲಿ ವಿಜ್ಞಾನದ ಸಾಧನೆಗಳ ಪಾತ್ರವನ್ನು ಬಿಡಿಸಿಡುತ್ತದೆ.

ಚರ್ಚಿಲ್ಲನ ಜೊತೆಯಲ್ಲಿ ತಂಗಿದ್ದ ಕೆಲವು ದಿನಗಳ ನಂತರ ನಾನು ಗಾಂಧಿಯವರನ್ನು ಸಂಧಿಸಿದೆ. ಗಾಂಧಿಯವರ ರಾಜಕೀಯ ಚಾಣಾಕ್ಷತನ ಮತ್ತು ಆತನ ಉಕ್ಕಿನಂಥ ನಿರ್ಧಾರ ಇವು ನನಗೆ ಯಾವತ್ತು ಮೆಚ್ಚುಗೆಯಾದವು. ಆದರೆ ಆತ ಈಗ




ಲಂಡನ್ನಿಗೆ ಬಂದಿದ್ದು ತಪ್ಪು ಎನ್ನುವುದು ನನ್ನ ಅಭಿಪ್ರಾಯವಾಗಿತ್ತು. ಈ ಲಂಡನ್ನಿನ ಸಪೂರ ಹವೆಯಲ್ಲಿ ಆತನ ವ್ಯಕ್ತಿತ್ವದ ಅಪೂರ್ವ ಹೊಳಹು, ಪ್ರಾಮುಖ್ಯತೆ ಕರಗಿಹೋಗುತ್ತದೆ. ಈ ನೆಲದಲ್ಲಿ ಆತನ ಮತಧರ್ಮೀಯ ಹೊರಮೈ ಪ್ರಭಾವ ಬೀರುವುದಿಲ್ಲ ಈ ಶೀತಮಯ ಹವಾಮಾನದಲ್ಲಿ ಆತ ತನ್ನ ಆ ಸಾಂಪ್ರದಾಯಿಕ ಧೋತಿ – ದುಪಟ್ಟೆಯ ಹತ್ತಿಯ ಉಡುಪು – ಪ್ರತಿಕ್ಷಣವೂ ಕಾಲಿಗೆ ಸಿಕ್ಕಿಕೊಳ್ಳದಂತೆ ಎತ್ತಿ ಎತ್ತಿ ಹಿಡಿದುಕೊಳ್ಳುವ ಆ ನೋಟ – ಆತನನ್ನೇನೂ ದರ್ಶನೀಯವಾಗಿಸದೆ, ಇಲ್ಲಿಯ ಸುತ್ತಮುತ್ತಲು ಆತನನ್ನು ಅಸಂಬದ್ಧವೆನಿಸಿಬಿಡುತ್ತದೆ. ಆತನ ಆಗಮನ ಆತನನ್ನು ಕುರಿತು ಲಘುಹಾಸ್ಯ, ಅಣಕು ಚಿತ್ರಗಳಿಗೆ ಗ್ರಾಸವಾಗುತ್ತದೆ. ಪ್ರಭಾವ ಬೀರುವ ವ್ಯಕ್ತಿತ್ವವೆನ್ನುವುದು ಬಹುದೂರದಲ್ಲಿದ್ದಾಗ ಪಡೆಯುವ ಆಕರ್ಷಣೆ, ಸಮೀಪಕ್ಕೆ ಬಂದಾಗ ಉಳಿಯುವುದಿಲ್ಲ. ನನಗೆ ಆತನನ್ನು ಸಂಧಿಸುವ ಅಪೇಕ್ಷೆ ಇದೆಯೆ ಎಂದು ಕೇಳಿದಾಗ, ಹೌದು! ನಾನು ಸಿದ್ಧ! ಎಂದು ಹೇಳಿದ್ದೆ. ಆ ಅವಕಾಶದಿಂದ ನನಗೆ ಹರ್ಷೋಲ್ಲಾಸವಾಗಿತ್ತು.

ಅಂದಿನ ಲಂಡನ್ ನಗರದ ಈಸ್ಟ್ ಇಂಡಿಯಾ ಡಾಕ್ ರೋಡಿನ ಒಂದು ಕೊಳಚೆ ಪ್ರದೇಶದಲ್ಲಿ ಒಂದು ಸಾಧಾರಣ ಮನೆಯಲ್ಲಿ ಅವರನ್ನು ಭೇಟಿಯಾದೆ. ದಾರಿಯೆಲ್ಲಾ ಜನಜಂಗುಳಿ; ಪತ್ರಿಕಾ ವರದಿಗಾರರು, ಛಾಯಾಗ್ರಾಹಕರು ಕಿಕ್ಕಿರಿದಿದ್ದರು; ಮನೆ ತುಂಬ ತುಂಬಿಕೊಂಡಿದ್ದರು. ಮನೆಯ ಅಟ್ಟಲಿನಲ್ಲಿದ್ದ ಸುಮಾರು ೧೨ ಚದರ ಅಡಿಯ ಸಣ್ಣ ಕೋಣೆಯಲ್ಲಿ ನಮ್ಮ ಸಂದರ್ಶನ. ಮಹಾತ್ಮ ಇನ್ನೂ ಬಂದಿರಲಿಲ್ಲಾ; ಅವರನ್ನು ಸಂಧಿಸಿದಾಗ ತಕ್ಷಣ ನಾನು ಏನು ಹೇಳಬೇಕು ಅಂತ ಚಿಂತೆಗೊಳಗಾದೆ. ಆತನ ಹಲವಾರು ಜೈಲು ಬಂಧನಗಳು, ಉಪವಾಸ ಮುಷ್ಕರಗಳು ಮತ್ತು ಭಾರತದ ಸ್ವಾತಂತ್ರ್ಯಕ್ಕಾಗಿ ಆತನ ಹೋರಾಟ ಇವೆಲ್ಲ ಕೇಳಿ ತಿಳಿದಿದ್ದೆ ಹಾಗೂ ಆತ ಆಧುನಿಕ ಯಂತ್ರಗಳನ್ನು ವಿರೋಧಿಸುತ್ತಾನೆಂದು ಅಲ್ಪಸ್ವಲ್ಪ ತಿಳಿದಿತ್ತು.

ಕೊನೆಗೂ ಅವರು ಬಂದರು. ಬೀದಿಯಲ್ಲಿ ಜೈಕಾರಗಳ ಕೋಲಾಹಲ ಹುಯಿಲೆದ್ದಿತು. ಆತ ಟ್ಯಾಕ್ಸಿಯಿಂದ ಹೊರಗೆ ಬಂದು, ತನ್ನ ಉಡುಪಿನ ಮಡಿಕೆಗಳನ್ನು ಕೈಗೆ ಸೆಳೆದೆತ್ತಿ ಹಿಡಿದುಕೊಂಡು ಸೊಂಟಕ್ಕೆ ಸಿಕ್ಕಿಸಿಕೊಂಡರು. ಆ ಕೊಳಚೆ ಪ್ರದೇಶದ ಇಕ್ಕಟ್ಟಾದ ದಾರಿಗಳಲ್ಲಿ ನೆರೆದಿದ್ದ ಆ ಜನಜಂಗುಳಿ ಮಧ್ಯೆ, ಅದೊಂದು ವಿಚಿತ್ರ ದೃಶ್ಯವಾಗಿ ಮನಸೆಳೆಯಿತು. ಆತ ನೇರವಾಗಿ ಮಹಡಿ ಏರಿ, ಅಲ್ಲಿಯ ಅಟ್ಟಣೆಯ ಕಿಟಕಿಗೆ ಬಂದು, ನಿಂತು, ಜನರನ್ನು ನೋಡಿದರು. ನನ್ನನ್ನು ಸನ್ನೆಮಾಡಿ ತಮ್ಮ ಪಕ್ಕಕ್ಕೆ ಆಹ್ವಾನಿಸಿದರು. ನಾವಿಬ್ಬರೂ ಒಟ್ಟಿಗೆ ಜನರತ್ತ ಕೈಬೀಸಿದೆವು.

ಇದ್ದಕ್ಕಿದ್ದಂತೆಯೇ ಕೋಣೆಯ ತುಂಬ ಫ್ಲಾಶ್ ಲೈಟ್‌ಗಳ ಪ್ರಭಾವಳಿ ಝಗಝಗಿಸಿತು. ನಾವು ಅಲ್ಲಿದ್ದ ಸೋಫದ ಮೇಲೆ ಆಸೀನರಾದೆವು. ಕ್ಯಾಮರಾಗಳು ಚಿತ್ರ ತೆಗೆದುಕೊಂಡವು. ನಾನು ಮಹಾತ್ಮರ ಬಲಬದಿಗೆ ಕುಳಿತಿದ್ದೆ. ಕೆಲವೊಮ್ಮೆ ಒದಗಿಬರುವ ಆ ಸಂದಿಗ್ಧ ಕ್ಷಣ! ಅವರೊಡನೆ ಏನಾದರೂ ಜಾಣ್ಮನದ ಅರ್ಥವತ್ತಾದ ಮಾತೊಂದನ್ನು ಆಡಲೇಬೇಕಾದ ಒತ್ತಡ ಬಂದೊದಗಿದ ಕ್ಷಣದಲ್ಲೇ ನಮಗೆ ಅದೇನೆಂದು ಹೊಳೆಯುವುದಿಲ್ಲ ಅದು ನನ್ನನ್ನೂ ಕಾಡಿಸಿತು. ಗಾಂಧಿಯವರೊಡನೆ ಮಾತಿನ ಉಪಕ್ರಮ ನನ್ನಿಂದಲೇ ಆಗಬೇಕು ಅಂತ ನನಗೆ ತಿಳಿದಿತ್ತು; ಆ ಮಹಾತ್ಮನೆ ಮೊದಲು ಮಾತನಾಡಲಿ ಎಂದು ನಿರೀಕ್ಷಿಸುವುದು ತರವಲ್ಲ ಅಂತ ನನಗೆ ತಿಳಿದಿತ್ತು. ನನ್ನ ಚಲನಚಿತ್ರಗಳನ್ನು ನೋಡಿದ್ದೇನೆ, ಆನಂದಿಸಿದ್ದೇನೆ ಎಂದೇನೂ ಗಾಂಧಿಯವರಿಂದ ಕೇಳುವ ನಿರೀಕ್ಷೆ ಇರಲಿಲ್ಲ. ನನ್ನದಿರಲಿ, ಯಾವುದೇ ಚಲನ ಚಿತ್ರವನ್ನಾದರೂ ಅವರು ನೋಡಿದ್ದಿರಲಿಕ್ಕಿಲ್ಲ. ನನ್ನ ಬಲ ಬದಿಗೆ ಕುಳಿತಿದ್ದ ಮಹಿಳೆಯೊಬ್ಬರು ಅದೇನೋ ಒಂದೇ ಸಮನೆ ಬಡಬಡ ನನ್ನ ಕಿವಿಯಲ್ಲಿ ಹೇಳುತ್ತಿದ್ದರು. ಅದಾವುದೋ ನಾ ಕೇಳಿರದ ನೀಳ್ಗತೆಯ ವರ್ಣನೆ ನಾನು ಒಂದಿಷ್ಟೂ ಕೇಳಿಸಿಕೊಳ್ಳದ ಆ ಮಾತಿನ ಭರಾಟೆ ನನಗೆ ಗ್ರಹಿಕೆಯಾಗದಿದ್ದರೂ, ಕೇಳುತ್ತಿರುವಂತೆ ನಟಿಸುತ್ತಾ ತಲೆಯಾಡಿಸುತ್ತಾ, ಹಾಗೆಯೇ ಗಾಂಧಿಗೆ ಏನು ಹೇಳುವುದು ಎನ್ನುವ ಚಿಂತೆಯಲ್ಲಿದ್ದೆ. ಹಠಾತ್ತಾಗಿ ಮಹಿಳೆಯೊಬ್ಬರ ದೃಢವಾದ ಅಧಿಕಾರಯುತ ವಾಣಿಯೊಂದು ಈಕೆಯ ಬಡಬಡಿಕೆಯನ್ನು ಕೊನೆಗಾಣಿಸಿತು. "ಶ್ರೀಮತಿ... ಅವರೇ! ತಾವು ದಯವಿಟ್ಟು ತಮ್ಮ ಮಾತುಗಳನ್ನು ಮುಗಿಸಿ, ಮಾನ್ಯ ಚಾಪ್ಲಿನ್ನರು ಗಾಂಧಿಯವರೊಡನೆ ಮಾತನಾಡಲು ಅನುವು ಮಾಡಿಕೊಡುವಿರಾ?" (ಇದು ಬಹುಶಃ ಅಲ್ಲಿ ಹಾಜರಿದ್ದ ಶ್ರೀಮತಿ ಸರೋಜಿನಿ ನಾಯ್ಡು ಅವರದ್ದು: ಪಾರ್ಥಸಾರಥಿ)

ಜನ ತುಂಬಿದ್ದ ಆ ಕೊಠಡಿ ತಕ್ಷಣವೇ ನಿಶ್ಶಬ್ದವಾಯ್ತು. ಮಹಾತ್ಮರ ಮನದೊಳಗಿನದನ್ನು ಬಹಿರಂಗಪಡಿಸದ ಮುಖಚರ್ಯೆ, ಅವರು ನನಗಾಗಿ ಕಾದು ಕುಳಿತಂತೆ ಇತ್ತು; ಅದೇ ಸಮಯ ಇಡೀ ಭಾರತವೂ ನಾನೇನು ಹೇಳುತ್ತೇನೆಂದು ಕಾದುಕುಳಿತಿರುವಂತೆ ನನಗೆ ಭಾಸವಾಯ್ತು. ಒಮ್ಮೆ ಗಂಟಲನ್ನು ಕ್ಯಾಕರಿಸಿಕೊಂಡು ಕೇಳಿದೆ. "ಸಹಜವಾಗಿ ನಾನು ಭಾರತದ

ಸ್ವಾತಂತ್ರ್ಯಾಕಾಂಕ್ಷೆ ಮತ್ತು ಹೋರಾಟದ ಬಗೆಗೆ ಮೆಚ್ಚುಗೆ ಉಳ್ಳವನು; ಅದು ಹಾಗಿರಲಿ; ಆದರೆ ನನಗೆ ಒಂದು ಗೊಂದಲವಿದೆ; ನೀವೇಕೆ ಯಂತ್ರಗಳನ್ನು ವಿರೋಧಿಸುತ್ತೀರಿ ?"

ನನ್ನ ಮಾತಿಗೆ ಮಹಾತ್ಮರು ನಕ್ಕರು, ತಲೆಯಾಡಿದರು. ಮುಂದುವರಿದು ನಾನು ಹೇಳಿದೆ. "ಸದುದ್ದೇಶದಿಂದ ಯಂತ್ರಗಳನ್ನು ಬಳಸಿದ್ದೇ ಆದರೆ, ಅವು ಮನುಷ್ಯನನ್ನು ಗುಲಾಮೀಯವಾದ ದಾರುಣ ದುಡಿಮೆಯಿಂದ ಬಿಡುಗಡೆ ಮಾಡುತ್ತವೆ; ಅವನ ದುಡಿಮೆಯ ಸಮಯದಲ್ಲಿ ಕಡಿತವಾಗುತ್ತದೆ. ದೊರೆತ ಬಿಡುವನ್ನು ಅವನು ತನ್ನ ಬೌದ್ಧಿಕತೆಯನ್ನು ವಿಕಾಸ ಮಾಡಿಕೊಳ್ಳಲು, ಒಂದಿಷ್ಟು ಆನಂದಮಯ ಕ್ಷಣಗಳನ್ನು ಕಳೆಯಲು ಬಳಸಬಹುದು."

ಗಾಂಧಿಯವರು ಸಮಾಧಾನಚಿತ್ತದಿಂದ ಉತ್ತರಿಸಿದರು. "ನನಗೆ ನಿಮ್ಮ ಈ ಮಾತು ಅರ್ಥವಾಗುತ್ತೆ. ಆದರೆ ಭಾರತ ಆ ಘನ ಉದ್ದೇಶಗಳನ್ನು ಸಾಧಿಸುವುದಕ್ಕೆ ಮುಂಚೆ, ಅದಕ್ಕೆ ಪೂರ್ವಭಾವಿಯಾಗಿ ಬ್ರಿಟಿಷ್ ಆಳ್ವಿಕೆಯಿಂದ ಕಳಚಿಕೊಳ್ಳಬೇಕು. ಈ ಹಿಂದೆ ಈ ಯಂತ್ರಗಳು ಕಾರಣವಾಗಿ ನಾವು ಇಂಗ್ಲೆಂಡಿನ ಅಡಿಯಾಳಾದೆವು. ಅವರ ಈ ಯಾಜಮಾನ್ಯವನ್ನು ಕಿತ್ತೊಗೆಯುವ ಒಂದೇ ಮಾರ್ಗವೆಂದರೆ, ಯಂತ್ರಗಳಿಂದ ತಯಾರಾದ ಸರಕುಗಳನ್ನು ಬಹಿಷ್ಕರಿಸಬೇಕು. ಅದೇ ಕಾರಣ, ದೇಶಭಕ್ತನಾದ ಪ್ರತಿಯೊಬ್ಬ ಭಾರತೀಯನೂ ತನ್ನದೇ ಹತ್ತಿಯಿಂದ ನೂಲ ಬೇಕು, ತನ್ನದೇ ಬಟ್ಟೆಯನ್ನು ನೇಯ್ಯಬೇಕು ಎನ್ನುತ್ತೇವೆ. ಇಂಗ್ಲೆಂಡಿನಂತಹ ಮಹಾಶಕ್ತಿಶಾಲಿ ರಾಷ್ಟ್ರವನ್ನು ಸದೆ ಬಡಿಯಲು ನಮಗಿರುವ ನಮ್ಮದೇ ವಿಶಿಷ್ಟ ಅಸ್ತ್ರ ಇದು. ಇದೊಂದೇ ಅಲ್ಲದೆ ಈ ಪ್ರಶ್ನೆಗೆ ಇನ್ನೂ ಹಲವು ಆಯಾಮಗಳಿವೆ. ಭಾರತದ ಹವಾಮಾನ ಇಂಗ್ಲೆಂಡಿನದಕ್ಕಿಂತ ತೀರ ವಿಭಿನ್ನವಾದುದು. ಅದರ ಆಚಾರ-ವಿಚಾರಗಳು, ರೀತಿ-ನೀತಿಗಳು, ಬಯಕೆಗಳು ಬೇರೆಯಾದುವು. ಇಂಗ್ಲೆಂಡಿನ ಶೀತ ಹವೆ ಪರಿಶ್ರಮದ ಕ್ಲಿಷ್ಟತೆಯನ್ನು ಹೆಚ್ಚಿಸುತ್ತದೆ; ಅವರ ಆರ್ಥಿಕತೆ ಸಂಕೀರ್ಣವಾದು. ನಿಮಗೆ ಊಟದ ಪಾತ್ರೆಗಳದೇ ಒಂದು ದೊಡ್ಡ ಕೈಗಾರಿಕೆ ಬೇಕು. ನಮಗಾದರೋ ನಮ್ಮ ಬೆರಳುಗಳೇ ಸಾಕು. ಇವೆಲ್ಲ ಸೇರಿ ಅಗಾಧವಾದ ವಿಭಿನ್ನತೆಗಳಾಗಿ ಬಿಡುತ್ತವೆ."

ಗಾಂಧಿಯವರ ಮಾತುಗಳನ್ನು ಕೇಳುತ್ತಲೇ ಭಾರತ ಸ್ವಾತಂತ್ರ್ಯ ಸಮರದಲ್ಲಿ ಬಳಕೆಯಾಗುವ ಯುಕ್ತಿಪೂರ್ಣ ವರಸೆಗಳನ್ನು ಕುರಿತ ಸರಳವಾದ ಶಿಕ್ಷಣವನ್ನೇ ಪಡೆದ ಅನುಭವವಾಯ್ತು. ಅಷ್ಟೆ ಅಲ್ಲದೆ ಈ ಹುಟ್ಟಾವಾಸ್ತವವಾದಿ, ಅದೇ ಸಮಯ ದ್ರಷ್ಟಾರನೂ ಆದ ಈ ವ್ಯಕ್ತಿಯಲ್ಲೇ ವೀರ್ಯವತ್ತಾದ ಬೌದ್ಧಿಕತೆಯೂ ನೆಲೆಸಿರುವ ವಿರೋಧಾಭಾಸವೇ ಎನ್ನಬಹುದಾದ ವಿನೂತನ ಮಗ್ಗುಲಿನ ಪರಿವೆಯೂ ಉಂಟಾಯಿತು. ತಾನು ತೀರ್ಮಾನಿಸಿದ್ದನ್ನು ಕಾರ್ಯಗತಗೊಳಿಸುವ ಆತನ ಉಕ್ಕಿನ ನಿರ್ಧಾರದ ಭಾಸವಾಯ್ತು. 'ಸ್ವಾತಂತ್ರ್ಯದ ಪರಮೋಚ್ಚ ಚಿಹ್ನೆ ಅಂದರೆ ವ್ಯಕ್ತಿ ಅನಗತ್ಯವಾದ ಎಲ್ಲ ವಸ್ತುಗಳನ್ನು ತ್ಯಜಿಸುವುದು' ಎಂದು, ಗಾಂಧಿ ಹೇಳಿ, ಮುಂದುವರಿದು "ಹಿಂಸೆ ಪರಿಣಾಮದಲ್ಲಿ ತನ್ನನ್ನು ತಾನೆ ನಾಶಪಡಿಸಿಕೊಳ್ಳುತ್ತದೆ" ಎಂದರು.

ಕೋಣೆಯಿಂದ ಎಲ್ಲರೂ ಹೊರಗೆ ಹೋದಮೇಲೆ ನಾನು, ಗಾಂಧಿ ಮತ್ತು ಐದು ಮಂದಿ ಉಳಿದೆವು. ಗಾಂಧಿ ತಾವು ಈಗ ಪ್ರಾರ್ಥನೆ ಮಾಡುವುದಾಗಿಯೂ, ನಾನು ಬಯಸಿದ್ದಲ್ಲಿ ಉಳಿದುಕೊಂಡು ಗಮನಿಸಬಹುದು ಎಂದರು. ಚಕ್ಕಲಮಟ್ಟೆ ಹಾಕಿ ಗಾಂಧಿ ನೆಲದ ಮೇಲೆ ಕುಳಿತರು. ಉಳಿದ ಐವರೂ ಅವರ ಸುತ್ತ ವೃತ್ತಾಕಾರದಲ್ಲಿ ಕುಳಿತರು. ಲಂಡನ್ನಿನ ಕೊಳಚೆ ಪ್ರದೇಶದ ಕೇಂದ್ರದಲ್ಲಿದ್ದ ಒಂದು ಚಿಕ್ಕ ಕೊಠಡಿಯಲ್ಲಿ, ನೆಲದ ಮೇಲೆ ಕುಳಿತ ಈ ಆರು ಮಂದಿ, ದೂರದ ಮನೆಮಾಡುಗಳ ಹಿಂದೆ ತ್ವರಿತವಾಗಿ ಮರೆಯಾಗುತ್ತಿದ್ದ ಸೂರ್ಯನ ಕೇಸರಿಕಿರಣಗಳು ಆವರಿಸುತ್ತಿದ್ದಂತೆಯೇ, ಅದೇ ಕೊಠಡಿಯ ಆರಾಮಾಸನದಲ್ಲಿ ಕುಳಿತು ಅವರನ್ನು ನಾನು ನೋಡುತ್ತಿದ್ದಂತೆಯೇ, ಅವರೆಲ್ಲ ಅದಾವುದೋ ಪ್ರಾರ್ಥನೆಯನ್ನು ವಿನಮ್ರತೆಯಿಂದ ಸಣ್ಣದನಿಯಲ್ಲಿ ಹೇಳಿಕೊಳ್ಳುತ್ತಿರಲು, ಈ ಎಲ್ಲ ಒಟ್ಟಾರೆ ಮೂಡಿಸಿದ ಆ ದೃಶ್ಯ ಮನೋಜ್ಞವಾಗಿತ್ತು. ಅತ್ಯಂತ ವಾಸ್ತವ ವಾದಿಯಾದ ಈ ಮನುಷ್ಯನಲ್ಲಿ ಎಷ್ಟೊಂದು ವಿರೋಧಾಭಾಸಗಳಿವೆ ಎಂದು ಎನ್ನುವ ಅನಿಸಿಕೆ ಈತನನ್ನು ಗಮನಿಸಿ ನೋಡುತ್ತಿದ್ದಂತೆಯೇ, ಅಂತಿಮವಾಗಿ, ನನ್ನ ಮನಸ್ಸಿನಲ್ಲಿ ಹಾದುಯೋಯ್ತು. ಕಾನೂನು ಕುರಿತ ನಿಷ್ಕೃಷ್ಟ ತಿಳಿವು ಪಡೆದಿದ್ದ ಗಾಂಧಿ, ರಾಜಕೀಯ ವಾಸ್ತವತೆಯ ಗಂಭೀರ ಗ್ರಹಿಕೆಯನ್ನೂ ಪಡೆದಿದ್ದರು. ಆದರೆ ಆ ಎಲ್ಲ ವೈಲಕ್ಷಣಗಳೂ ಈ ಪ್ರಾರ್ಥನೆಯ ಇಂಪಾದ ಹಾಡಿನ ಒಂದು ಭಜನೆಯ ಭವ್ಯ ಕ್ಷಣದಲ್ಲಿ ಕರಗಿ ಹೋದವು.

**ಕೆ. ಎಸ್. ಪಾರ್ಥಸಾರಥಿ**
ನಂ. ೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ
ಬೆಟ್ಟಹಲಸೂರು ಅಂಚೆ, ಬೆಂಗಳೂರು – ೫೬೨ ೧೫೭




# ನೆನಪು



ಮುಂಗಾರು ಮಳೆಯಲಿ
ಬಾಳೆ ಗಿಡದ ಮೇಲೆ
ಬಿದ್ದ –
ನೀರ ಹನಿಯ
ಹೊಳಪು
ನಿನ್ನ ನೆನಪು !

ಕೊರೆವ ಚಳಿಯಿರುಳಿನಲಿ
ರಾತ್ರಿ ಮಲ್ಲಿಗೆ ಕಂಪು
ನಿನ್ನ ನೆನಪು !

ಧಗ-ಧಗ
ಬಿರು ಬೇಸಿಗೆಯಲಿ
ಕೋಗಿಲೆ ಇಂಚರ
ನಿನ್ನ ನೆನಪು !

ಸೂರ್ಯೋದಯದಿ...
ಸೂರ್ಯ ರಶ್ಮಿಯ
ವಜ್ರ ಕಿರೀಟದ ಹೊಳಪು
ನಿನ್ನ ನೆನಪು !

ಸೂರ್ಯಾಸ್ತದಿ...
ವಿಹಗ ಸಂಕುಲ
ಹಾರಾಟದಿ
ವಿರಹ ಬಳಿದು
ಕೆಂಪಾಗಿ ಅತ್ತ
ನಭದಿ...
ನಿನ್ನ ನೆನಪು !!

**ಶೋಭಾ ಪ್ರಮೋದ್**
ಮನಗಾಂವ, ರಾಯ್‌ಗಡ – ೪೦೨ ೧೦೪
ಮಹಾರಾಷ್ಟ್ರ



# ಲೂಸಿಯಾ

## (ಜಾಗತೀಕರಣ) ಅಫೀಮಿನಲ್ಲಿ ಸಮಾಜ

**ಎಸ್. ಶಂಕರ**

ಒಂದು ಹಳ್ಳಿಯಿಂದ ಬೆಂಗಳೂರಿಗೆ ಬಂದು ಸಿನಿಮಾ ಮಂದಿರದಲ್ಲಿ ಅಸಂಘಟಿತ ಕಾರ್ಮಿಕನಾಗಿ ದುಡಿಯುತ್ತಿರುವ ಒಬ್ಬ ಯುವಕ ಮಧ್ಯರಾತ್ರಿ ನಿದ್ದೆ ಬಾರದೆ ಮನೆಯಿಂದ ಹೊರಗೆ ಬಂದಾಗ ಕೆಲವು ಘಟನೆಗಳು ನಡೆದು ಅವನಿಗೆ ನಿದ್ದೆ ಮಾಡಲು ಮಾದಕ ಔಷಧಿಯ ಮಾತ್ರೆಗಳು ದೊರೆಯುತ್ತವೆ. ಅದರ ಹೆಸರು 'ಲೂಸಿಯಾ', ಈ ಮಾತ್ರೆಗಳನ್ನು ಪ್ರತಿ ದಿನ ಸೇವಿಸಿದರೆ ನಿದ್ರೆಯಲ್ಲಿ ಆ ವ್ಯಕ್ತಿಯ ಆಸೆಗೆ ತಕ್ಕಂತೆ ಕನಸುಗಳು ಬೀಳುತ್ತವೆ. ಈ ಮಾತ್ರೆಗಳನ್ನು ತೆಗೆದುಕೊಳ್ಳುತ್ತಲೇ ಇರಬೇಕು. ನಿಲ್ಲಿಸುವಂತಿಲ್ಲ. ವ್ಯಕ್ತಿಗೆ ಬೀಳುವ ಕನಸುಗಳು ಅವನ ನಿಜ ಜೀವನದಲ್ಲಿನ ವಿರೋಧ ಅಂಶಗಳಂತಿವೆ. ಆತ ಸಾಧಾರಣ ಕಾರ್ಮಿಕನ ಕನಸಿನಲ್ಲಿ ಆತನೇ ಏಕಮಾತ್ರ ಸ್ಟಾರ್ ಸಿನಿಮಾ ನಾಯಕ, ನಿಜ. ಜೀವನದಲ್ಲಿ ಅವನ ಕೈಗೆ ಸಿಗದಿದ್ದುದು, ಕನಸಿನಲ್ಲಿ ಅವನದ್ದೇ, ಹೀಗೆ ನಿಜ ಜೀವನವೇ ಕನಸಾಗುವ ಸ್ಥಿತಿ ಉಂಟಾಗುತ್ತದೆ. ಕೊನೆಗೆ ಆತ್ಮಹತ್ಯೆಗೆ ಯತ್ನಿಸಿ ಕೋಮಾ ಸ್ಥಿತಿಗೆ ಬರುತ್ತಾನೆ. ವೈದ್ಯರ ಚಿಕಿತ್ಸೆಯಿಂದ ಗುಣಮುಖನಾಗುತ್ತಾನೆ. ಇದು 'ಲೂಸಿಯಾ' ಸಿನಿಮಾದ ಕಥೆ.

ಕೆಲವು ಮಾದಕ ವಸ್ತುಗಳು ವ್ಯಕ್ತಿಯ ಮನಸ್ಸನ್ನು ವಾಸ್ತವದಿಂದ ದೂರಮಾಡಿ ಭ್ರಾಮಕ ಸ್ಥಿತಿಯನ್ನು ನಿರ್ಮಿಸಿ ಸ್ವಲ್ಪ ಸ್ವಲ್ಪವಾಗಿ ವ್ಯಕ್ತಿಯನ್ನು ಸಾಮಾಜಿಕವಾಗಿ ನಿರುಪಯೋಗಿಯನ್ನಾಗಿ ಮಾಡುತ್ತವೆ. ೧೯೯೧ರಿಂದ ದೇಶದ ಆಳುವವರು ಜಾಗತೀಕರಣ, ಉದಾರೀಕರಣ, ಖಾಸಗೀಕರಣಗಳನ್ನು ಜಾರಿಗೆ ತಂದಿರುವುದು ಎಲ್ಲರಿಗೂ ತಿಳಿದ ವಿಷಯವೇ. ಜಾಗತೀಕರಣ ಪ್ರಕ್ರಿಯೆಯ ಮೂಲಕ ಪತ್ರಿಕೆ, ಟಿ.ವಿ., ಸಿನಿಮಾ, ಧಾರಾವಾಹಿಗಳು, ಅಂತರ್ಜಾಲ ಮುಂತಾದ ಮಾಧ್ಯಮಗಳ ಮೂಲಕ ವ್ಯಕ್ತಿ ಮತ್ತು ಸಮಾಜವನ್ನು ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತಿಗೆ ತಕ್ಕಂತೆ ರೂಪಿಸುವುದು ನಡೆದೇ ಇದೆ. ಇದಕ್ಕೆ ಕಂಪನಿಗಳು ಬಳಸುವ ವಿಧಾನ ಸುಳ್ಳನ್ನು ಸುಂದರವಾಗಿ ಬಿತ್ತರಿಸುವ ಜಾಹೀರಾತುಗಳು.

ವ್ಯಕ್ತಿಯನ್ನು ಮನುಷ್ಯನನ್ನಾಗಿ ನೋಡದೆ, ಗಿರಾಕಿಯಾಗಿ ಪರಿವರ್ತಿಸಲು ಜಾಗತೀಕರಣ ಇಂದು ನಿರ್ಮಾಣ ಮಾಡುತ್ತಿರುವ ಪರಿಸ್ಥಿತಿಯ ಬಗ್ಗೆ ಅರಿವಿಲ್ಲದೆ ವ್ಯಕ್ತಿ ಬಿರುಗಾಳಿಗೆ ಸಿಕ್ಕ ತರಗೆಲೆಯಂತಾಗಿದ್ದಾನೆ. ವ್ಯಕ್ತಿ ಬಯಸುವ ವಸ್ತುಗಳನ್ನು ಕೊಳ್ಳಲು ಬೇಕಾದ ಆದಾಯದ ಮೂಲಗಳನ್ನು ಹೆಚ್ಚಿಸಲು ಯಾವುದೇ ಸುಧಾರಣೆಗಳನ್ನು ತರಲು ಮತ್ತು ಇಂದಿನ ಆರ್ಥಿಕ ವ್ಯವಸ್ಥೆಯನ್ನು ಬದಲಾಯಿಸಲು ಆಳುವ ವರ್ಗಕ್ಕೆ ಮನಸ್ಸಿಲ್ಲ. ಆದರೆ ಆಸೆಯೆಂಬ ಮಾದಕವನ್ನು ಮಾತ್ರ ಜಾಗತೀಕರಣ ನಿರಂತರವಾಗಿ ವ್ಯಕ್ತಿಗೆ ಮತ್ತು ಸಮಾಜಕ್ಕೆ ನೀಡುತ್ತಲೇ ಬರುತ್ತಿದೆ, ವ್ಯಕ್ತಿಗೆ, ಸಮಾಜಕ್ಕೆ

ವ್ಯಕ್ತಿಯನ್ನು ಮನುಷ್ಯನನ್ನಾಗಿ ನೋಡದೆ, ಗಿರಾಕಿಯಾಗಿ ಪರಿವರ್ತಿಸಲು ಜಾಗತೀಕರಣ ಇಂದು ನಿರ್ಮಾಣ ಮಾಡುತ್ತಿರುವ ಪರಿಸ್ಥಿತಿಯ ಬಗ್ಗೆ ಅರಿವಿಲ್ಲದೆ ವ್ಯಕ್ತಿ ಬಿರುಗಾಳಿಗೆ ಸಿಕ್ಕ ತರಗೆಲೆಯಂತಾಗಿದ್ದಾನೆ. ವ್ಯಕ್ತಿ ಬಯಸುವ ವಸ್ತುಗಳನ್ನು ಕೊಳ್ಳಲು ಬೇಕಾದ ಆದಾಯದ ಮೂಲಗಳನ್ನು ಹೆಚ್ಚಿಸಲು ಯಾವುದೇ ಸುಧಾರಣೆಗಳನ್ನು ತರಲು ಮತ್ತು ಇಂದಿನ ಆರ್ಥಿಕ ವ್ಯವಸ್ಥೆಯನ್ನು ಬದಲಾಯಿಸಲು ಆಳುವ ವರ್ಗಕ್ಕೆ ಮನಸ್ಸಿಲ್ಲ. ಆದರೆ ಆಸೆಯೆಂಬ ಮಾದಕವನ್ನು ಮಾತ್ರ ಜಾಗತೀಕರಣ ನಿರಂತರವಾಗಿ ವ್ಯಕ್ತಿಗೆ ಮತ್ತು ಸಮಾಜಕ್ಕೆ ನೀಡುತ್ತಲೇ ಬರುತ್ತಿದೆ, ವ್ಯಕ್ತಿಗೆ, ಸಮಾಜಕ್ಕೆ ಕನಸುಗಳು ಬೀಳುತ್ತಲೇ ಇವೆ.

ಕನಸುಗಳು ಬೀಳುತ್ತಲೇ ಇವೆ. ವಾಸ್ತವದ ಬದುಕಿನಲ್ಲಿ ಅವುಗಳು ಕೈಗೆಟುಕದೆ ಭ್ರಮನಿರಸನವಾಗಿ ಕೌಟುಂಬಿಕ, ಸಾಮಾಜಿಕ ಜವಾಬ್ದಾರಿಯಿಂದ ದೂರವಾಗುತ್ತಿರುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇದೆ, ಇಂದು ಕನಸು ನಿಜವೋ, ವಾಸ್ತವ ಬದುಕು ನಿಜವೋ ಎಂಬ ಪರಿಸ್ಥಿತಿ ಉಂಟಾಗಿದೆ. ೭೦–೮೦ರ ದಶಕದಲ್ಲಿನ ವಿಷಯ ಆಧಾರಿತ ಚಳುವಳಿಗಳು ಜನಸಮೂಹದಿಂದ ಬೆಳೆದು ಬರದೆ ಸಮಾಜ ಸ್ಥಗಿತಗೊಂಡಂತೆ ಭಾಸವಾಗುತ್ತಿದೆ.

ಜಾಗತೀಕರಣ ತಾನು ಸೃಷ್ಟಿಸಿದ ಮರುಭೂಮಿಯಲ್ಲಿ ಹಸಿರು ತರಲು ತನ್ನಿಂದ ಮಾತ್ರ ಸಾಧ್ಯ ಎಂದು ಹೇಳುತ್ತದೆ. ಒಂದು ಭ್ರಮೆಯಿಂದ ಇನ್ನೊಂದು ಭ್ರಮೆಗೆ ತಂದಿರುವ ಜಾಗತೀಕರಣದ ಲೂಸಿಯಾ ಮಾತ್ರೆ ಜನಸಮುದಾಯವನ್ನು ನಿರಂತರವಾಗಿ ನಿಷ್ಕ್ರಿಯರನ್ನಾಗಿಸುತ್ತಿದೆ. ಎಡ ಮತ್ತು ಪ್ರಜಾಸತ್ತಾತ್ಮಕ ಶಕ್ತಿಗಳು ಸತತ ಹೋರಾಟಗಳಿಗಿಳಿದರೂ ಆಳುವವರು ನಿರಂತರವಾಗಿ ನೀಡುತ್ತಿರುವ ಆರ್ಥಿಕ ಸುಧಾರಣೆಯ ಲೂಸಿಯಾ ಗುಳಿಗೆಗಳು, ವಿಶಾಲ ಜನಸಮುದಾಯವನ್ನು ದಟ್ಟದರಿದ್ರರನ್ನಾಗಿಸಿ, ಬೆರಳೆಣಿಕೆಯ ಬಂಡವಾಳಗಾರರು ಕೋಟ್ಯಧಿಪತಿಗಳಾಗುತ್ತಿದ್ದಾರೆ. ಭ್ರಮೆ ಸೃಷ್ಟಿಸುವ ಉದ್ಯಮಗಳು (ಷೇರುಪೇಟೆ, ರಿಯಲ್ ಎಸ್ಟೇಟ್, ಫಲಜ್ಯೋತಿಷ್ಯ ಮುಂತಾದುವು) ಬೆಳೆಯುತ್ತಿರುವುದು, ಮಾಲೀಕ ಶಂಕರಣ್ಣನ ಥಿಯೇಟರ್ ನಷ್ಟದಲ್ಲಿ ನಡೆಯುವುದು, ದೇಶೀಯ ಸಣ್ಣ ಕೈಗಾರಿಕೆಗಳ ಸ್ಥಿತಿಯನ್ನು ಸಾಂಕೇತಿಕವಾಗಿ ಸೂಚಿಸುತ್ತವೆ. ದುಡಿಯುವ ಸಮುದಾಯ ಯಾವುದೇ ಕಾರ್ಮಿಕ ಹಕ್ಕುಗಳಿಲ್ಲದೆ, ಸಾಮಾಜಿಕ ಭದ್ರತೆಯಿಲ್ಲದೆ, ಜಾಗತೀಕರಣದಿಂದಾಗಿ ಅತಂತ್ರರಾಗುವುದರಿಂದ ಅಂದು ದುಡಿದು ಅಂದೇ ತಿನ್ನುವ ಬೀಡಿ ಕಾರ್ಮಿಕನ ಅಸಹಾಯಕ ಸ್ಥಿತಿಯನ್ನು ಚಿತ್ರದ ನಾಯಕ 'ನಿಕ್ಕಿ' ಮೂಲಕ ಲೂಸಿಯಾ ಸಿನಿಮಾ ತೆರೆದಿಟ್ಟಿದೆ.

ಪ್ರತಿಯೊಬ್ಬ ಅಸಂಘಟಿತ ಕಾರ್ಮಿಕನ ಜೀವಂತ ಪ್ರತಿನಿಧಿ ನಾಯಕ 'ನಿಕ್ಕಿ' ಮೂರು ಸಾವಿರ ಸಂಬಳ ಸಿಗುವ ಸಿನಿಮಾ ಮಂದಿರದ ಕೆಲಸ ಬಿಟ್ಟು ಬೇರೇನನ್ನೂ ಮಾಡಲಾಗದ ಅಸಹಾಯಕ. ಒಂದೊಮ್ಮೆ ಹಾಗೆ ಮಾಡುವುದಿದ್ದರೂ, ಬೇರೊಂದು ಅಸಂಘಟಿತ ಕ್ಷೇತ್ರದ ದುಡಿಮೆಗಳಾದ ತರಕಾರಿ ಮಾರುವುದು, ಹೋಟೆಲ್ ಕಾರ್ಮಿಕ, ಸೆಕ್ಯೂರಿಟಿ ಗಾರ್ಡ್ ಇತ್ಯಾದಿ ನೌಕರಿಗಳು ಅವನ ಮುಂದಿರುವ ಆಯ್ಕೆಯಾಗಿರುತ್ತವೆ. ಈ ಕೆಲಸಗಳಿಂದ ಆತನ ಆದಾಯ ಹೆಚ್ಚುವ ಸಾಧ್ಯತೆಗಳೇ ಇಲ್ಲ. ಇನ್ನು ಜಾಗತೀಕರಣದಿಂದಾಗಿ ಹುಟ್ಟಿಬಂದಿರುವ ಉದ್ಯೋಗಗಳನ್ನು ಮಾಡಲು ಇಂಗ್ಲಿಷ್ ಜ್ಞಾನ ಅತ್ಯವಶ್ಯಕ. ಅದು ಆತನ ತಲೆಗೆ ಹೋಗದು. ಇಂಗ್ಲಿಷ್ ಕಲಿತರೂ ಮಲ್ಟಿಪ್ಲೆಕ್ಸ್ ಸಿನಿಮಾ ಮಂದಿರದಲ್ಲಿ ಕೆಲಸ. ಇನ್ನು ಅವನು ಏನನ್ನಾದರೂ ಸಾಧಿಸುವುದಿದ್ದರೆ ೧೫ ವರ್ಷಗಳಿಂದ ಕೊಳೆಯುತ್ತಿರುವ ಸಿನಿಮಾವನ್ನು ತೆರೆಗೆ ತರಲು ಹೋಗುವುದು. ೩೦ ರೂಪಾಯಿ ಟಿಕೇಟು ಕೊಂಡು



ಯಾರೂ ನೋಡಲುಬಾರದ ಪರಿಸ್ಥಿತಿ. ಹೆಚ್ಚೆಂದರೆ ಈತನ ಅಸಹಾಯಕ ಸ್ಥಿತಿ ಕಂಡು ಕೆಲವು ಗೆಳೆಯರು ಸಹಾಯಕ್ಕೆ ಬರುತ್ತಾರೆ, ಅಷ್ಟೆ! ಇಂದು ಕಡಿಮೆ ಆದಾಯದ ಕೆಲಸಗಳಲ್ಲಿ ದುಡಿಯುತ್ತಿರುವ ಯುವಕರಿಗೆ ಮದುವೆಗೆ ಹೆಣ್ಣು ಸಿಗದೆ ಇರುವುದು ಮುಂತಾದ ಜಾಗತೀಕರಣದ ಕೆಟ್ಟ ಪರಿಣಾಮಗಳನ್ನು 'ಲೂಸಿಯಾ' ಸಿನಿಮಾ ಸ್ಪಷ್ಟವಾಗಿ ಪರಿಚಯಿಸುತ್ತದೆ.

ಕನ್ನಡದಲ್ಲಿ ಇಂತಹ ಒಳ್ಳೆಯ ಸಿನಿಮಾ ನೀಡಿದ ನಿರ್ದೇಶಕ ಪವನ್ ಕುಮಾರ್ ಅವರು ಅಭಿನಂದನಾರ್ಹರು. ನಾಯಕ ನಟ, ಥಿಯೇಟರ್ ಮಾಲೀಕ ಶಂಕರಣ್ಣ ಪಾತ್ರದಲ್ಲಿನ ನಟನೆ ತುಂಬ ಸೊಗಸಾಗಿದೆ. ಕನಸುಗಳನ್ನು ತೋರಿಸಲು ಕಪ್ಪು–ಬಿಳುಪು ಸೀನುಗಳನ್ನು ಅಳವಡಿಸಿರುವುದು ಅರ್ಥಪೂರ್ಣವಾಗಿದೆ. ಉತ್ತಮ ಸಂಗೀತ, ಮತ್ತೆ ಮತ್ತೆ ಕೇಳಬೇಕೆನಿಸುವ ಹಾಡುಗಳು ಇದ್ದರೂ, ಒಂದು ವ್ಯಾಪಾರಿ ಸಿನಿಮಾಗೆ ಸಿಗುವಷ್ಟು ಪ್ರಚಾರ ಈ ಸಿನಿಮಾಗೆ ಸಿಗದೆ ಇರುವುದು 'ಲೂಸಿಯಾ' (ಜಾಗತೀಕರಣ) ಅಫೀಮನ್ನು ಸಮಾಜಕ್ಕೆ ನಿರಂತರವಾಗಿಸುವ ಉದ್ದೇಶವೆ ?


**ಎಸ್. ಶಂಕರ**

ಕೇರಾಫ್ : ಶ್ರೀನಿವಾಸ್

ನಂ. ೩೫೭/೮, ೪ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ, ರಾಮಕೃಷ್ಣನಗರ

ಇಲಿಯಾಜ್ ನಗರ, ಜೆ. ಪಿ. ನಗರ ಅಂಚೆ, ಬೆಂಗಳೂರು – ೫೬೦ ೦೭೮




ಕಾವ್ಯಲೋಕ



# ಬಯಲು ಸೀಮೆಯ ಲೇಖನಿ

ರಕ್ತ ಚೆಲ್ಲಿದೆ ಇಲ್ಲಿ
ಚಂದ್ರ ಪಡುವಣದಲ್ಲಿ
ಲೇಖನಿ ಋತುಸ್ರಾವವಾಗುವ ಹೊತ್ತು
ಇಷ್ಟವಿಲ್ಲವದು ಪ್ರಜಾಪ್ರಭುತ್ವದ ಮುಖವಾಡಕ್ಕೆ
ಏನು ಮಾಡಬೇಕಾಗಿದೆ ಈ ಲೇಖನಿ ?
ತಾಯಿ ಎದೆಹಾಲು ಬತ್ತಿದೆ
ಸುಖವ ಬಯಸದ ಶ್ರಮದ ಜೊತೆ

ಆಸೆ ಪಡದ ಪ್ರೀತಿಯಿದೆ
ಬಯಲು ಸೀಮೆಯ ಬರಡಾದ
ಮೂಳೆಗಳ ಸಂಗೀತದಂಥ
ನನ್ನೀ ಲೇಖನಿಗೆ ಋತುಸ್ರಾವವಾಗುವ ಹೊತ್ತು
ಬೇಕಿಲ್ಲ ಅದು ದ್ವೇಷದ ಪ್ರೀತಿಗೆ
ಏನು ಮಾಡಬೇಕಾಗಿದೆ ಈ ಲೇಖನಿ ?


**ವಸಂತ ಕಲಾಲ**

ಬಿ. ಕಾಂ. ಅಂತಿಮ ವರ್ಷದ ವಿದ್ಯಾರ್ಥಿ, ವಿಜಯನಗರ ಕಾಲೇಜು,

ಹೊಸಪೇಟೆ, ಬಳ್ಳಾರಿ ಜಿಲ್ಲೆ – ೫೮೩ ೨೦೧



‘ಮೆಕ್ಕಾ ದಾರಿ’ಯಲ್ಲಿ ಹಳ್ಳಿ ಮತ್ತು ನಗರಗಳ ಸಾಂಸ್ಕೃತಿಕ ಭಿನ್ನತೆ ಹಾಗೂ ಬದುಕಿನ ನ್ಯೂನತೆ ಅನಾವರಣಗೊಂಡಿದೆ. ಈ ನಾಟಕದಲ್ಲಿ ಎರಡು ಪ್ರಮುಖ ಮಹಿಳಾ ಪಾತ್ರಗಳು ಮುಖಾಮುಖಿಯಾಗುತ್ತವೆ. ಹೆಲೆನ್ ಗ್ರಾಮೀಣ ಸಂಸ್ಕೃತಿಯನ್ನು ಪ್ರತಿನಿಧಿಸಿದ್ದರೆ, ಎಲ್ಸಾ ಶಹರದ ಬಿಂದಾಸ್ ಸಂಸ್ಕೃತಿಯ ಪ್ರತೀಕವಾಗಿದ್ದಾಳೆ. ಇಬ್ಬರ ಜೀವನಶೈಲಿ ಮತ್ತು ಆಲೋಚನಾ ಕ್ರಮಗಳಲ್ಲಿ ಅಗಾಧವಾದ ಭಿನ್ನತೆ ಇದೆ. ಆದರೆ ಸ್ವೇಚ್ಛಾಚಾರದ ಪಾತ್ರವಾದ ಎಲ್ಸಾಗೆ ಸ್ವಾತಂತ್ರ್ಯದ ಅಗತ್ಯದ ಅರಿವಿದೆ. ಮುಗ್ಧ ಹೆಲೆನ್ ತನ್ನ ಅಸಹಾಯಕತೆಯಿಂದಾಗಿ ಸ್ವಾರ್ಥಿಗಳ ಕುತಂತ್ರಕ್ಕೆ ಬಲಿಪಶುವಾಗಲು ಸಿದ್ಧಳಾಗುತ್ತಾಳೆ. ಕೊನೆಗೆ ಗೆಳತಿ ಎಲ್ಸಾ ಆತ್ಮಸ್ಥೈರ್ಯವನ್ನು ತುಂಬಿದಾಗ ಹೆಲೆನ್ ಸ್ವತಂತ್ರವಾಗಿ ಬದುಕಲು ನಿರ್ಧರಿಸುತ್ತಾಳೆ. ಈಗ ನಮ್ಮ ಗ್ರಾಮೀಣ ಪ್ರದೇಶಗಳಲ್ಲೂ ಹೀಗೇ ಆಗಿದೆ. ಹೆಲೆನ್‌ಳಂತಹ ಅದೆಷ್ಟೋ ಮಹಿಳೆಯರು ಅಸಹಾಯಕರಾಗಿ ಶೋಷಣೆಗೊಳಗಾಗಿದ್ದಾರೆ. ಅಂಥವರಲ್ಲಿ ಆತ್ಮಸ್ಥೈರ್ಯ ತುಂಬುವಲ್ಲಿ, ಸ್ವಾತಂತ್ರ್ಯದ ಅರಿವು ಮೂಡಿಸುವಲ್ಲಿ ‘ಮೆಕ್ಕಾ ದಾರಿ’ ನಾಟಕದೊಳಗಿನ ಎರಡು ಮಹಿಳಾ ಪಾತ್ರಗಳು ಪ್ರತೀಕಗಳಾಗಿವೆ.

# ವ್ಯಕ್ತಿ ಸ್ವಾತಂತ್ರ್ಯದ ಪರಿಕಲ್ಪನೆಯಲ್ಲಿ ‘ಮೆಕ್ಕಾ ದಾರಿ’



ಹಲವಾರು ವರ್ಷಗಳ ನಂತರ ಪ್ರಸನ್ನ ಅವರು ನಾಟಕವೊಂದನ್ನು ನಿರ್ದೇಶಿಸಿದ್ದಾರೆ. ದೇಸಿ ಉತ್ಪನ್ನಗಳ ತಯಾರಿ ಮತ್ತು ಮಾರಾಟದ ಬಿಡುವಿಲ್ಲದ ಕೆಲಸಗಳಲ್ಲಿ ರಂಗಭೂಮಿಯ ಕೊಂಡಿ ಕಳಚಿಕೊಂಡರೇನೋ ಎಂದುಕೊಳ್ಳುತ್ತಿರುವಾಗಲೇ ಮತ್ತೆ ‘ಮೆಕ್ಕಾ ದಾರಿ’ ನಾಟಕವನ್ನು ತಯಾರಿಸಿ ಕೊಟ್ಟಿದ್ದು ಅಚ್ಚರಿಯ ಮತ್ತು ಸಂತಸದ ವಿಷಯ.

ದಕ್ಷಿಣ ಆಫ್ರಿಕಾದ ನೊಬೆಲ್ ಪ್ರಶಸ್ತಿ ಪುರಸ್ಕೃತ ನಾಟಕಕಾರ ಅಥೋಲ್ ಫುಗಾರ್ಡ್‌ರ ‘ರೋಡ್ ಟು ಮೆಕ್ಕಾ’ ನಾಟಕವನ್ನು ಹಿರಿಯ ರಂಗಕರ್ಮಿ ಪ್ರಸನ್ನರವರು ‘ಮೆಕ್ಕಾ ದಾರಿ’ ಹೆಸರಲ್ಲಿ ಭಾವಾನುವಾದ ಮಾಡಿ ‘ತರಿಕಿಟ ಕಲಾ ಕಮ್ಮಟ’ ತಂಡದ ಕಲಾವಿದರಿಗೆ ನಿರ್ದೇಶಿಸಿದ್ದಾರೆ. ೨೦೧೩ ಸೆಪ್ಟೆಂಬರ್, ೪ರಂದು ರವೀಂದ್ರ ಕಲಾಕ್ಷೇತ್ರದಲ್ಲಿ, ಬೆಳಕಿನ ತಜ್ಞ ದಿ॥ ಅ. ನ. ರಮೇಶ ಅವರ ನೆನಪಿನಲ್ಲಿ ‘ಅನಾವರಣ’ ರಂಗತಂಡ ಆಯೋಜಿಸಿದ ಕಾರ್ಯಕ್ರಮದಲ್ಲಿ ಈ ನಾಟಕವು ಪ್ರದರ್ಶನಗೊಂಡು ನೋಡುಗರಲ್ಲಿ ವಿಶೇಷ ಅನುಭೂತಿಯನ್ನು ಉಂಟುಮಾಡಿತು.

ಮಹಿಳೆಯರ ಶೋಷಣೆಯ ಆಯಾಮಗಳನ್ನು ವಿಭಿನ್ನ ರೀತಿಯಲ್ಲಿ ಅನಾವರಣಗೊಳಿಸುವ ‘ಮೆಕ್ಕಾ ದಾರಿ’ ನಾಟಕವು ಸಮಕಾಲೀನವಷ್ಟೇ ಅಲ್ಲ, ಸಾರ್ವಕಾಲಿಕ ಮಹಿಳಾ ಶೋಷಣೆಯನ್ನು ತೋರಿಸುವಂತಿದೆ. ದೇಶ ಯಾವುದಾದರೇನು ಮಹಿಳೆಯರ ತಳಮಳ ತಲ್ಲಣಗಳಿಗೆ ಕೊನೆಯಿಲ್ಲ, ದಕ್ಷಿಣ ಆಫ್ರಿಕಾ ಮೂಲದ ಈ ನಾಟಕದ ಪ್ರಮುಖ ಪಾತ್ರವಾದ ಹೆಲೆನ್‌ಳಂತಹ ಮಹಿಳೆಯರು ಇಲ್ಲಿ ನಮ್ಮ ದೇಶದಲ್ಲಿ, ನಮ್ಮ ರಾಜ್ಯದಲ್ಲಿ, ನಮ್ಮ ನಡುವೆಯೇ ಬೇಕಾದಷ್ಟು ಜನ ಸಿಕ್ಕುತ್ತಾರೆ. ಅವರ ನೋವಿನ ನೆಲೆಗಳು ಬೇರೆ ಬೇರೆಯಾಗಿದ್ದರೂ ಶೋಷಣೆಯ ಮೂಲ ಇಡೀ ವ್ಯವಸ್ಥೆಯಲ್ಲಿದೆ. ವರ್ಣಭೇದ, ಲಿಂಗಭೇದ, ಧರ್ಮಾಂಧತೆ ಮತ್ತು ಶೋಷಣೆಯನ್ನು ಮನಮುಟ್ಟುವಂತೆ ತೆರೆದಿಡುವ ಒಂದು ಸಾರ್ಥಕ ರಂಗಪ್ರಯೋಗ ‘ಮೆಕ್ಕಾ ದಾರಿ’. ಮ್ಯಾಕ್ಸಿಂ ಗಾರ್ಕಿಯ ‘ತಾಯಿ’

**ಶಶಿಕಾಂತ ಯಡಹಳ್ಳಿ**

ಕಾದಂಬರಿ / ನಾಟಕದ 'ತಾಯಿ' ಪಾತ್ರದಷ್ಟೇ ಸಶಕ್ತವಾಗಿ ಮೂಡಿಬಂದ ಮತ್ತೊಂದು ಪಾತ್ರವೆಂದರೆ ಅಥೋಲ್ ಫುಗಾರ್ಡ್‌ರ 'ಮೆಕ್ಕಾ ದಾರಿ' ನಾಟಕದ ಹೆಲೆನ್ ಪಾತ್ರ. ಆ ಹೆಲೆನ್‌ಳ ನೈಜಕಥೆ ಬಹಳ ವಿಶಿಷ್ಟವಾಗಿದೆ.

ಆ 'ಗೂಬೆ ಮನೆ'ಯ ಒಡತಿಯ ಹೆಸರು ಹೆಲೆನ್ ಎಲೆಝಬೆತ್ ಮಾರ್ಟಿನ್ಸ್. ಹುಟ್ಟಿದ್ದು ದಕ್ಷಿಣ ಆಫ್ರಿಕಾದ ನ್ಯೂ ಬೆಥೆಸ್ಡಾ ಎಂಬ ಪುಟ್ಟ ಹಳ್ಳಿಯಲ್ಲಿ (೧೮೯೭). ಪ್ರೀತಿಸಿ ಮದುವೆಯಾದ ಗಂಡನ ಮೋಸವನ್ನು ವಿರೋಧಿಸಿ ವಿಚ್ಛೇದನ ಕೊಟ್ಟು ತವರಿಗೆ ಬಂದ ಹೆಲೆನ್ ಹೆತ್ತವರ ಸೇವೆ ಮಾಡಿದ್ದು ೧೭ ವರ್ಷ. ೧೯೪೫ರ ಹೊತ್ತಿಗೆ ತಂದೆ ತಾಯಿ ಇಬ್ಬರೂ ಕಾಲವಶರಾದಾಗ ಒಂಟಿಯಾದಳು. ಜೊತೆಗೆ ಸಂಧಿವಾತದಿಂದಾಗಿ ಕಾಲುಗಳೇ ದುರ್ಬಲಗೊಂಡವು. ಊರವರ ಕಣ್ಣಲ್ಲಿ ವಿಲಕ್ಷಣ ಹೆಂಗಸಾದಳು. ಗೇಲಿಯ ವಸ್ತುವಾದಳು. ತನ್ನ ಒಂಟಿತನ ನೀಗಿಕೊಳ್ಳಲು ಸಿಮೆಂಟ್‌ನಲ್ಲಿ ಕಲಾಕೃತಿಗಳನ್ನು ತಯಾರಿಸತೊಡಗಿದಳು. ೩೦೦ಕ್ಕೂ ಹೆಚ್ಚು ಶಿಲ್ಪಕಲಾಕೃತಿಗಳನ್ನು ನಿರ್ಮಿಸಿ ತನ್ನ ಕಲಾ ಸಂಗ್ರಹಾಲಯಕ್ಕೆ 'ಗೂಬೆ ಮನೆ' (ಔಲ್ ಹೌಸ್) ಎಂದೇ ಹೆಸರಿಟ್ಟಿದ್ದಳು. ಆಕೆ ನಿರ್ಮಿಸಿದ ಪ್ರತಿಮೆಗಳಲ್ಲಿ ಗೂಬೆಗಳೇ ಹೆಚ್ಚಾಗಿದ್ದವು. ಆ ಪ್ರತಿಮೆಗಳನ್ನು ನೋಡಲು ಜನ ಬರತೊಡಗಿದರು. ಇಷ್ಟೆಲ್ಲಾ ಅಪರೂಪದ ಕಲಾಕೃತಿಗಳನ್ನು ಸೃಷ್ಟಿಸಿದಾಕೆಯ ದೃಷ್ಟಿಯೇ ಕೈಕೊಟ್ಟಿತು. ಬದುಕೇ ದುಸ್ತರವಾಯಿತು. ಬದುಕನ್ನು, ಬೆಳಕನ್ನು, ಎಲ್ಲಕ್ಕಿಂತ ಹೆಚ್ಚು ಪ್ರೀತಿಸಿದ ಹೆಲೆನ್ ದೃಷ್ಟಿಹೀನತೆಯಿಂದಾಗಿ ಗಾಢಾಂಧಕಾರದಲ್ಲಿ ಮುಳುಗಿದಳು. ಬದುಕುವ ಆಸೆಯನ್ನೇ ಕಳೆದುಕೊಂಡಳು. ೧೯೭೬ ಆಗಸ್ಟ್ ೮ರಂದು ಆತ್ಮಹತ್ಯೆ ಮಾಡಿಕೊಂಡಳು. ಹೋಗುವ ಮೊದಲು ಅಪೂರ್ವ ಕಲಾಕೃತಿಗಳನ್ನು ಲೋಕಕ್ಕೆ ಅರ್ಪಿಸಿ ಹೋದಳು. ಆ ಮೂಲಕ ತನ್ನ ನೆನಪುಗಳನ್ನು ಇತಿಹಾಸದುದ್ದಕ್ಕೂ ಬಿಟ್ಟುಹೋದಳು.




ಹೆಲೆನ್ ನಿರ್ಗಮನದ ೧೫ ವರ್ಷಗಳ ನಂತರ ೧೯೯೧ರಲ್ಲಿ ದಕ್ಷಿಣ ಆಫ್ರಿಕಾದ ಸರಕಾರ 'ಗೂಬೆ ಮನೆ'ಯನ್ನು ರಾಷ್ಟ್ರೀಯ ಸ್ಮಾರಕವಾಗಿ ಘೋಷಿಸಿತು. ಕ್ಯಾಮಲ್ ಯಾರ್ಡ್‌ನ್ನು ಕಲಾವಸ್ತು ಸಂಗ್ರಹಾಲಯವನ್ನಾಗಿ ಸರಕಾರ ಅಭಿವೃದ್ಧಿಪಡಿಸಿತು. "ಔಲ್ ಹೌಸ್ ಫೌಂಡೇಷನ್" ಅದರ ನಿರ್ವಹಣೆಯ ಜವಾಬ್ದಾರಿಯನ್ನು ಹೊತ್ತಿತು. ಈಗ ಇದೆಲ್ಲಾ ಇತಿಹಾಸ. ಬರೀ ಮ್ಯೂಸಿಯಂ ಆಗಿದ್ದರೆ ಹೆಲೆನ್ ಎಲೆಝಬೆತ್ ದಕ್ಷಿಣ ಆಫ್ರಿಕಾದ ಹೊರಗೆ ಸುದ್ದಿ ಆಗುತ್ತಿರಲಿಲ್ಲವೇನೋ. ಸತ್ತ ಮೇಲೂ ಆಕೆಯ ಬದುಕು ಜಗತ್ತಿಗೆ ತಿಳಿಯುವಂತಾಗಿದ್ದು 'ಎಲ್ಸಾ' ಎಂಬ ಮಹಿಳೆಯಿಂದ. ಹೆಲೆನ್ ಬದುಕಿದ್ದಾಗ ತನ್ನ ಅಧ್ಯಯನಕ್ಕೆಂದು ಔಲ್ ಹೌಸ್‌ಗೆ ಭೇಟಿ ಕೊಟ್ಟ ಎಲ್ಸಾ, ಹೆಲೆನ್‌ಳ ಪೂರ್ವಾಪರಗಳೆಲ್ಲವನ್ನು ತಿಳಿದುಕೊಂಡಳು. ಮುಂದೊಮ್ಮೆ ನೊಬೆಲ್ ಪ್ರಶಸ್ತಿ ಪುರಸ್ಕೃತ ನಾಟಕಕಾರ ಅಥೋಲ್ ಫುಗಾರ್ಡ್‌ರನ್ನು ಎಲ್ಸಾ ಭೇಟಿಮಾಡಿದ್ದಾಗ 'ಗೂಬೆ ಮನೆ'ಯ ವೃತ್ತಾಂತದ ಜೊತೆಗೆ ಹೆಲೆನ್‌ಳ ದುರಂತಗಾಥೆಯನ್ನೂ ಹೇಳಿದಳು. ಎಲ್ಲಾ ಕೇಳಿದ ಅಥೋಲ್ ಹೋಗಿ ಕುಳಿತಿದ್ದು ಹೆಲೆನ್ ಕುರಿತು ನಾಟಕ ಬರೆಯುವುದಕ್ಕೆ.

ಆ ನಾಟಕವೇ 'ವೇ ಟು ಮೆಕ್ಕಾ'. ಹೆಲೆನ್ ಜೊತೆ ಎಲ್ಸಾಳನ್ನೂ ಪಾತ್ರವಾಗಿಸಿ, ಇಬ್ಬರನ್ನೂ ಮುಖಾಮುಖಿಯಾಗಿಸಿ ನಾಟಕವನ್ನು ಹೆಣೆದು ಹೆಲೆನ್‌ಳ ತಲ್ಲಣಗಳನ್ನು ಬಿಚ್ಚಿಟ್ಟ ಅಥೋಲ್ ಎರಡು ಪ್ರಮುಖ ಕಾಲ್ಪನಿಕ ಅಂಶಗಳನ್ನು ನಾಟಕದಲ್ಲಿ ಸೇರಿಸಿಬಿಟ್ಟ. ಮೊದಲನೆಯದಾಗಿ, ಚರ್ಚ್ ಸಮಿತಿಯ ಪಾದ್ರಿಯ ಪಾತ್ರ ಹುಟ್ಟು ಹಾಕಿ ಹೆಲೆನ್‌ಳ ಮನೆ ಕಬಳಿಸಲು ಆತ ಆಕೆಯನ್ನು ಜನರ ಕಣ್ಣಲ್ಲಿ ಹುಚ್ಚಿಯನ್ನಾಗಿಸಿದ ಹಾಗೂ ವೃದ್ಧಾಶ್ರಮ ಸೇರಿಸಲು ಒತ್ತಾಯಿಸಿದ ಎಂಬುದು. ಎರಡನೆಯದಾಗಿ, ಹೆಲೆನ್‌ಳ 'ಕ್ಯಾಮಲ್ ಯಾರ್ಡ್'ನಲ್ಲಿ ಒಂಟೆಯ ಕಲಾಕೃತಿಗಳಿದ್ದವಲ್ಲಾ ಅವುಗಳನ್ನು ಅರಬಸ್ತಾನದ ಒಂಟೆಗಳಿಗೆ ಗಂಟುಹಾಕಿ ಅಲ್ಲಿಂದ ಇಸ್ಲಾಮಿನ ಮೆಕ್ಕಾದವರೆಗೂ ತನ್ನ ಊಹೆಯನ್ನು ವಿಸ್ತರಿಸಿ ಹೆಲೆನ್‌ಳಿಗೆ 'ಮೆಕ್ಕಾದ ದಾರಿ' ತೋರಿದ. ಆಕೆಯ ಬದುಕಲ್ಲಿ ಮೆಕ್ಕಾವನ್ನು ಬೆಳಕಿನ ಸಂಕೇತವಾಗಿಸಿದ. ಹೀಗೆ ಧಾರ್ಮಿಕ ಸಂಘರ್ಷ ಮತ್ತು ಸೌಹಾರ್ದತೆಗಳನ್ನು ಹೆಲೆನ್‌ಳ ಕಥೆಗೆ ಸೇರಿಸಿ 'ವೇ ಟು ಮೆಕ್ಕಾ' ನಾಟಕ ಸಿದ್ಧವಾಯಿತು.

ದಕ್ಷಿಣ ಆಫ್ರಿಕಾ ಮಾತ್ರವಲ್ಲ ಇಂಗ್ಲೆಂಡಿನ ಪ್ರತಿಷ್ಠಿತ ಬ್ರಾಡ್ ವೇ ಥಿಯೇಟರ್, ಫ್ಲೋರಿಡಾದ ರೆಪರ್ಟರಿ ಥಿಯೇಟರ್... ಹೀಗೆ ಹಲವಾರು ದೇಶಗಳ ಪ್ರತಿಷ್ಠಿತ ರಂಗಮಂದಿರಗಳಲ್ಲಿ ಈ ನಾಟಕ ಪ್ರದರ್ಶನಗೊಂಡಿತು. ಈಗ ಪ್ರಸನ್ನ ಆ ನಾಟಕವನ್ನು 'ಮೆಕ್ಕಾ ದಾರಿ' ಹೆಸರಲ್ಲಿ ಕನ್ನಡಕ್ಕೆ ರೂಪಾಂತರಿಸಿ ನಿರ್ದೇಶಿಸಿದ್ದಾರೆ. ಎಲ್ಲಿಯ ದಕ್ಷಿಣ ಆಫ್ರಿಕಾದ ಕುಗ್ರಾಮ ? ಎಲ್ಲಿಯ ಕರ್ನಾಟಕ ? ಎತ್ತಣಿಂದೆತ್ತ ಸಂಬಂಧ ? ಆದರೆ ರಂಗಭೂಮಿಯಲ್ಲಿ ಎಲ್ಲವೂ ಸಾಧ್ಯ. ಹೀಗಾಗಿ 'ಹೆಲೆನ್' ಮೆಕ್ಕಾದ ದಾರಿಯಲ್ಲಿ ಮೂಡಿಬಂದಿದ್ದಾಳೆ. ಪ್ರಸನ್ನರವರು ಈ ನಾಟಕವನ್ನು ಮನಮಿಡಿಯುವಂತೆ ಕಟ್ಟಿಕೊಟ್ಟಿದ್ದಾರೆ. ಹೆಲೆನ್ ತನ್ನ ಕಲಾಕೃತಿಗಳ ಮೂಲಕ ಪ್ರಸಿದ್ಧಳಾಗಿರುವಂತೆಯೇ ನಾಟಕದ ಮೂಲಕ ವಿಶ್ವವ್ಯಾಪಿಯಾಗಿ ಅಮರಳಾಗಿದ್ದಾಳೆ.

'ಮೆಕ್ಕಾ ದಾರಿ'ಯಲ್ಲಿ ಪ್ರಸ್ತುತಗೊಂಡ ನಾಟಕದ ಕಥೆ ಹೀಗಿದೆ. ದಕ್ಷಿಣ ಆಫ್ರಿಕಾದ ಕೇಪ್‌ಟೌನ್‌ನಿಂದ ಉತ್ತರಕ್ಕೆ ಸುಮಾರು ಎಂಟುನೂರು ಮೈಲಿ ದೂರವಿರುವ ಕುಗ್ರಾಮದಲ್ಲಿ ಹೆಲೆನ್ ಎನ್ನುವ ಅನಾಥ ವಿಧವೆ ಮುದುಕಿ ವಾಸಿಸುತ್ತಿದ್ದಳು. ಗಂಡ ಸತ್ತ ನಂತರ ತನ್ನ ಒಂಟಿತನವನ್ನು ಕಳೆಯಲು ಕಲಾಸೃಷ್ಟಿಗಳಿಗೆ ಬೆಳಕನ್ನು ಕಾಣುತ್ತಿದ್ದಳು. ಗಾಜಿನ ಚೂರು, ಟೈಲ್ಸ್ ತುಂಡುಗಳು, ಸಿಮೆಂಟು, ಮರಳು ಹೀಗೆ... ವ್ಯರ್ಥವೆನಿಸುವ ಪದಾರ್ಥಗಳಿಂದ ಒಂಟೆ, ಗೂಬೆ, ನವಿಲು, ಮೆಕ್ಕಾ ಮುಂತಾದ ಅನೇಕ ಜಾನಪದ ಮಾದರಿಯ ಕಲಾಕೃತಿಗಳನ್ನು ಸೃಷ್ಟಿಸಿ ನೆಮ್ಮದಿಯಾಗಿರಲು ಪ್ರಯತ್ನಿಸುತ್ತಿದ್ದಳು. ತನ್ನಷ್ಟಕ್ಕೆ ತಾನಿದ್ದವಳನ್ನು ಸುಮ್ಮನೆ ಬಿಡದ ಕ್ರೈಸ್ತ ಮತಾಂಧ ಸಮಾಜ ಆಕೆಯನ್ನು ದೈವವಿರೋಧಿಯಾಗಿ ಭಾವಿಸಿತು. ಆಕೆಯ ಕಲಾಕೃತಿಗಳಿಗೆ ಪಾಖಂಡಿತನವನ್ನು ಆರೋಪಿಸಿತು. ಆಕೆಯ ಬಗ್ಗೆ ಅಪಪ್ರಚಾರ ಮಾಡಲಾಯಿತು. ಆಕೆಯ ಮನೆಗೆ ಕಲ್ಲು ಹೊಡೆಸಲಾಯಿತು. ಆಕೆಯ ಮನೆ-ಆಸ್ತಿಪಾಸ್ತಿಯನ್ನು ಕಬಳಿಸಿ ಹೆಲೆನ್‌ಳನ್ನು ವೃದ್ಧಾಶ್ರಮಕ್ಕೆ ತಳ್ಳಲು ಕುತಂತ್ರವನ್ನು ರಚಿಸಲಾಯಿತು. ಆದರೆ ಆ ಮುದುಕಿಯ ಗೆಳತಿ ಎಲ್ಸಾ ಬಂದು ಹೆಲೆನ್‌ಳ ಅಸಹಾಯಕತೆ, ಮುಗ್ಧತೆಗಳನ್ನು ಬಳಸಿಕೊಂಡು ಪಾದ್ರಿ ಮಾಡುವ ವಂಚನೆಯನ್ನು ಬಯಲುಗೊಳಿಸಿ ಹೆಲೆನ್‌ಳಲ್ಲಿ ಆತ್ಮಸ್ಥೈರ್ಯವನ್ನು ತುಂಬುತ್ತಾಳೆ. ಕೊನೆಗೆ ವೃದ್ಧಾಶ್ರಮಕ್ಕೆ ಸೇರಲು ಅರ್ಜಿಗೆ ಸಹಿ ಹಾಕುವುದನ್ನು ನಿರಾಕರಿಸಿದ ಹೆಲೆನ್ ತನ್ನ ಆರೋಗ್ಯವನ್ನು ಕಾಪಾಡಿಕೊಂಡು ಸ್ವತಂತ್ರವಾಗಿ ಬದುಕುವ ಪಣತೊಡುತ್ತಾಳೆ.

ಇಂತಹ ಅನಾಮಿಕ ಅದ್ಭುತ ಕಲಾವಿದೆಯ ಬದುಕನ್ನು ನಾಟಕವಾಗಿಸಿದ ಅಥೋಲ್ ಫುಗಾರ್ಡ್ ಮತ್ತು ಆ ನಾಟಕವನ್ನು ಕನ್ನಡಕ್ಕೆ ರೂಪಾಂತರಿಸಿ ನಿರ್ದೇಶಿಸಿದ ಪ್ರಸನ್ನ ಅವರನ್ನು ಒತ್ತಾಯಿಸಿ ಈ ನಾಟಕದ ಪ್ರದರ್ಶನಕ್ಕೆ ಕಾರಣರಾದ ಮಹಿಳಾ ಹೋರಾಟಗಾರ್ತಿ ದು. ಸರಸ್ವತಿ ಇವರೆಲ್ಲರೂ ಅಭಿನಂದನಾರ್ಹರು.

ಇಡೀ ನಾಟಕ ವ್ಯಕ್ತಿ ಸ್ವಾತಂತ್ರ್ಯದ ಕುರಿತದ್ದಾಗಿದೆ. ಹೆಲೆನ್ ಕಲೆಯಲ್ಲಿ ತನ್ನ ಬದುಕನ್ನು ಕಾಣಲು, ತನ್ನ ಕಲಾಸೃಷ್ಟಿಯ ಮೂಲಕ ಬೆಳಕನ್ನು ನೋಡಲು ಪ್ರಯತ್ನಿಸುತ್ತಾಳೆ. ಯಾರ ಹಂಗೂ ಇಲ್ಲದೆ ಸ್ವತಂತ್ರಳಾಗಿ ತನಗಿಷ್ಟ ಬಂದ ರೀತಿಯಲ್ಲಿ ಬದುಕಲು ಇಚ್ಛಿಸುತ್ತಾಳೆ. ಆದರೆ ಮತಾಂಧ ಪಾದ್ರಿ ಮತ್ತು ಧರ್ಮಾಂಧರಾದ ಜನ ಅಸಹಾಯಕ ಒಂಟಿ ಮುದುಕಿಯನ್ನು ತನ್ನಷ್ಟಕ್ಕೆ

ಬದುಕಲು ಬಿಡದೆ ಗೋಳುಹುಯ್ದುಕೊಳ್ಳುತ್ತಾರೆ. ಮತಧರ್ಮ ಎನ್ನುವುದು ತನ್ನ ಪರಿಧಿಯೊಳಗೆ ಬರದವರನ್ನು ಹಲವಾರು ಆಸೆ ಆಮಿಷಗಳನ್ನು ತೋರಿಸಿ ಮಣಿಸಲು ನೋಡುತ್ತದೆ. ವಿರೋಧಿಸಿದವರನ್ನು ನಾಶಮಾಡಲು ಪ್ರಯತ್ನಿಸುತ್ತದೆ ಎನ್ನುವುದರ ಅರ್ಥಪೂರ್ಣ ಚಿತ್ರಣ ಇಲ್ಲಿದೆ.

ಧಾರ್ಮಿಕ ಶೋಷಣೆ ಹೆಚ್ಚಾದಂತೆಲ್ಲಾ ಹೆಲೆನ್ ಚರ್ಚಿನಿಂದ ವಿಮುಖಳಾಗುತ್ತಾಳೆ. ಆದರೆ ಆಕೆಯನ್ನು ಯಾಕೆ ಮುಸ್ಲಿಮರು ಆರಾಧಿಸುವ ಮೆಕ್ಕಾ ಸೆಳೆಯುತ್ತದೆ? ಯಾಕೆ ಮೆಕ್ಕಾದ ಭವ್ಯ ದೇವಸ್ಥಾನದಲ್ಲಿರುವ ಕನ್ನಡಿಯಿಂದಾವೃತವಾದ ಕೋಣೆ ಆಕರ್ಷಿಸುತ್ತದೆ? ಯಾಕೆ ಆಕೆಗೆ ಒಂಟೆಗಳ ಮೇಲೆ ಮೆಕ್ಕಾಗೆ ಪ್ರಯಾಣ ಮಾಡುವವರೆಲ್ಲಾ ಜಾಣರಂತೆ ತೋರುತ್ತಾರೆ? ಗೊತ್ತಿಲ್ಲ. ಎಲ್ಲಾ ಧರ್ಮಗಳಲ್ಲೂ ಮತಾಂಧತೆ, ಶೋಷಣೆ ಇದ್ದೇ ಇರುತ್ತದೆಂಬ ಪರಿಕಲ್ಪನೆಯೂ ಇಲ್ಲದ ಮುಗ್ಧ ಮುದುಕಿ ಆಕೆ. ತಾನಿರುವ ಧರ್ಮದಲ್ಲಿ ಕತ್ತಲಿದೆ. ಅದಕ್ಕಾಗಿ ಬೆಳಕನ್ನು ಇನ್ನೊಂದು ಧರ್ಮದ ಸಂಕೇತದಲ್ಲಿ ಹುಡುಕುವ ಆಕೆಯ ಪ್ರಯತ್ನ ವೈಚಾರಿಕತೆಯನ್ನು ಮೀರಿದ್ದಾಗಿದೆ. ಒಂದು ನಂಬಿಕೆಯನ್ನು ಕಳೆದುಕೊಳ್ಳಲು ಇನ್ನೊಂದು ನಂಬಿಕೆಯನ್ನು ಅಪ್ಪಿಕೊಳ್ಳುವ ಅನಿವಾರ್ಯತೆಯೂ ಹೆಲೆನ್‌ಳದ್ದಾಗಿದ್ದರಿಂದ ಮೆಕ್ಕಾ ಆಕೆಯ ಬದುಕಿನ ಬೆಳಕಿನ ದಾರಿಯಾಗಿ ತೋರುತ್ತದೆ.

'ಮೆಕ್ಕಾ ದಾರಿ'ಯಲ್ಲಿ ಹಳ್ಳಿ ಮತ್ತು ನಗರಗಳ ಸಾಂಸ್ಕೃತಿಕ ಭಿನ್ನತೆ ಹಾಗೂ ಬದುಕಿನ ನ್ಯೂನತೆ ಅನಾವರಣಗೊಂಡಿದೆ. ಈ ನಾಟಕದಲ್ಲಿ ಎರಡು ಪ್ರಮುಖ ಮಹಿಳಾ ಪಾತ್ರಗಳು ಮುಖಾಮುಖಿಯಾಗುತ್ತವೆ. ಹೆಲೆನ್ ಗ್ರಾಮೀಣ ಸಂಸ್ಕೃತಿಯನ್ನು ಪ್ರತಿನಿಧಿಸಿದ್ದರೆ, ಎಲ್ಸಾ ಶಹರದ ಬಿಂದಾಸ್ ಸಂಸ್ಕೃತಿಯ ಪ್ರತೀಕವಾಗಿದ್ದಾಳೆ. ಇಬ್ಬರ ಜೀವನಶೈಲಿ ಮತ್ತು ಆಲೋಚನಾ ಕ್ರಮಗಳಲ್ಲಿ ಅಗಾಧವಾದ ಭಿನ್ನತೆ ಇದೆ. ಆದರೆ ಸ್ವೇಚ್ಛಾಚಾರದ ಪಾತ್ರವಾದ ಎಲ್ಸಾಗೆ ಸ್ವಾತಂತ್ರ್ಯದ ಅಗತ್ಯದ ಅರಿವಿದೆ. ಮುಗ್ಧ ಹೆಲೆನ್ ತನ್ನ ಅಸಹಾಯಕತೆಯಿಂದಾಗಿ ಸ್ವಾರ್ಥಿಗಳ ಕುತಂತ್ರಕ್ಕೆ ಬಲಿಪಶುವಾಗಲು ಸಿದ್ಧಳಾಗುತ್ತಾಳೆ. ಕೊನೆಗೆ ಗೆಳತಿ ಎಲ್ಸಾ



ಆತ್ಮಸ್ಥೈರ್ಯವನ್ನು ತುಂಬಿದಾಗ ಹೆಲೆನ್ ಸ್ವತಂತ್ರವಾಗಿ ಬದುಕಲು ನಿರ್ಧರಿಸುತ್ತಾಳೆ. ಈಗ ನಮ್ಮ ಗ್ರಾಮೀಣ ಪ್ರದೇಶಗಳಲ್ಲೂ ಹೀಗೇ ಆಗಿದೆ. ಹೆಲೆನ್‌ಳಂತಹ ಅದೆಷ್ಟೋ ಮಹಿಳೆಯರು ಅಸಹಾಯಕರಾಗಿ ಶೋಷಣೆಗೊಳಗಾಗಿದ್ದಾರೆ. ಅಂಥವರಲ್ಲಿ ಆತ್ಮಸ್ಥೈರ್ಯ ತುಂಬುವಲ್ಲಿ, ಸ್ವಾತಂತ್ರ್ಯದ ಅರಿವು ಮೂಡಿಸುವಲ್ಲಿ 'ಮೆಕ್ಕಾ ದಾರಿ' ನಾಟಕದೊಳಗಿನ ಎರಡು ಮಹಿಳಾ ಪಾತ್ರಗಳು ಪ್ರತೀಕಗಳಾಗಿವೆ.

ದಲಿತ ಮತ್ತು ಮಹಿಳಾಪರ ಹೋರಾಟಗಾರ್ತಿ, 'ಮಾನಸ' ಪತ್ರಿಕೆಯ ಸಂಪಾದಕಿ ದು. ಸರಸ್ವತಿಯವರ ಸ್ತ್ರೀಪರ ಆಶಯಕ್ಕೆ ಪೂರಕವಾಗಿ ಸ್ತ್ರೀವಾದಿ ಚಿಂತನೆಗಳ ಆಯಾಮಗಳನ್ನು ಕಟ್ಟಿಕೊಡುವ ನಿಟ್ಟಿನಲ್ಲಿ 'ಮೆಕ್ಕಾ ದಾರಿ' ನಾಟಕ ಪ್ರಸ್ತುತಗೊಂಡಿದೆ. ಸ್ವತಃ ಸರಸ್ವತಿಯವರೇ ಹೆಲೆನ್ ಪಾತ್ರವನ್ನು ಅಭಿನಯಿಸಿದ್ದು ಅನನ್ಯವಾಗಿದೆ. ಆ ಪಾತ್ರಕ್ಕೆ ಬೇಕಾದ ಅಸಹಾಯಕತೆ, ಮುಗ್ಧತೆಗಳಿಗೆ ಸರಸ್ವತಿಯವರು ಹೇಳಿ ಮಾಡಿಸಿದಂತಿದ್ದಾರೆ, ಎಲ್ಸಾ ಪಾತ್ರಕ್ಕೆ ವಾಣಿ ಪೆರಿಯೋಡಿಯವರು ಜೀವತುಂಬಿ ಅಭಿನಯಿಸಿದ್ದಾರೆ. ಪ್ರಸಾಧನ ಕಲೆಯಲ್ಲಿ ಪಳಗಿದ ಮೇಕಪ್ ಮ್ಯಾನ್ ರಾಮಕೃಷ್ಣ ಬೆಳ್ತೂರ್ ನಟನೆಯಲ್ಲೂ ತಮ್ಮ ಕೌಶಲವನ್ನು ತೋರಿಸಿದ್ದು ಪಾದ್ರಿ ಮಾರಿಸಸ್ ಪಾತ್ರಕ್ಕೆ ನ್ಯಾಯ ಒದಗಿಸಲು ತುಂಬಾನೇ ಶ್ರಮಿಸಿದ್ದಾರೆ. ಈ ಮೂವರೂ ಕಲಾವಿದರಲ್ಲಿ ಯಾರೂ ಅಭಿನಯದಲ್ಲಿ ಪಳಗಿದವರಲ್ಲ, ವೃತ್ತಿಪರ ನಟರೂ ಅಲ್ಲ, ನೀನಾಸಂ–ಎನ್. ಎಸ್. ಡಿ. ಪದವೀಧರರೂ ಅಲ್ಲ, ಆದರೆ ಪ್ರಸನ್ನರಂತಹ ನಿರ್ದೇಶಕರ ಕೈಗೆ ಸಿಕ್ಕರೆ ಹೇಗೆ ವ್ಯಕ್ತಿಗಳು ಪಾತ್ರಗಳಾಗಿ ರೂಪಾಂತರ ಹೊಂದುತ್ತಾರೆ ಎನ್ನುವುದಕ್ಕೆ ಈ ನಾಟಕದಲ್ಲಿ ಆ ಮೂವರ ಅಭಿನಯವೇ ಸಾಕ್ಷಿ.

ಪ್ರತಿಯೊಂದು ಚಲನೆ, ಬ್ಲಾಕಿಂಗ್, ಆಗಮನ, ನಿರ್ಗಮನ ಎಲ್ಲವೂ ಕರಾರುವಾಕ್ಕಾಗಿತ್ತು. ಇದು ಬರೀ ಮಾತಿನ ನಾಟಕ. ನಾಟಕದ ತುಂಬ ಬರೀ ಮಾತು ಮಾತು ಮಾತು. ಆದರೆ ಮಾತಿನ ಏರಿಳಿತ, ಸಂಭಾಷಣೆಗಳ ಸ್ವಾರಸ್ಯ, ವ್ಯಂಗ್ಯವನ್ನು ಪಂಚ್ ಮಾಡುವ ವಿಧಾನ ಎಲ್ಲವೂ ನೇರವಾಗಿ ಪ್ರೇಕ್ಷಕರ ಗ್ರಹಿಕೆಗೆ ತಲುಪುವಂತಿದ್ದವು. ಅಪೂರ್ವ ಸೆಟ್ ಪರಿಕರಗಳಿಲ್ಲದೆ, ಹಾಡು ಸಂಗೀತಗಳ ಮಧುರತೆಗಳಿಲ್ಲದೆ, ಬೆಳಕಿನ ಚಮತ್ಕಾರಗಳಿಲ್ಲದೆ, ಹಿನ್ನೆಲೆ ಸೌಂಡ್ ಎಫೆಕ್ಟ್‌ಗಳಿಲ್ಲದೆ, ದೃಶ್ಯವೈಭವಗಳಿಲ್ಲದೆ ಸರಿ ಸುಮಾರು ಎರಡು ಗಂಟೆಗಳ ಕಾಲ ಕೇವಲ ಮೂರು ಪಾತ್ರಗಳನ್ನಿಟ್ಟುಕೊಂಡು ಮಾತಿನ ಮೂಲಕ ಏಕಾಂಕ ನಾಟಕವನ್ನು ಕಟ್ಟಿಕೊಡುವುದು ಅಷ್ಟು ಸುಲಭಸಾಧ್ಯವಲ್ಲ. ಬಹು ವರ್ಷಗಳ ನಂತರ ನಾಟಕವೊಂದನ್ನು ನಿರ್ದೇಶಿಸಿದ ಪ್ರಸನ್ನ ಅವರು ತಮ್ಮಲ್ಲಿರುವ ನಿರ್ದೇಶಕ ಇನ್ನೂ ಕ್ರಿಯಾಶೀಲನಾಗಿದ್ದಾನೆ ಎಂಬುದನ್ನು ಈ ನಾಟಕದ ಮೂಲಕ ಸಾಬೀತುಪಡಿಸಿದ್ದಾರೆ.

ಮೂಡ್ ಸೃಷ್ಟಿಸಲು ಆಗಾಗ ಆಲಾಪಗಳನ್ನು ಬಳಸಲಾಗಿದೆಯಾದರೂ ಅವು ಕೆಲವೊಮ್ಮೆ ಸಂಭಾಷಣೆಗೆ ಓವರ್‌ಲ್ಯಾಪ್ ಆಗಿದ್ದು ಮಾತನ್ನು ನುಂಗಿಹಾಕುವಂತಿತ್ತು. ಬೆಳಕಿನಲ್ಲಿ ಏನೂ ವ್ಯತ್ಯಾಸವಿಲ್ಲ. ಇಡೀ ನಾಟಕ ನಿಂತಿದ್ದೇ ಬೆಳಕಿನ ರೂಪಕದ ಮೇಲೆ. ಆದರೆ ಬೆಳಕಿನ ವಿನ್ಯಾಸವೇ ತುಂಬ ಪೇಲವವಾಗಿತ್ತು. ನಿರ್ದೇಶಕರು ತುಂಬ ಸರಳವಾಗಿ ನಾಟಕವನ್ನು ಕಟ್ಟಿಕೊಟ್ಟಿದ್ದಾರೆ. ನಟನೆಯಿಂದಲೇ ನಾಟಕ ಪ್ರೇಕ್ಷಕರಿಗೆ ತಲುಪಬೇಕೇ ಹೊರತು ಇತರ ಪೂರಕ ರಂಗಸಾಮಗ್ರಿಗಳಿಂದಲ್ಲ ಎಂದು ತಮ್ಮೆಲ್ಲಾ ನಾಟಕಗಳ ಮೂಲಕ ಪ್ರತಿಪಾದಿಸಿದ ಪ್ರಸನ್ನ ಅವರು ನಟರ ಅಭಿನಯದ ಮೇಲೆ ತಮ್ಮೆಲ್ಲಾ ಗಮನವನ್ನು ಕೇಂದ್ರೀಕರಿಸಿದ್ದಾರೆ. ಆ ಮೂರು ಪಾತ್ರಗಳ ಮೂಲಕ ಪ್ರೇಕ್ಷಕರಿಗೆ 'ನಟನೆಯ ಪಾಠ'ಗಳನ್ನು ಹೇಳಿಕೊಟ್ಟಿದ್ದಾರೆಂದೆನಿಸುತ್ತದೆ.

ಹೆಲೆನ್‌ಳ ನಿಜಜೀವನದ ಕೊನೆ ಹಾಗೂ ಅಥೋಲ್‌ರವರ ಮೂಲ ನಾಟಕದ ಅಂತ್ಯ ದುಃಖಾಂತ್ಯವಾಗಿದ್ದರೂ, ಪ್ರಸನ್ನರ ಸುದೀರ್ಘ ಮಾತಿನ ಈ ನಾಟಕ ಸುಖಾಂತ್ಯವಾಗಿ ಕೊನೆಗೊಳ್ಳುತ್ತದೆ. ಅದೇನೇ ಇರಲಿ, ವೈರುಧ್ಯಗಳಲ್ಲೇ ವ್ಯಕ್ತಿ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಹೇಳುವುದರಲ್ಲಿ 'ಮೆಕ್ಕಾ ದಾರಿ' ಯಶಸ್ವಿಯಾಗಿದೆ.

**ಶಶಿಕಾಂತ ಯಡಹಳ್ಳಿ**
ನಂ. ೧೩೧, ರಾಮಮಂದಿರ ರಸ್ತೆ, ದೊಮ್ಮಲೂರು
ಬೆಂಗಳೂರು – ೫೬೦ ೦೭೧



# ಭಾರತದ ವಿದೇಶಾಂಗ ನೀತಿ ಎತ್ತ ಸಾಗಿದೆ ?

ಅಂತರರಾಷ್ಟ್ರೀಯ ವಿದ್ಯಮಾನಗಳನ್ನು ಕುರಿತು ನಾವು ತಳೆಯುವ ಧೋರಣೆಗಳು ನಮ್ಮ ಸಾರ್ವಭೌಮತ್ವಕ್ಕೆ ಚ್ಯುತಿ ಉಂಟಾಗದಂತೆ ಇರಬೇಕು, ಸ್ವತಂತ್ರವಾದ್ದಾಗಿರಬೇಕು, ರಚನಾತ್ಮಕವಾಗಿರಬೇಕು. ಅಂಥ ನಿಲುವನ್ನು ತಳೆದಾಗ ಅದು ದೇಶದ ಘನತೆ, ಗೌರವಗಳನ್ನು ಹೆಚ್ಚಿಸುವುದಲ್ಲದೆ, ಮೆಚ್ಚುಗೆಗೂ ಅರ್ಹವಾಗಿರುತ್ತದೆ. ಇದು ಒಂದು ದೇಶದ ವಿದೇಶಾಂಗ ನೀತಿಗೆ ಮೂಲಾಧಾರ. ಸ್ವಾತಂತ್ರ್ಯಾನಂತರದ ದಶಕಗಳಲ್ಲಿ ಅಲಿಪ್ತ ನೀತಿಯನ್ನನುಸರಿಸಿ ಚಳುವಳಿಯ ಮಂಚೂಣಿಯಲ್ಲಿದ್ದ ಭಾರತ ಅಂಥ ಪ್ರಶಂಸನೀಯವಾದ ಪಾತ್ರ ವಹಿಸಿತ್ತು. ಆದರೆ ಈಗ ಜಾಗತೀಕರಣ, ಉದಾರೀಕರಣ, ವಿದೇಶೀ ಬಂಡವಾಳದ ಆಕರ್ಷಣೆಯ ಪ್ರವಾಹದಲ್ಲಿ ವಿದೇಶಾಂಗ ನೀತಿಯ ಮೂಲ ಉದ್ದೇಶಗಳೆಲ್ಲ ಕೊಚ್ಚಿಹೋಗಿವೆ. ಏಕಕೇಂದ್ರೀಯ ಜಾಗತಿಕ ವ್ಯವಸ್ಥೆಯ ಭರಾಟೆಯಲ್ಲಿ ಅದು ಬಲಾಢ್ಯ ರಾಷ್ಟ್ರ ಅಮೆರಿಕದ ಮರ್ಜಿಗೆ ಹೊಂದಿಕೊಳ್ಳುವ ಜಾಡು ಹಿಡಿದಿದೆ.

ಕಳೆದ ಎರಡು ಮೂರು ದಶಕಗಳಿಂದ ಭಾರತದ ವಿದೇಶಾಂಗ ನೀತಿ, ನಡವಳಿಕೆ ಎಲ್ಲವೂ ಕಳೆಗುಂದಿವೆ. ಅಮೆರಿಕವನ್ನು ಓಲೈಸುವ, ಹಿಂಬಾಲಿಸುವ ಪ್ರವೃತ್ತಿ ವಿಪರೀತವಾಗಿ ಹೆಚ್ಚಿದೆ. ಭಾರತದ ಹಿರಿಮೆಗೆ ಕಳಂಕ ತಂದು ತಲೆ ತಗ್ಗಿಸುವಂತೆ ಮಾಡಿದೆ. ಮನಮೋಹನ್ ಸಿಂಗ್ ನೇತೃತ್ವದ ಯುಪಿಎ ಸರಕಾರ ಎಲ್ಲ ವಿರೋಧವನ್ನೂ ಬದಿಗೊತ್ತಿ ಅಮೆರಿಕದೊಂದಿಗೆ ನ್ಯೂಕ್ಲಿಯರ್ ಒಪ್ಪಂದಕ್ಕೆ ಸಹಿ ಹಾಕಿದಾಗಲೆ ನಮ್ಮ ದೇಶದ ವಿದೇಶಾಂಗ ನೀತಿ ಎಂಥ ಅಧೋಗತಿಗೆ ಇಳಿದಿದೆ ಎಂಬುದಕ್ಕೆ ಉದಾಹರಣೆಯಾಯಿತು. ಭಾರತದ ವಿದೇಶಿ, ಸ್ವದೇಶಿ ನೀತಿಗಳನ್ನು ಅಮೆರಿಕಕ್ಕೆ ಒತ್ತೆ ಇಟ್ಟ ಕೀರ್ತಿ ಮನಮೋಹನ್ ಸಿಂಗ್ – ಅಹ್ಲುವಾಲಿಯ – ಚಿದಂಬರಂ ಕೂಟಕ್ಕೆ ಸಲ್ಲುತ್ತದೆ. ದೇಶದ ಸಾರ್ವಭೌಮತ್ವ, ಸ್ವಾತಂತ್ರ್ಯವನ್ನು ಪರಭಾರೆ ಮಾಡಿದ್ದಾರೆ. ಒಪ್ಪಂದವಾಗಿ ಐದು ವರ್ಷ ಆಗುತ್ತ ಬಂದರೂ ಸದ್ಯ ಅದು ಕಾರ್ಯಗತವಾಗಿಲ್ಲ. ನ್ಯೂಕ್ಲಿಯರ್ ವಿದ್ಯುತ್ ಸ್ಥಾವರದಲ್ಲಿ ಅಪಘಾತ ಸಂಭವಿಸಿದಾಗ ಯಾರು, ಎಷ್ಟು ಹೊಣೆ ಎನ್ನುವುದು ವಿವಾದಕ್ಕೀಡಾಗಿದೆ. ಒಮ್ಮೆ ಸ್ಥಾವರ ಸ್ಥಾಪನೆಗೊಂಡಮೇಲೆ ಸಂಬಂಧಪಟ್ಟ ಅಮೆರಿಕನ್ ಕಂಪೆನಿಯು ಮುಕ್ತ ಎನ್ನುವುದು ಅಮೆರಿಕದ ವಾದ. ಮನಮೋಹನ್ ಸಿಂಗ್ ಅಮೆರಿಕ ವಿಧಿಸುವ ಎಲ್ಲ ಷರತ್ತುಗಳಿಗೂ ತಲೆಯಾಡಿಸಲು ಸಿದ್ಧ. ಅದರಿಂದ ಏನಾದರೂ ಅವಘಡ ಸಂಭವಿಸಿದ್ದರೆ ಭಾರತವೇ ಹೊಣೆಯಾಗಿ ಅಮೆರಿಕನ್ ಕಂಪೆನಿ ನಿರಾಳವಾಗಿರುತ್ತಿತ್ತು. ಅದು ಸಾರ್ವಜನಿಕರ, ವಿಜ್ಞಾನಿಗಳ ಮತ್ತು ಕೆಲ ಅಧಿಕಾರಿಗಳ ತೀವ್ರ ವಿರೋಧದಿಂದಾಗಿ ಸದ್ಯಕ್ಕೆ ತಪ್ಪಿದೆ. ಇಷ್ಟೆಲ್ಲ ವಿವರಗಳನ್ನು ಹೇಳುತ್ತಿರುವುದಕ್ಕೆ ಕಾರಣ ನಮ್ಮ ವಿದೇಶಾಂಗ ನೀತಿ ಎನ್ನುವುದು ಭಾರತೀಯರಾದ ನಾವು ತಲೆತಗ್ಗಿಸುವಂತೆ ಮಾಡಿದೆ ಎಂಬುದಕ್ಕೆ.

ಈಚೆಗೆ ಬಯಲಾದ ಪ್ರಕರಣ ಅಮೆರಿಕದ ರಾಷ್ಟ್ರೀಯ ಭದ್ರತಾ ಸಂಸ್ಥೆ (ನ್ಯಾಷನಲ್ ಸೆಕ್ಯೂರಿಟಿ ಏಜನ್ಸಿ–ಎನ್ಎಸ್ಎ) ರಹಸ್ಯವಾಗಿ ನಡೆಸುತ್ತಿರುವ ಚರ್ಯೆಗಳಿಗೆ ಸಂಬಂಧಪಟ್ಟಿದ್ದು. ಇದು ಎಗ್ಗಿಲ್ಲದ ಟೆಲಿಫೋನ್ ಕದ್ದಾಲಿಕೆ, ಖಾಸಗಿ ಇ–ಮೇಲ್‌ಗಳ ಮೇಲೆ ನಿಗಾ, ಹಾಗೂ ಇತರ ರೀತಿಯ ಗೂಢಚರ್ಯೆ. ಇದು ಅಂಥ ಹೀನ ಚರ್ಯೆಗಳಿಗೆ ಈಡಾದ ದೇಶಗಳ ಸ್ವಾತಂತ್ರ್ಯ, ಸಾರ್ವಭೌಮತ್ವಗಳ ಉಲ್ಲಂಘನೆ ಹಾಗೂ ವ್ಯಕ್ತಿ ಸ್ವಾತಂತ್ರ್ಯದ ಹರಣ ಎನ್ನುವುದರಲ್ಲಿ ಎರಡು ಮಾತಿಲ್ಲ. ಅಮೆರಿಕದ ಈ ಗುಪ್ತ ಕಾರ್ಯಾಚರಣೆಗೆ ಗುರಿಯಾಗಿರುವ ದೇಶಗಳ ಪೈಕಿ ಭಾರತವೂ ಒಂದು. ಅಮೆರಿಕದ ಈ ಘೋರ ಕೃತ್ಯ ಬಯಲಾದ ಅದರ ಮಿತ್ರರಾಷ್ಟ್ರಗಳಾದ ಜರ್ಮನಿ, ಫ್ರಾನ್ಸ್‌ಗಳು ಆತಂಕ ವ್ಯಕ್ತಪಡಿಸಿ, ಪ್ರತಿಭಟನೆ ಸೂಚಿಸಿದುವು. ಭಾರತದ ಪ್ರತಿಕ್ರಿಯೆ ಮಾತ್ರ ತಲೆತಗ್ಗಿಸುವಂಥದ್ದಾಗಿತ್ತು. ವಿದೇಶಾಂಗ ಸಚಿವ ಸಲ್ಮಾನ್ ಖುರ್ಷಿದ್ ಎನ್ಎಸ್ಎ ಚರ್ಯೆಯನ್ನು ಸಮರ್ಥಿಸಿದ್ದು ಅವಮಾನಕರ. ಇಂಥವೆಲ್ಲ ಯಾವಾಗಲೂ ನಡೆಯುವಂಥದ್ದೆ ಎಂದು ಅದನ್ನು ತಳ್ಳಿ ಹಾಕಿದರು.

ಈ ಪ್ರಕರಣವನ್ನು ಹೊರಗೆಡವಿದ ಅಮೆರಿಕದ ಪ್ರಜೆ ಸ್ನೋಡೆನ್ ಈಗ ರಷ್ಯದಲ್ಲಿ ಸದ್ಯಕ್ಕೆ ಆಶ್ರಯ ಪಡೆದುಕೊಂಡಿದ್ದಾನೆ. ಆತ ಬಯಲುಮಾಡಿದ ದಾಖಲೆಗಳು ತಳ್ಳಿಹಾಕುವಂಥವಲ್ಲ. ಅಮೆರಿಕ ಸರಕಾರ ಕೂಡ ಅದರ ಸತ್ಯಾಸತ್ಯತೆಯನ್ನು ಅಲ್ಲಗೆಳೆದಿಲ್ಲ. ಅದಕ್ಕೆ ಪ್ರತಿಯಾಗಿ ಅಧ್ಯಕ್ಷ ಬರಾಕ್ ಒಬಾಮ ಅದನ್ನು ಸಮರ್ಥಿಸಿಕೊಂಡಿದ್ದಾರೆ. ಎನ್ಎಸ್ಎ ಸಂಸ್ಥೆ ಭಾರತದ ರಾಯಭಾರಿ ಕಚೇರಿಗಳು, ಸರಕಾರಿ ಅಧಿಕಾರಿಗಳು ಮತ್ತು ಸಾಮಾನ್ಯ ನಾಗರಿಕರ ಟೆಲಿಫೋನ್‌ಗಳನ್ನು, ಖಾಸಗಿ ಪತ್ರ ವ್ಯವಹಾರಗಳನ್ನು, ಇತರ ಚಟುವಟಿಕೆಗಳನ್ನು ರಹಸ್ಯವಾಗಿ ದಾಖಲಿಸುತ್ತಿತ್ತು. ಇದನ್ನು ಅಮೆರಿಕ ಸರಕಾರ ಕೂಡ ಈವರೆಗೆ ನಿರಾಕರಿಸಿಲ್ಲ. ಆದರೆ ಭಾರತ ಸರಕಾರ ಇದನ್ನು ಲಘುವಾಗಿ ಪರಿಗಣಿಸಿರುವುದು ಖಂಡನೀಯ. ಇದು ಅಮೆರಿಕ ಏನೇ ಮಾಡಿದರೂ ನಾವು ಸಹಿಸಿಕೊಳ್ಳುತ್ತೇವೆ ಎನ್ನುವ ಧೋರಣೆ.

ಇದಕ್ಕೆ ಪ್ರತಿಯಾಗಿ ದಕ್ಷಿಣ ಅಮೆರಿಕದ ರಾಷ್ಟ್ರಗಳು ಅಮೆರಿಕದ ಎನ್ಎಸ್ಎಯ ಚರ್ಯೆಯನ್ನು ಬಲವಾಗಿ ಖಂಡಿಸಿವೆ. ಬ್ರೆಜಿಲ್ ಅಧ್ಯಕ್ಷೆ ದಿಲ್ಮಾ ರೂಸೆಫ್ ಅಮೆರಿಕದ ಗೂಢಚರ್ಯೆ ಕ್ರಮವನ್ನು ಪ್ರತಿಭಟಿಸಿ ವಾಷಿಂಗ್ಟನ್‌ಗೆ ನೀಡಬೇಕಾಗಿದ್ದ ಭೇಟಿಯನ್ನು ರದ್ದುಗೊಳಿಸಿದ್ದಾರೆ. ವಿಶ್ವ ಸಂಸ್ಥೆಯ ಮಹಾಧಿವೇಶನದಲ್ಲಿ ಭಾಗವಹಿಸಲು ಅಮೆರಿಕಕ್ಕೆ ತೆರಳಲಿದ್ದ ಈಕೆ ವಾಷಿಂಗ್ಟನ್‌ನಲ್ಲಿ ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮಾರನ್ನು ಭೇಟಿಯಾಗಬೇಕಿತ್ತು. ಎರಡು ದಶಕಗಳ ನಂತರ ಬ್ರೆಜಿಲ್‌ನ ಅಧ್ಯಕ್ಷರು ನೀಡುತ್ತಿದ್ದ ಮೊದಲ ಭೇಟಿ ಇದಾಗಿತ್ತು. ಭಾರತದಂತೆಯೇ ಬ್ರೆಜಿಲ್‌ನ ಮೇಲೂ ಎನ್ಎಸ್ಎ ವ್ಯಾಪಕವಾದ ಗೂಢಚರ್ಯೆ ಜಾಲ ಹರಡಿತ್ತು. ಬ್ರೆಜಿಲ್‌ನ ಮಾಜಿ ಅಧ್ಯಕ್ಷ ಲೂಲಾ ಡ ಸಿಲ್ವಾ ಅಮೆರಿಕದ ಕ್ರಮವನ್ನು ತೀವ್ರವಾಗಿ ಖಂಡಿಸಿ, ಅಧ್ಯಕ್ಷ ಒಬಾಮ ಕ್ಷಮೆ ಯಾಚಿಸಬೇಕೆಂದು ಒತ್ತಾಯಿಸಿದ್ದಾರೆ. ಬ್ರೆಜಿಲ್ ತೋರಿರುವ ಪ್ರತಿಭಟನೆ ಆದರ್ಶಪ್ರಾಯ. ಅದು ಸಹಜವಾದ ಪ್ರತಿಕ್ರಿಯೆ. ಆದರೆ ಭಾರತದ ಪ್ರಧಾನಿ ಮನಮೋಹನ್ ಸಿಂಗ್ ಈ ವಿಚಾರದಲ್ಲಿ ತುಟಿಪಿಟಿಕ್ ಎಂದಿಲ್ಲ. ಇಂಥ ಒಂದು ಪ್ರಕರಣ ನಡೆದೇ ಇಲ್ಲವೇನೋ ಎಂಬಂತೆ ನಡೆದುಕೊಂಡಿದ್ದಾರೆ. ಬರಾಕ್ ಒಬಾಮಾರನ್ನು ಭೇಟಿಯಾಗಿ ಕುಶಲ ಸಂಭಾಷಣೆಯಲ್ಲಿ ನಿರತರಾಗಿದ್ದರೇ ಹೊರತು ಖಾಸಗಿಯಾಗಿ ಕೂಡ ಈ ವಿಷಯ ಪ್ರಸ್ತಾಪಿಸಲಿಲ್ಲ. ಸದ್ಯ ಅವರು ಅಮೆರಿಕದ ಎಲ್ಲ ಒತ್ತಾಯಗಳಿಗೂ ಮಣಿದು ರಿಯಾಯಿತಿಗಳನ್ನು ನೀಡಿ ಒಪ್ಪಂದಗಳಿಗೆ ಸಹಿ ಲಗತ್ತಿಸಲಿಲ್ಲ. ಅಷ್ಟೇ ಸಾಕು. ಇನ್ನು ಬ್ರೆಜಿಲ್‌ನಂತೆ ವಾಷಿಂಗ್ಟನ್ ಭೇಟಿ ರದ್ದುಗೊಳಿಸುವ ಮಾತೆಲ್ಲಿ ಬಂತು. ಭಾರತದ ವಿದೇಶಾಂಗ ನೀತಿಯನ್ನು ಯಾವ ಸ್ಥಿತಿಗೆ ತಂದಿದ್ದಾರೆ ಇವರು !

**ಸೀಯಾರ್ಕೆ**
'ಚೌಬೀನ', ನಂ. ೮೪೪, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಕಾನೂನಿನ ಬೆಳಕಿನಲ್ಲಿ ಬೆಳಗುವ ಅರಿವು

ನಾನು ಓದಿದ ಪುಸ್ತಕ




ಶೀರ್ಷಿಕೆ
**ಅರಿವು ಬೆಳಕು**

ಲೇಖಕರು
**ಜಸ್ಟಿಸ್ ಹೆಚ್. ಎನ್. ನಾಗಮೋಹನ್ ದಾಸ್**
ಪುಟ : ೨೩೨
ಬೆಲೆ : ರೂ. ೧೬೦

ಪ್ರಕಾಶಕರು
**ಸ್ಫೂರ್ತಿ ಪ್ರಕಾಶನ**
ನಂ. ೩೫೪, ೭ನೇ ಮುಖ್ಯರಸ್ತೆ
ಬನಶಂಕರಿ ૩ನೇ ಹಂತ
೪ನೇ ಫೇಸ್, ೭ 'ಎ' ಬ್ಲಾಕ್
ಬೆಂಗಳೂರು – ೫೬೦ ೦೮೫

'ಸಂವಿಧಾನ ಎಷ್ಟೇ ಉತ್ತಮವಾಗಿರಲಿ, ಅದನ್ನು ನಿರ್ವಹಿಸುವವರು ಕೆಟ್ಟವರಾಗಿದ್ದರೆ ಅದೂ ಕೆಟ್ಟದಾಗಿಬಿಡುವುದು ಖಂಡಿತ' ಎಂದಿದ್ದ ಅಂಬೇಡ್ಕರ್ ಅವರ ಮಾತುಗಳನ್ನು ನೆನಪಿಸುವಂತೆ, ಪ್ರಜಾಪ್ರಭುತ್ವ ವ್ಯವಸ್ಥೆ ಆಗಾಗ ಧಕ್ಕೆಗೊಳಗಾಗುತ್ತಲೇ ಇರುವ ಹೊತ್ತಿನಲ್ಲಿ ನ್ಯಾಯಮೂರ್ತಿ ಎಚ್. ಎನ್. ನಾಗಮೋಹನ್ ದಾಸ್ ಅವರ 'ಅರಿವು ಬೆಳಕು' ಕೃತಿ ಪ್ರಜಾಪ್ರಭುತ್ವ ಪರಿಕಲ್ಪನೆಯ ನೈಜ ನಿಲುವನ್ನು ಗಟ್ಟಿಗೊಳಿಸುವಲ್ಲಿ ಜನಸಾಮಾನ್ಯರ ಅರಿವಿನ ಪರಿಧಿಯನ್ನು ವಿಸ್ತರಿಸುತ್ತದೆ.

ಕರ್ನಾಟಕದ ಹೈಕೋರ್ಟ್ ನ್ಯಾಯಮೂರ್ತಿ ನಾಗಮೋಹನ್ ದಾಸ್, ತಮ್ಮ ವಕೀಲಿ ವೃತ್ತಿಯ ದಿನಗಳಿಂದಲೂ ರಾಜ್ಯದ ಹಲವು ಜನಪರ ಹೋರಾಟಗಳೊಂದಿಗೆ ಗುರುತಿಸಿಕೊಂಡವರು. ಪ್ರಜಾಪ್ರಭುತ್ವ ಚಳವಳಿಯ ವಿದ್ಯಾರ್ಥಿಯಾಗಿ ಸಾಮಾಜಿಕ ನ್ಯಾಯಕ್ಕಾಗಿ ಹೋರಾಟದಲ್ಲಿ ತೊಡಗಿಸಿಕೊಂಡಿದ್ದ ನಾಗಮೋಹನ್ ದಾಸ್, ಹೈಕೋರ್ಟ್ ನ್ಯಾಯಮೂರ್ತಿಯಾಗಿ ನೇಮಕಗೊಂಡ ನಂತರವೂ ರಾಷ್ಟ್ರಮಟ್ಟದಿಂದ ಹಳ್ಳಿಯ ಮಟ್ಟದ ಸಮ್ಮೇಳನ, ವಿಚಾರ ಸಂಕಿರಣ, ಕಾರ್ಯಾಗಾರ ಸೇರಿದಂತೆ ವಿವಿಧ ವೇದಿಕೆಗಳಲ್ಲಿ ಭಾಗಿಯಾದವರು. ಇಂತಹ ವೇದಿಕೆಗಳಲ್ಲಿ ಹಲವು ಮಹನೀಯರ ಭಾಷಣಗಳನ್ನು ಸ್ಥಳದಲ್ಲಿಯೇ ಕನ್ನಡಕ್ಕೆ ತರ್ಜುಮೆ ಮಾಡುವುದೂ ಸೇರಿದಂತೆ, ಭಾಷಣ, ಚರ್ಚೆ, ಪ್ರಬಂಧ ಮಂಡನೆಯ ಮೂಲಕ ನಾಲ್ಕು ದಶಕಗಳಲ್ಲಿ ನಡೆಸಿದ ಅರಿವಿನ ಯಾನದ ಫಲವಾಗಿ 'ಅರಿವು ಬೆಳಕು' ಮೂಡಿಬಂದಿದೆ.

ಕಾನೂನಿನ ಬೆಳಕಿನಲ್ಲಿ ನಾಗರಿಕ ಬದುಕಿನ ಸತ್ಯ ಶೋಧನೆಗೆ ತೊಡಗಿರುವ ಇಲ್ಲಿನ ಬರಹಗಳಲ್ಲಿ ಸಮಾನತೆಯ ತುಡಿತ ಹಾಗೂ ನೈತಿಕತೆಯ ಕಾಳಜಿ ಗುಪ್ತಗಾಮಿನಿಯಾಗಿದೆ. "ಉನ್ನತ ಸ್ಥಾನಕ್ಕೇರುವ ಸಲುವಾಗಿಯೇ ತಂತಮ್ಮ ಮೂಲ ಸಾಮಾಜಿಕ ಆಶಯಗಳನ್ನು ಹತ್ಯೆಮಾಡುವ ಕೆಲವರ ನಡುವೆ ನಾಗಮೋಹನ್ ದಾಸ್ ತಮ್ಮ ಮೂಲ ಆಶಯಗಳನ್ನು ಬಿಟ್ಟುಕೊಡದ, ವೃತ್ತಿಯ ತಾಂತ್ರಿಕ ಚೌಕಟ್ಟಿನೊಳಗೇ ತಾತ್ವಿಕತೆಯನ್ನು ಜೀವಂತವಾಗಿಟ್ಟುಕೊಂಡ 'ಮನುಷ್ಯ'ರಾಗಿದ್ದಾರೆ" ಎಂದು ಕೃತಿಯ ಮುನ್ನುಡಿಯಲ್ಲಿ ಬರಗೂರು ರಾಮಚಂದ್ರಪ್ಪ ಅವರು ಬರೆದಿರುವಂತೆ ನಾಗಮೋಹನ್ ದಾಸ್ ಇಲ್ಲಿ ತಮ್ಮ ಸಮಾಜಮುಖಿ ಚಿಂತನೆಯನ್ನು ಹರಿಯಬಿಟ್ಟಿದ್ದಾರೆ. 'ಪ್ರಭುತ್ವ ಹಳಿ ತಪ್ಪುವಾಗ ಪ್ರತ್ಯಕ್ಷವಾಗುವ ನ್ಯಾಯ ದೇವತೆ', 'ಹ್ಯೂಮನ್ ಬೀಯಿಂಗ್ ಮತ್ತು ಬೀಯಿಂಗ್ ಹ್ಯೂಮನ್', 'ಗ್ರಾಮರಾಜ್ಯದಲ್ಲಿ ರಾಮರಾಜ್ಯ ಕಂಡ ಗಾಂಧೀಜಿ', 'ಮನೆ ಮತ್ತು ಜಗತ್ತು', 'ಮಾತೃಭೂಮಿ – ಮಾತೃಭಾಷೆ' ಹಾಗೂ 'ಬುದ್ಧ ಮತ್ತು ರಾಕ್ಷಸ' ಎಂಬ ಏಳು ಭಾಗಗಳಲ್ಲಿ ವಿಂಗಡಣೆಗೊಂಡಿರುವ ಇಲ್ಲಿಯ ಲೇಖನಗಳು ನ್ಯಾಯಾನ್ಯಾಯದ ವಿವೇಚನೆಯುಳ್ಳ 'ಸಾಮಾಜಿಕ ನ್ಯಾಯಾಧೀಶ'ರೊಬ್ಬರ ಸಮಾಜಮುಖಿ ಆಶಯಗಳನ್ನು ಬಿಂಬಿಸುತ್ತವೆ.

'ಗಣರಾಜ್ಯದ ಹೆಗ್ಗಳಿಕೆಯ ಭಾರತ' ಲೇಖನದಲ್ಲಿ ಸ್ವಾತಂತ್ರ್ಯ ಚಳವಳಿಯ ಸಂದರ್ಭದ ಚಿತ್ರಣ ಕಟ್ಟಿಕೊಡುತ್ತ ರಾಷ್ಟ್ರೀಯ ಚಳವಳಿಯ ಗುರಿಯನ್ನು ಮನದಟ್ಟಾಗಿಸುವ ಲೇಖಕರು, ಅನೇಕ ಧರ್ಮದ ಜನರು ದೇಶದಲ್ಲಿ ಒಟ್ಟಿಗೆ ಬಾಳಿದ, ಎಲ್ಲರೂ ಕೂಡಿ ದೇಶವನ್ನು ಕಟ್ಟಿದ ಇತಿಹಾಸವನ್ನು ಕಣ್ಣಮುಂದೆ ತರುತ್ತಾರೆ. 'ನಮಗೆ ಸಾಮ್ರಾಟರು ಬೇಡ, ಚಕ್ರವರ್ತಿಗಳು ಬೇಡ, ರಾಜ–ಮಹಾರಾಜರು ಬೇಡ, ರಾಜಕೀಯ ಅಧಿಕಾರ ಜನಸಾಮಾನ್ಯರ ಕೈಗೆ ಬರಬೇಕು' ಎಂದ ದೇಶದ ಜನತೆಯ ಬಗ್ಗೆ ಹೆಮ್ಮೆ ಕುಡಿಯೊಡೆಯುತ್ತದೆ. ಪಾಳೆಗಾರಿ ಪದ್ಧತಿಯನ್ನು ತೊಲಗಿಸಿ, ಪ್ರಜಾಪ್ರಭುತ್ವವನ್ನು ಸ್ಥಾಪಿಸುವ ಸಂಕಲ್ಪ ಹೊಂದಿದ್ದ ಸ್ವಾತಂತ್ರ್ಯ ಹೋರಾಟಗಾರರ ಜೀವಪರ ನಿಲುವುಗಳನ್ನು ನಿರೂಪಿಸುವಲ್ಲಿ ಲೇಖಕರು ಸಂಯಮವನ್ನು ಮೆರೆದಿದ್ದಾರೆ. ಸ್ವಾತಂತ್ರ್ಯಾನಂತರ ದೇಶ ಹಲವು ಸಾಧನೆಗಳನ್ನು ಮೆರೆದಿದ್ದರೂ ಅನಕ್ಷರಸ್ಥರು, ನಿರುದ್ಯೋಗಿಗಳು, ವಸತಿಹೀನರು, ಭಿಕ್ಷುಕರು ನಮ್ಮ ಮುಂದೆ ಇರುವುದನ್ನು ಅಂಕಿ–ಅಂಶಗಳೊಂದಿಗೆ ವಿಶದೀಕರಿಸುತ್ತಾರೆ. ಮೂಲ ಸಮಸ್ಯೆಗಳನ್ನು ಸಂಪೂರ್ಣ ಪರಿಹರಿಸಲು ಸಾಧ್ಯವಾಗಿಲ್ಲ ಎಂಬ ವಿಷಾದದ ನಡುವೆಯೂ ಭರವಸೆ ಕಳೆದುಕೊಳ್ಳದ ಲೇಖಕರು, ಸದ್ಯದ ಬಿಕ್ಕಟ್ಟಿಗೆ ಪರಿಹಾರಗಳನ್ನೂ ಸೂಚಿಸುತ್ತಾರೆ. ಕೃಷಿ ಮತ್ತು ಕೈಗಾರಿಕಾ ಕ್ಷೇತ್ರಗಳ ಬಿಕ್ಕಟ್ಟನ್ನು ಎದುರಿಸಲು ನಾವು ಇನ್ನೂ ಹೆಚ್ಚು ಒಗ್ಗಟ್ಟಿನಿಂದ ಕೆಲಸ ಮಾಡಬೇಕಿರುವುದನ್ನು ಒತ್ತಿ ಹೇಳುವ ದಾಸ್, ಆರ್ಥಿಕ ಯೋಜನೆ, ಧೋರಣೆಗಳಲ್ಲಿ ಬದಲಾವಣೆಯನ್ನು ತಂದುಕೊಂಡು ಆಧುನಿಕ ವಿಜ್ಞಾನದ ಸಾಧನೆಗಳನ್ನು ಬಳಸಿಕೊಂಡರೆ ಕೆಲವೇ ವರ್ಷಗಳಲ್ಲಿ ನಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದು ಎಂಬ ನಂಬಿಕೆಯನ್ನು ಹುಟ್ಟಿಸುತ್ತಾರೆ. ಆದರೆ, ಈ ಗುರಿಯನ್ನು ತಲುಪಲು ಇರುವ, ಅಡ್ಡಿಯಾಗಿರುವ ಸವಾಲುಗಳನ್ನು ಸರಿಯಾದ ರೀತಿಯಲ್ಲಿ ಎದುರಿಸದೇ

**ಚಿದಾನಂದ ಕಮ್ಮಾರ್**

ಹೋದರೆ, ನಮ್ಮ ದೇಶ ತೀವ್ರತರವಾದ ಮುಗ್ಗಟ್ಟಿಗೆ ಒಳಗಾಗಬೇಕಾಗುತ್ತದೆ. ಇಲ್ಲದಿದ್ದರೆ, ಸಂವಿಧಾನದ ಪ್ರಕಾರ ಸರ್ಕಾರ ರಚನೆಯಾಗದ ದೇಶಗಳಲ್ಲಿ ಬಿದ್ದುಹೋದ ಸರ್ಕಾರಗಳು, ಮಿಲಿಟರಿ ಆಡಳಿತದಲ್ಲುಂಟಾದ ಅರಾಜಕತೆಯನ್ನು ಎದುರಿಸ ಬೇಕಾಗುತ್ತದೆ. ಮಾತ್ರವಲ್ಲ, ಅಶಕ್ತ ಮತ್ತು ಹಿಂದುಳಿದ ದೇಶಗಳ ಹೀನಾಯ ಸ್ಥಿತಿಗೆ ತಲುಪುವ ಅಪಾಯವಿರುವ ಬಗ್ಗೆ ಎಚ್ಚರಿಸುತ್ತಾರೆ.

ಕೇವಲ ದುಡ್ಡು ಮತ್ತು ಅಧಿಕಾರದ ದುರಾಸೆಗಾಗಿ ಮನಬಂದಂತೆ ನಿಲುವುಗಳು, ಪಕ್ಷಗಳನ್ನು ಬದಲಿಸುವ ಜನಪ್ರತಿನಿಧಿಗಳಿಗೆ ಚಾಟಿ ಬೀಸುವ ಲೇಖಕರು, ನೈತಿಕತೆಯನ್ನು ಬದಿಗೊತ್ತಿ ಅಪವಿತ್ರ ಮೈತ್ರಿಗಳ ಯುಗವನ್ನು ಪ್ರಾರಂಭಿಸಿರುವ ರಾಜಕಾರಣಿಗಳ ಕುತಂತ್ರವನ್ನು ಬಯಲಿಗೆಳೆಯುತ್ತಾರೆ. ರಾಜಕೀಯ ಇಂದು ಅಪಹಾಸ್ಯಕ್ಕೆ ಈಡಾಗಿರುವುದನ್ನು ತಣ್ಣಗಿನ ದನಿಯಲ್ಲಿ ದಾಖಲಿಸುವ ಬರಹಗಳು ಮಾಹಿತಿಪೂರ್ಣವಾಗಿವೆ. ಕೇವಲ ಚುನಾವಣೆಗಳನ್ನು ನಡೆಸುವುದು ಮಾತ್ರ ಪ್ರಜಾಪ್ರಭುತ್ವವಾಗಲಾರದು ಎಂಬ ನಿಲುವು ವ್ಯಕ್ತಗೊಳಿಸುವ ನಾಗಮೋಹನ್ ದಾಸ್ ಅವರ 'ಪ್ರಜಾಪ್ರಭುತ್ವವನ್ನು ಮೊನಚು ಗೊಳಿಸುವ ನ್ಯಾಯಾಂಗ' ಲೇಖನ, ಪ್ರತಿಯೊಬ್ಬ ವ್ಯಕ್ತಿಯ ಸಾಮಾಜಿಕ, ಭೌತಿಕ ಮತ್ತು ಸಾಂಸ್ಕೃತಿಕ ವಿಕಾಸ ಮತ್ತು ಬೆಳವಣಿಗೆ ಬಹಳ ಮುಖ್ಯವಾದದ್ದು ಎಂಬುದನ್ನು ಪ್ರತಿಪಾದಿಸುತ್ತದೆ. ಗಣರಾಜ್ಯ ಭಾರತದಲ್ಲಿ ಸುಪ್ರೀಂ ಕೋರ್ಟ್ ಹಾಗೂ ರಾಜ್ಯದ ಹೈಕೋರ್ಟ್‌ಗಳು ರಾಜಕೀಯ ಪ್ರಜಾಪ್ರಭುತ್ವ, ಸಾಮಾಜಿಕ ಪ್ರಜಾಪ್ರಭುತ್ವ ಮತ್ತು ಆರ್ಥಿಕ ಪ್ರಜಾಪ್ರಭುತ್ವಕ್ಕೆ ಸಂಬಂಧಿಸಿದಂತೆ ಸಾವಿರಾರು ತೀರ್ಪುಗಳನ್ನು ನೀಡಿರುವುದನ್ನು ಉಲ್ಲೇಖಿಸುವ ನ್ಯಾಯಮೂರ್ತಿ ದಾಸ್, ಪ್ರಜಾಪ್ರಭುತ್ವವನ್ನು ರಕ್ಷಿಸಿ ಬೆಳೆಸುವಲ್ಲಿ ನ್ಯಾಯಾಂಗದ ಮಹತ್ತರ ಕೊಡುಗೆ ಯನ್ನು ಮಹತ್ವದ ತೀರ್ಪುಗಳ ಸಾರಾಂಶದೊಂದಿಗೆ ನಿರೂಪಿಸಿರುವುದು ಕಾನೂನು ಅಭ್ಯಾಸಿಗಳು ಹಾಗೂ ರಾಜಕಾರಣಿಗಳಿಗೆ ಮಾರ್ಗದರ್ಶಿಯಾಗಿದೆ.

ಸಾರ್ವಜನಿಕ ಹಿತಾಸಕ್ತಿಯ ರಿಟ್ ಅರ್ಜಿಗಳ ಹೊಸ ಪರ್ವ ಆರಂಭಿಸಿದ ನ್ಯಾಯಾಂಗದ ಕ್ರಮದಿಂದಾಗಿ ಸೇಂಟ್ ಕೀಟ್ಸ್, ಮೇವು ಹಗರಣ, ಯೂರಿಯಾ ಗೊಬ್ಬರದ ಹಗರಣ, ಸರ್ಕಾರಿ ಮನೆಗಳ ಹಂಚಿಕೆ, ಪೆಟ್ರೋಲ್ ಬಂಕ್ ವಿತರಣೆ ಹಗರಣ, ಸಕ್ಕರೆ ಆಮದು ಹಗರಣ, ಷೇರು ಹಗರಣ, ೨-ಜಿ ಟೆಲಿಕಾಮ್ ಹಗರಣ, ಒಲಿಂಪಿಕ್ ಕ್ರೀಡಾಕೂಟಗಳ ಹಗರಣ, ಡಿ-ನೋಟಿಫಿಕೇಶನ್ ಹಗರಣ, ಗಣಿ ಹಗರಣ ಇತ್ಯಾದಿ ಹಗರಣಗಳು ಬೆಳಕಿಗೆ ಬಂದ ಬಗೆಯನ್ನು ವಿವರಿಸುವ ಮೂಲಕ ನ್ಯಾಯಾಂಗದ ಕ್ರಿಯಾಶೀಲತೆಯನ್ನು ವಿವರಿಸುವ ನಾಗಮೋಹನ್ ದಾಸ್, ಕೆಲವು ಪ್ರಕರಣಗಳಲ್ಲಿ ನ್ಯಾಯಾಂಗ ಎಡವಿದ್ದನ್ನೂ ಸೋದಾಹರಣವಾಗಿ ಉಲ್ಲೇಖಿಸಿರುವುದು ಗಮನಾರ್ಹ.

ಜನರಲ್ಲಿ ಮೌಲ್ಯಗಳ ಕೊರತೆಯಿಂದಾಗಿ ಉಂಟಾಗಿರುವ ಪರಿಣಾಮಗಳನ್ನು 'ಆಡಳಿತದಲ್ಲಿ ನೈತಿಕತೆ' ಲೇಖನ ಸೊಗಸಾಗಿ ವಿವರಿಸಿದೆ. ಒಂದು ಕಡೆ ಗ್ರಾಮಾಂತರ ರೈತಾಪಿ ಜನರು ಆರ್ಥಿಕವಾಗಿ ದಿವಾಳಿಯಾಗಿ, ನೈತಿಕ, ಸಾಂಸ್ಕೃತಿಕ ದಿವಾಳಿತನವನ್ನು ಎದುರಿಸುತ್ತಿರುವುದನ್ನೂ, ಮತ್ತೊಂದೆಡೆ ವಿದ್ಯಾವಂತರು, ಆರ್ಥಿಕವಾಗಿ ಸಬಲರಾಗಿರುವವರಲ್ಲಿಯೂ ಈ ದಿವಾಳಿತನ ಕಾಣುತ್ತಿರುವುದನ್ನು ಗುರುತಿಸುತ್ತಲೇ ಆಡಳಿತದಲ್ಲಿ ಬಾಹ್ಯ ಹಾಗೂ ಆಂತರಿಕ ನೈತಿಕತೆಯನ್ನು ಮನಗಾಣಿಸಲು ಮಹಾಭಾರತದ ವಿದುರ ನ್ಯಾಯ, ಅಶೋಕ ಚಕ್ರವರ್ತಿ ಹಾಗೂ ಜನರಲ್ ಕಾರಿಯಪ್ಪನವರ ಬದುಕಿನಿಂದಾಯ್ದ ಘಟನೆಗಳನ್ನು ಓದುಗರ ಎದುರಿಗೆ ತೆರೆದಿಡುತ್ತಾರೆ. ಈ ಮೂಲಕ ಆಡಳಿತದಲ್ಲಿ ಸಂವಿಧಾನದ ಮೂಲ ತತ್ವಗಳ ಅನುಷ್ಠಾನ, ಸಹಜ ನ್ಯಾಯ, ಪಾರದರ್ಶಕತೆ, ನ್ಯಾಯ ಹಾಗೂ ವಿವೇಕಯುತ ನಡವಳಿಕೆ ಮತ್ತು ಮಾನವ ಹಕ್ಕುಗಳ ಅನುಷ್ಠಾನದ ಕುರಿತು ವ್ಯಾಖ್ಯಾನ ಮತ್ತು ವಿಮರ್ಶಾತ್ಮಕ ನೋಟವನ್ನು ಒದಗಿಸುತ್ತಾರೆ.

'ಕಂಡು ಬಂದ ಅನ್ಯಾಯ, ಅಧರ್ಮಗಳ ಬಗ್ಗೆ ಮೌನ ವಹಿಸುವುದು ಅಥವಾ ನಿರ್ಲಿಪ್ತರಾಗಿರುವುದು ಸಹ ಅನೈತಿಕತೆ. ಸತ್ಯ ಮಾರ್ಗದಲ್ಲಿ ನಡೆಯೋಣ. ಅನ್ಯಾಯದ ವಿರುದ್ಧ ಪ್ರತಿಭಟಿಸೋಣ. ನೈತಿಕತೆಯನ್ನು ಎತ್ತಿ ಹಿಡಿಯೋಣ' ಎಂಬ ನಿಲುವುಳ್ಳ ನ್ಯಾಯಮೂರ್ತಿ ದಾಸ್ ಅವರ ವ್ಯಕ್ತಿತ್ವ ಇಲ್ಲಿನ ಪ್ರತಿಯೊಂದು ಲೇಖನದ ಆಶಯಗಳೊಂದಿಗೆ ವ್ಯಕ್ತವಾಗುತ್ತದೆ. 'ಎಲ್ಲ ಜಾತಿ ವರ್ಣಗಳಲ್ಲೂ ಮಹಿಳೆಗೆ ಎರಡನೇ ದರ್ಜೆಯ ಸ್ಥಾನ. ಇಡೀ ಸಮುದಾಯದಿಂದ ತುಚ್ಛೀಕರಿಸಲ್ಪಟ್ಟ ಅಸ್ಪೃಶ್ಯ ಸಹ ತನ್ನ ಪತ್ನಿಯನ್ನು ಎರಡನೆಯ ದರ್ಜೆಯವಳನ್ನಾಗಿಯೇ ನೋಡುತ್ತಾನೆ' ಎನ್ನುವ ದಾಸ್, ಇದಕ್ಕೆ 'ಆಳುವ ವರ್ಗದ ವಿಚಾರಗಳೇ ಜನರನ್ನು ಆಳುತ್ತವೆ' ಎಂಬ

(೫೯ನೇ ಪುಟಕ್ಕೆ ಮುಂದುವರಿಯುವುದು)

## ಎಡ – ಬಲ ಪಂಥಿ






ಅಪ್ಪ ಕಂಬಳಿಯಡಿ ಗೊಣಗುಟ್ಟುತ್ತಾನೆ
ಮರ ತಲೆ ತೊನೆಯಲು ಭೂಮ್
ಉಸುಲೊಡೆದು ಜೌಳೇಳ್ತದೆ
ಸಂಜೆ ಬಿದ್ಮಳೆ ಬಿದ್ದಂಗೇ ಹರ್ದು
ಹತ್ ಮೀನ್ ಹತ್ತತ್ ಬಂದಂಗೆ
ಕತ್ತಿ ಬೆನ್ ತುಂಬ ರಕ್ತ

ಕರಿ ಅಣ್ಬೆ ಬಿಳಿ ಅಣ್ಬೆ ಬೆಳ್ಳೇಡಿ ಕಾರೇಡಿ
ತಿನ್ನಾ ಜಾತಿಗೆ ಸುಡ್ಗಾಡೆಲ್ಲ ಇಷ್ಟ
ತಿಂದ್ ತಿಂದು ರೂಢಿ ನಾಲ್ಗೆ ಮತ್ತೆ
ಹುಳ್ಗೆ ಕಟ್ಗೆ ಹುಡ್ಕದಂಗೆ

ಬಾಡ್ ಅಗಿಯೋರ್ ಬೆಗರ್ ಹುಂಡೊಳಗೆ
ಕವಿತೆ ಜನ್ನಾತು ಅಂದ್ರೆ ಒಳ ಬಟ್ಟಿ
ಬೊಗುಣಿಯಾಗೆ ಒಳ್ಳೆ ಹೆಂಡ ಬಂದಂಗೆ
ಹುಚ್‌ಮುಂಡೆಗಳು ಕುಡ್ದು ಹೆಂಡ್ರಿಗೆ ಹೊಡ್ದು
ಕವಿತೇನ್ ಖೂನಿ ಮಾಡಿ ಅಡ್ಡಾಡಿ ದಿಡ್ಡಾಡಿ
ಥೂ ! ಮಳ್ಳ ... ಬರಿಯೋರು ಬ್ರಾಂಮ್ರು
ನಮ್ಗಡಂಗು ಬಾಡು

ನಾ, ಇದ್ದನ್ನ ಇದ್ದಾಂಗ ಅಂದ್ರೆ
ಹಳಸು ಪಳಸು ಮುಸುರೆ
ಎಡ-ಬಲ ಪಂಥೀ ರಾಗಕ್ಕೆ ತಂತಿ ಮೀಟ್ದಾಂಗೆ

ಕಣ್ಣು ಹೊರಳಿಸಿ ಕುತ್ತಿಗೆ ತಿರುಗಿಸಿ
ಮೋಡಗಳು ಮಿಲನ ಹೊಂದಿ
ಗುಡುಗೊಳಗೊಂದು ಮಿಂಚು ಸುಳಿದು
ಹುಯ್ಲಿಡುವ ಗಾಳಿಗೆ ಎಲೆ ಉದುರಿ
ಮರದ ತುದಿ ಬಳುಕುವ ಪರಿ

**ಎನ್. ವಿ. ಮಂಜುನಾಥ**
ಉಪ್ಪಳೇ ಕೊಪ್ಪ, ಉಂಬಳೇ ಕೊಪ್ಪ – ೫೮೧ ೩೧೮
ಸಿರ್ಸಿ ತಾಲೂಕು, ಉತ್ತರ ಕನ್ನಡ ಜಿಲ್ಲೆ

# ಕನ್ನಡದ ಸಂತರು ಹಾಗೂ ಮಾನವಾಭಿವೃದ್ಧಿಮುಖಿ ಚಿಂತನೆಗಳು

ಡಾ|| ವೀರೇಶ ಬಡಿಗೇರ

ಮಾನವಾಭಿವೃದ್ಧಿ ಎನ್ನುವುದು ಆಧುನಿಕ ಅಭಿವೃದ್ಧಿ ಮೀಮಾಂಸೆಯ ಫಲಿತವಾಗಿದೆ. ಇಂದು ಅಭಿವೃದ್ಧಿ ಎನ್ನುವುದು ಮಾನವಮುಖಿಯಾಗಿರದೆ ವಸ್ತು ಹಾಗೂ ಹಣದ ರೂಪದಲ್ಲಿ ಕಾಣಿಸುತ್ತಿದೆ. ಮಾನವ ಹಾಗೂ ಆತನ ವಾಸದ ನೆಲೆಗಳನ್ನು; ಚಿಂತನೆಯ ದಾರಿಗಳನ್ನು ಗೌರವಿಸದೆ ಮನುಷ್ಯನನ್ನು ಜಡವಾಗಿಸುತ್ತಿದೆ. ಮುಖ್ಯವಾಗಿ ಉಪಭೋಗವಾದಿ ಮನುಷ್ಯನ ಈ ಎಲ್ಲ ಪ್ರವೃತ್ತಿಗಳಿಗೆ ಬಲಿಯಾಗುತ್ತಿರುವುದು ದುಡಿಯುವ ಮನುಷ್ಯನ ವಾಸದ ಜಾಗಗಳು ಹಾಗೂ ಕೃಷಿ ಯೋಗ್ಯ ಜಮೀನುಗಳು ಎನ್ನುವುದು ಗಾಬರಿ ತರಿಸುವ ವಿಚಾರ. ಇವೆಲ್ಲವೂ ಸಾಮಾನ್ಯ ಮನುಷ್ಯನನ್ನು ಹಿಂಡಿ ಹಿಪ್ಪೆ ಮಾಡಿ ಮಾನಸಿಕವಾಗಿ ಹಾಗೂ ದೈಹಿಕವಾಗಿ ನಿರಾಶ್ರಿತನನ್ನಾಗಿಸಿವೆ. 'ರೊಕ್ಕ ಎಲ್ಲದಕ್ಕು ದುಃಖ ಕಾಣಕ್ಕ' ಎನ್ನುವ ದಾಸರ ಮಾತಿನಂತೆ ಮನುಷ್ಯ ಕುಲದ ಅನಂತ ದುಃಖಕ್ಕೆ ಹಾಗೂ ಅಸ್ಥಿರತೆಗೆ ಹಣದಾಹವೆ ಕಾರಣವಾಗುತ್ತಿದೆ. ಮನುಷ್ಯನ ಅತಿಯಾದ ಭೋಗ ವಿಲಾಸಪ್ರಿಯತೆ ಹಾಗೂ ಅನೈತಿಕ ಶ್ರೀಮಂತಿಕೆ, ಭ್ರಷ್ಟಾಚಾರ, ಲೈಂಗಿಕ ಹಗರಣಗಳೆ ಇಂದು ದೊಡ್ಡಸ್ತಿಕೆಯ ಅರ್ಹತೆಗಳಾಗುತ್ತಿವೆ.

ಮನುಷ್ಯನ ಶ್ರಮಶಕ್ತಿಯನ್ನು ಹಾಗೂ ಸೃಜನಶೀಲತೆಯನ್ನು ನುಂಗಿಹಾಕಿ ನಿರುದ್ಯೋಗವನ್ನು ಹೆಚ್ಚುಮಾಡುವ ತಾಂತ್ರಿಕ ಅಭಿವೃದ್ಧಿಯಿಂದ ಮಾನವಮುಖಿ ಅಭಿವೃದ್ಧಿಯು ಸಾಧ್ಯವಾಗಲಾರದು. ವರಮಾನ ಪ್ರಧಾನವಾದ ಅಭಿವೃದ್ಧಿ ಚಿಂತನೆಗಳು ಮನುಷ್ಯನನ್ನು ಆನುಷಂಗಿಕವಾಗಿಸಿ ಉಪಕರಣದ ಮಟ್ಟಕ್ಕೆ ಸೀಮಿತಗೊಳಿಸಿಬಿಟ್ಟಿವೆ. ಉಪಕರಣವಾದಿ ವಿಚಾರಧಾರೆಯಲ್ಲಿ ಪ್ರತಿಯೊಂದನ್ನೂ 'ಸಾಧನ' ಅಥವಾ 'ಉಪಕರಣ'ವೆಂದು ಭಾವಿಸಲಾಗುತ್ತದೆ. ತಾಂತ್ರಿಕ ಅಭಿವೃದ್ಧಿಯು ಮನುಷ್ಯನ ಶಕ್ತಿಗೆ ಉಪಶಕ್ತಿಯಾಗುವ ಬದಲು ಮನುಷ್ಯನನ್ನೇ ಉಪಶಕ್ತಿಯನ್ನಾಗಿಸಿಕೊಂಡಿತು. ಉದಾಹರಣೆಗೆ ಪಾರಂಪರಿಕ ತಾಂತ್ರಿಕ ಅಭಿವೃದ್ಧಿಯಲ್ಲಿ ಎತ್ತು, ಎಮ್ಮೆಯಂಥ ಪ್ರಾಣಿಗಳು ಹಾಗೂ ಕೊಡಲಿ, ಕುಡುಗೋಲು, ಭರ್ಚಿಯಂಥ ಲೋಹಸಾಧನಗಳು ಮನುಷ್ಯನ ಶಕ್ತಿಗೆ ಉಪಶಕ್ತಿಗಳಾಗಿ ಬಳಕೆಯಾದವು. ಆದರೆ ಆಧುನಿಕ ತಂತ್ರಜ್ಞಾನದ ಫಲಿತಗಳಾದ ಕಂಪ್ಯೂಟರ್, ಮೊಬೈಲ್ ಇತ್ಯಾದಿ ಸಾಧನಗಳು ಮನುಷ್ಯನನ್ನೇ ಉಪಶಕ್ತಿಯಾಗಿಸಿಕೊಂಡು ಆತನ ಕ್ರಿಯಾಶೀಲತೆಯನ್ನು ನಿಷ್ಕ್ರಿಯಗೊಳಿಸಿದವು. ಇಂಥಲ್ಲಿ ಮನುಷ್ಯನನ್ನು ಅಭಿವೃದ್ಧಿಯ ನಿಯೋಗಿಯನ್ನಾಗಿಸದೆ ಫಲಾನುಭವಿಯನ್ನಾಗಿ ನೋಡಲಾಗುತ್ತಿದೆ.

ಮಾನವಮುಖಿ ಅಭಿವೃದ್ಧಿಗೆ ಆಧುನಿಕ ಸಂದರ್ಭದಲ್ಲಿ ಹೊಸ ಭಾಷ್ಯ ಬರೆದವರು ಅಮರ್ತ್ಯ ಸೇನ್‌ರಂತಹ ಮಾನವಾಭಿವೃದ್ಧಿಮುಖಿ ಚಿಂತಕರು. ಸಂದರ್ಭ ಮತ್ತು ಸನ್ನಿವೇಶಗಳು ಜನರ ಮೇಲೆ ಸಾಧಿಸಿರುವ ಅಂಕುಶಾಧಿಕಾರವನ್ನು ಪಲ್ಲಟಗೊಳಿಸಿ ಅವುಗಳ ಮೇಲೆ ಜನರು ಸಾಧಿಸುವ ಪರಮಾಧಿಕಾರವೇ ಅಭಿವೃದ್ಧಿ ಎಂದು ಹೇಳಿದರು (೧೯೮೩), ಅಂದರೆ ಜನರು ಬದುಕುವ ಅವಕಾಶಗಳ ಪರಿಧಿಯ ಸಂವರ್ಧನೆ ಹಾಗೂ ವಿಸ್ತರಣೆಯನ್ನು ಅಮರ್ತ್ಯ ಸೇನ್ ಅಂಥವರು ಅಭಿವೃದ್ಧಿ ಎಂದು ಹೇಳಿದರೆ ಹೊರತು ಕೇವಲ ವರಮಾನಾಧಾರಿತ ಅಭಿವೃದ್ಧಿಯನ್ನಲ್ಲ. ಮಾನವರಿಗೆ ಅವಕಾಶಗಳನ್ನು ತನ್ನದಾಗಿಸಿಕೊಳ್ಳಬಲ್ಲ ಸಾಮರ್ಥ್ಯ ಹಾಗೂ ಅವಕಾಶಗಳಲ್ಲಿ ಆಯ್ದುಕೊಳ್ಳುವ ಸ್ವಾತಂತ್ರ್ಯ ಇವೆರಡೂ ಗುಣಗಳನ್ನು ಒಳಗೊಂಡ 'ಧಾರಣಾಶಕ್ತಿ' (ಕೇಪಬಿಲಿಟಿ) ಬಹುಮುಖ್ಯವಾಗಿ ಬೇಕಾಗುತ್ತದೆ. ಸ್ವಾತಂತ್ರ್ಯ ಹಾಗೂ ಸ್ವಾವಲಂಬನೆ ಮಾನವಾಭಿವೃದ್ಧಿಯ ಮುಖ್ಯ ಧ್ಯೇಯ. ಸ್ವಾತಂತ್ರ್ಯ ಹಾಗೂ ಅಂತಃಪ್ರೇರಣೆಯ ಪರಿಸರದಲ್ಲಿ ಹುಟ್ಟುವ ಮಾನವ ಚೈತನ್ಯದ ಸಂಪೂರ್ಣ ಸಾವಯವಶೀಲ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿ ಎನ್ನುವುದು ಅಮರ್ತ್ಯ ಸೇನರ ನಿಲುವು. ವಿಚಾರಹೀನ, ತತ್ವಹೀನ ಪ್ರತ್ಯೇಕತೆ, ತಾರತಮ್ಯ ಹಾಗೂ ಶ್ರೇಣೀಕರಣಗಳ ಜಾಗದಲ್ಲಿ ತಾರತಮ್ಯ ರಹಿತ ಸಮಾನ ಅವಕಾಶಗಳನ್ನು ನೀಡುವುದು, ದಾಸ್ಯದ ಸಂಕೋಲೆಗಳನ್ನು ಕಿತ್ತೊಗೆದು ನೈಜ ಸ್ವಾತಂತ್ರ್ಯದೆಡೆಗೆ ಸಾಗುವುದೇ ಅಮರ್ತ್ಯ ಸೇನರಂತಹ ಮಾನವಾಭಿವೃದ್ಧಿಮುಖಿ ಚಿಂತಕರ ಮುಖ್ಯ ನೆಲೆಗಳಾಗಿರುವುದು ಗಮನಾರ್ಹ.

ಆದರೆ ಬಹಳ ಹಿಂದೆಯೇ ದಾರ್ಶನಿಕರೆನಿಸಿಕೊಂಡವರು ಮನುಷ್ಯನ ಸಶಕ್ತೀಕರಣಕ್ಕಾಗಿ ಹಂಬಲಿಸಿದ್ದು ವಿಶೇಷ. ಕನ್ನಡದ ಸಂತ ಸಾಧುಗಳು ತತ್ವಪದಕಾರರು ನಾನಾ ಕಾರಣಗಳಿಗಾಗಿ ನೆಮ್ಮದಿ ಕಳೆದುಕೊಂಡಿದ್ದ ಮನುಷ್ಯ ಸಮಾಜದ ಮನಸ್ಸಾಗಿ ಹಾಡಿದರು. ಬರಗಾಲ, ಕ್ಷಾಮ, ಅರಾಜಕತೆ, ಯುದ್ಧವಾದಿಗಳಿಂದಾಗಿ ಜನ, ರೋಗ, ರುಜಿನ, ನೋವು ಸಂಕಟಗಳಿಗೆ ಬಲಿಯಾಗಿ ದೈಹಿಕ ಹಾಗೂ ಮಾನಸಿಕ ನೆಮ್ಮದಿ ಕಳೆದುಕೊಂಡಿದ್ದ ಕಾಲದಲ್ಲಿ ತಮ್ಮ ತತ್ವ ಹಾಗೂ ಹಾಡುಗಳಿಂದ ಜನರಲ್ಲಿ ನೈತಿಕ ಶಕ್ತಿ ತುಂಬಿದರು. ಯುದ್ಧಗಳ ನಾಡಲ್ಲಿ ವಿರಕ್ತಿಯನ್ನು ಚಿಗುರಿಸಿ ವಿರಕ್ತಿಯೊಳಗೆ ಪ್ರಭುತ್ವವನ್ನು, ದಾಸ್ಯವನ್ನು ಧಿಕ್ಕರಿಸುವ ಶಕ್ತಿ ತುಂಬಿ ಮನುಷ್ಯನನ್ನು ಆತ್ಮವಿಶ್ವಾಸಿಯಾಗಿಸಿದರು ಹಾಗೂ ಸ್ವಾವಲಂಬಿಯಾಗಿಸಲು ಪ್ರಯತ್ನಿಸಿದರು.

ಬಹಳ ವಿಚಿತ್ರವೆಂದರೆ ಅನ್ಯ ಭಾಷೆ, ಭಾವನೆಗಳ ಸಾಣೇಕಲ್ಲಿನ ಮೇಲೆ ನಮ್ಮ ಯೋಚನೆಯ ಅಲಗುಗಳನ್ನು ಮಸೆದು ಚೂಪುಗೊಳಿಸಿಕೊಳ್ಳುತ್ತ ಬಂದಿರುವ ನಮಗೆ ಬಹು ಕಾಲದಿಂದಲೂ ನಮ್ಮೊಳಗೆ ರೂಪಗೊಂಡು ಬಂದ ಇಂಥ ಮಾನವಮುಖಿ ಚಿಂತನೆಯ ಅಲಗುಗಳನ್ನು ವ್ಯವಧಾನದಿಂದ ನೋಡದೆ ಮೂಲೆಗೆ ಹಾಕಿ ಜಂಗು ಹಿಡಿಯುವಂತೆ ಮಾಡಿದೆವು. ವಿಶೇಷವಾಗಿ ಭಾರತೀಯ ಹಾಗೂ ಕರ್ನಾಟಕದ ದಾರ್ಶನಿಕರು ಹಾಗೂ ಅವರ ತತ್ವಗಳು ಮನುಷ್ಯನ ಜಾಗೃತಿ ಹಾಗೂ ಆತನ ಉನ್ನತೀಕರಣಕ್ಕಾಗಿ ಹಂಬಲಿಸಿದ ಚಿಂತನೆಗಳನ್ನು ಜಡ ಧರ್ಮ ಅಥವಾ ಅಧ್ಯಾತ್ಮದ ಹೆಸರಲ್ಲಿ ಸ್ಥಾವರಗೊಳಿಸಲಾಯಿತು. ಅವುಗಳನ್ನು ಸದ್ಯದ ವಿವೇಕಕ್ಕೆ ತೆರೆದುಕೊಳ್ಳದ ಕದಗಳನ್ನಾಗಿಸಿ

**ಸಮನ್ವಯ, ಸ್ವಾವಲಂಬನೆ, ಸ್ವಾನುಭಾವ, ಅಭೇದವಾದಿ ಚಿಂತನೆಗಳು ಸಂತ ಮತದ ಜೀವಾಳವಾಗಿದ್ದವು. ಸ್ವಾನುಭೂತಿ, ಸದಾಚಾರಗಳಿಂದ ಈ ಧರಾಧಾಮವನ್ನೇ ಮೋಕ್ಷಧಾಮವನ್ನಾಗಿ ಮಾಡಬಹುದೆಂದು ನಂಬಿದ್ದರು. ಸದಾಚಾರಕ್ಕೆ ಸಂತರು ಕೊಟ್ಟಿರುವ ಒತ್ತು ಕಥನಿ ಮತ್ತು ಕರನೀ (ಮಾತು ಮತ್ತು ಕೃತಿ). ಇವುಗಳ ಸಾಂಗತ್ಯವೇ ಸದಾಚಾರವೆಂದು ನಂಬಿದರು. ಸಂತರು ವಿಶಾಲ ದಾರ್ಶನಿಕ ದೃಷ್ಟಿಕೋನವನ್ನು ಬೆಳೆಸಿಕೊಂಡಿದ್ದರು. ಪರಸ್ಪರ ವಿರೋಧಿ ಭಾವನೆ ಹಾಗೂ ಸಾಧನೆಗಳಿಗಿಂತ ಮಾನವ ಜೀವನ ಮತ್ತು ಅಲ್ಲಿ ಬರುವ ಪ್ರವೃತ್ತಿಗಳ ಸಮನ್ವಯಕ್ಕೆ ಹೆಚ್ಚಿನ ಮಹತ್ವ ನೀಡಿದರು. ಬದುಕಿನ ಅಖಂಡತೆಯಲ್ಲಿ ಪೂರ್ಣ ವಿಶ್ವಾಸವಿಟ್ಟಿದ್ದರಿಂದ ಬದುಕನ್ನು ಪೂರ್ಣಗೊಳಿಸುವ ಬಗೆಯನ್ನು ಅವರು ವಿರೋಧಿಸಲಿಲ್ಲ. ಮನುಷ್ಯ ನಿರ್ಮಿತ ಎಲ್ಲ ಭೇದಭಾವಗಳನ್ನು ಅಳಿಸಿಹಾಕುವುದರಲ್ಲಿ ಸಂತಮತದ ಅದ್ವೈತವಾದೀ ಭಾವನೆ ಅತ್ಯಂತ ಸಹಾಯಕವಾಯಿತು.**

ಮುಚ್ಚಿ ಬೀಗ ಹಾಕಲಾಯಿತು. ದೈಹಿಕ ಹಾಗೂ ಮಾನಸಿಕ ದಾಸ್ಯ ಹಾಗೂ ಬಡತನದಿಂದಾಗಿ ದುರ್ಬಲನಾಗುತ್ತಿದ್ದ ಮನುಷ್ಯನ ದೈಹಿಕ ಹಾಗೂ ಅತಿಯಾದ ಭೋಗ ಮತ್ತು ಮಾನಸಿಕ ಸಾಮರ್ಥ್ಯಗಳಿಗೆ ಸಾಣೆ ಹಿಡಿದು ಸಾಮಾಜಿಕ ಭದ್ರತೆ ಹಾಗೂ ಸ್ಥಿರತೆಗೆ ಇಂಬು ಒದಗಿಸಿದರು. ಮಾನವಮುಖಿ ಅಭಿವೃದ್ಧಿಯ ಸ್ವಾತಂತ್ರ್ಯವನ್ನು ತನ್ನೊಳಗು ಮಾಡಿಕೊಂಡಿದ್ದ ಸಂತ ಶರಣರ ಹಾಡುಗಳು ಮನುಷ್ಯನ ಅಂತಃಶಕ್ತಿಯನ್ನು ಸಂವರ್ಧಿಸಬಲ್ಲ ಶಕ್ತಿ ಪಡೆದಿದ್ದವು. ಸ್ವಾತಂತ್ರ್ಯ ಹಾಗೂ ಸ್ವಾವಲಂಬನೆ ಅವರ ಮಾನವಮುಖಿ ಅಭಿವೃದ್ಧಿಯ ಮುಖ್ಯ ಧ್ಯೇಯವಾಗಿತ್ತು. ಅದಕ್ಕಾಗಿ ಅವರು ಅನುಭಾವಿಕ ಭಾಷೆಯಲ್ಲಿ ಮಾತನಾಡಿದರು.

ಸಮನ್ವಯ, ಸ್ವಾವಲಂಬನೆ, ಸ್ವಾನುಭಾವ, ಅಭೇದವಾದಿ ಚಿಂತನೆಗಳು ಸಂತ ಮತದ ಜೀವಾಳವಾಗಿದ್ದವು. ಸ್ವಾನುಭೂತಿ, ಸದಾಚಾರಗಳಿಂದ ಈ ಧರಾಧಾಮವನ್ನೇ ಮೋಕ್ಷಧಾಮವನ್ನಾಗಿ ಮಾಡಬಹುದೆಂದು ನಂಬಿದ್ದರು. ಸದಾಚಾರಕ್ಕೆ ಸಂತರು ಕೊಟ್ಟಿರುವ ಒತ್ತು ಕಥನಿ ಮತ್ತು ಕರನೀ (ಮಾತು ಮತ್ತು ಕೃತಿ). ಇವುಗಳ ಸಾಂಗತ್ಯವೇ ಸದಾಚಾರವೆಂದು ನಂಬಿದರು. ಸಂತರು ವಿಶಾಲ ದಾರ್ಶನಿಕ ದೃಷ್ಟಿಕೋನವನ್ನು ಬೆಳೆಸಿಕೊಂಡಿದ್ದರು. ಪರಸ್ಪರ ವಿರೋಧಿ ಭಾವನೆ ಹಾಗೂ ಸಾಧನೆಗಳಿಗಿಂತ ಮಾನವ ಜೀವನ ಮತ್ತು ಅಲ್ಲಿ ಬರುವ ಪ್ರವೃತ್ತಿಗಳ ಸಮನ್ವಯಕ್ಕೆ ಹೆಚ್ಚಿನ ಮಹತ್ವ ನೀಡಿದರು. ಬದುಕಿನ ಅಖಂಡತೆಯಲ್ಲಿ ಪೂರ್ಣ ವಿಶ್ವಾಸವಿಟ್ಟಿದ್ದರಿಂದ ಬದುಕನ್ನು ಪೂರ್ಣಗೊಳಿಸುವ ಬಗೆಯನ್ನು ಅವರು ವಿರೋಧಿಸಲಿಲ್ಲ. ಮನುಷ್ಯ ನಿರ್ಮಿತ ಎಲ್ಲ ಭೇದಭಾವಗಳನ್ನು ಅಳಿಸಿ ಹಾಕುವುದರಲ್ಲಿ ಸಂತಮತದ ಅದ್ವೈತವಾದೀ ಭಾವನೆ ಅತ್ಯಂತ ಸಹಾಯಕವಾಯಿತು.

*ಜಾತಿನ ಪೂಛೋ ಸಾಧುಕೀ ಪೂಛ ಲೀಜಿಏ ಜ್ಞಾನ।*
*ಮೋಲ್‌ಕರೋ ತಲವಾರ್ ಕಾ ಪಡಾ ರಹನೇ ದೋ ಮ್ಯಾನ್*

– ಎಂದರೆ 'ಜಾತಿಯ ಕೇಳದಿರು ಸಾಧುವ, ಕೇಳು ಅವನ ಅರಿವ। ಕೊಳ್ಳು ಖಡ್ಗವ, ಬಿದ್ದಿರಲಿ ಬಿಡು ಒರೆಯ' (ಕಬೀರ).

'ನೀರು ನೀರು ಕೂಡಿದ ಬಳಿಕ ಭೇದಭಾವಗಳ್ಯಾಕ ಬೇಕೋ। ಬೆಲ್ಲಸವಿಯ ಕೂಡಿದಂತೆ ಕೂಡಿಕೊಳ್ಳೋ ನೀನು ಇಲ್ಲೆ।' (ನಿಂಬರಾಗಿ ಮಹಾರಾಜ) ಎನ್ನುವ ಸಂತರ ಅಖಂಡತೆಯ ಕಲ್ಪನೆಯೇ ಮಾನವಾಭಿವೃದ್ಧಿಮುಖಿ ಚಿಂತನೆಯ ಮುಖ್ಯನೆಲೆಯಾಗಿದೆ.

*ಎಲ್ಲಿ ಭಕ್ತಿಯದೆಲ್ಲಿ ಮುಕ್ತಿಯದೊ ಈ ಸೂಳೆಮಕ್ಕಳಿ*
*ಗೆಲ್ಲಿ ಭಕ್ತಿಯದೆಲ್ಲಿ ಮುಕ್ತಿಯದೋ ॥ಪ॥*
*ಎಲ್ಲಿ ಭಕ್ತಿಯದೆಲ್ಲಿ ಮುಕ್ತಿಯೊ ಕಳ್ಳ ಹಾದರಗಿತ್ತಿಯ ಪರಿ।*
*ಖುಲ್ಲತನದಲಿ ಚರಿಸಿ ಶಿವಪದವೆಲ್ಲಿ ಕಾಣದೆ ಸಾಹುತಿಹರಿಗೆ।*
*ಎಲ್ಲಿ ಭಕ್ತಿಯದೆಲ್ಲಿ ಮುಕ್ತಿಯದೋ*

(ಘನಮಠ ಶಿವಯೋಗಿ)

– ಉಪಭೋಗವಾದಿ ಆಧುನಿಕ ಮನುಷ್ಯಕುಲದ ಆತ್ಮಸಾಕ್ಷಿರಹಿತ ಅಲ್ಲೋಲ ಕಲ್ಲೋಲವನ್ನು ಸ್ವಾವಲಂಬಿ ರಹಿತ ಸೃಷ್ಟಿಹೀನ ಬದುಕನ್ನು ಮೇಲಿನ ಮಾತುಗಳು ಬಿಂಬಿಸುತ್ತವೆ. ಭೌತಿಕ ರೂಪದ ಸಾಮಾಜಿಕ ಹಾಗೂ ಆರ್ಥಿಕ ಸುಧಾರಣೆಗಳಿಗಿಂತ, ಮನುಷ್ಯನ ಆಂತರಿಕ ಸ್ಥರದ ವಿಕಾಸಕ್ಕಾಗಿ ಸಂತರು ಹಂಬಲಿಸಿದರು. 'ಪರರು ನಿನ್ನಂತೆ ಬಗೆಯಲೋ ಮಾನವ' ಎಂದು ತನ್ನ ತಾನರಿವ, ತನ್ನಂತೆ ಎಲ್ಲರೂ ಎನ್ನುವುದನ್ನು ತಿಳಿವ ಪರಿಯನ್ನು ಜನತೆಗೆ ಕಲಿಸಿದರು. ದೈವೋಪಾಸನೆಗಿಂತ ಶುದ್ಧ ಸಾತ್ವಿಕ ಜೀವನದ ಮೂಲಕ ಮಾನವ ತನ್ನ ಪೂರ್ಣ ವಿಕಾಸಕ್ಕೆ ದುಡಿಯಬೇಕು, ಸ್ವತಂತ್ರ ವಿಚಾರ ಹಾಗೂ ಅನುಭೂತಿ ಆಧಾರದ ಮೇಲೆ ತನ್ನ ಆದರ್ಶಗಳನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು, ಕಾಯದೊಳಗೇ ಇರುವ ಅಮೃತ ತತ್ವವನ್ನು ಅರಸಬೇಕು, ಮನುಷ್ಯನೊಳಗೆ ಅಮರ ಶಕ್ತಿಯಿದೆ. ಅದರ ಸರಿಯಾದ ಜಾಗೃತಿ ಅವನನ್ನು ಮೇಲಕ್ಕೆತ್ತುತ್ತದೆ ಎಂದು ಹೇಳಿದರು.

*ಮನದೊಳು ಶಿವ ತಾನೆ ಮನೆಮಾಡಿಕೊಂಡಿಹ*
*ಮನಮೆಚ್ಚಿ ನಡೆದರೆ ಶಿವಮೆಚ್ಚುವ*
*ಮನಕಂಜಿ ನಡೆಯದೆ ಜನಕಂಜಿ ನಡೆದರೆ*
*ಮನದಾಣ್ಮ ಗುರುಸಿದ್ಧ ಮರೆಯಾಗೋನಲ್ಲ*

(ಸರ್ಪಭೂಷಣ ಶಿವಯೋಗಿ)

ಆತ್ಮಜ್ಞಾನಿಗಳ ಅಂತಃಸಾಕ್ಷಿ ಪ್ರಜ್ಞೆಯನ್ನು ಇಂಥಲ್ಲಿ ಕಾಣುತ್ತೇವೆ. 'ನನ್ನೊಳಗ ನಾನು ತಿಳಕೊಂಡೆ ನನಗ ಬೇಕಾದ ಗಂಡನ್ನ ಮಾಡಿಕೊಂಡೆ' (ಅಜ್ಞಾತ), 'ಕಳಕೋ ಮಲೀನ ನೀನೆಲೋ, ನಿನ್ನೊಳಗ ನೀ ತಿಳಕೋ' (ನಿಂಬರಗಿ ಮಹಾರಾಜ), 'ಅಂತರಂಗದಲ್ಲಿನ ಹರಿಯ ಕಾಣದವನೆ ಹುಟ್ಟು ಕುರುಡನೋ' (ವ್ಯಾಸರಾಯ) 'ಶಕ್ತನಾಗಿ ತನ್ನರಿತ ಬಳಿಕ ಅವ್ಯಕ್ತನಾದ ಬಗಿ ಬ್ಯಾರಣ್ಣಾ' (ಅಜ್ಞಾತ), 'ತಾ ದೇವರಲ್ಲದಿನ್ನೊಂದು ದೇವರೆಲ್ಲಾದ ಕಾಯ್ದಾಡಿ ಸಾಯುವುದ್ಯಾತಕ' (ನೀರಲಕೇರಿ ಬಸವಲಿಂಗ ಶರಣರು), 'ಶಿವನಿನ್ನಲ್ಲಿಹನ ನೀ ನೋಡಿಲ್ಲ ಎಲ್ಲೆಲ್ಲಿ ಹುಡಿಕಿದರಿಲ್ಲ' (ಸಾವಳಗಿ ಮಹಮ್ಮದ ಸಾಹೇಬ), 'ಪಂಡಿತರು ಎಲ್ಲ ಶಾಸ್ತ್ರವ ಬಲ್ಲರು ಆದರೆ ದೇಹದಲ್ಲೆ ಬುದ್ಧನಿಹನೆಂಬುದನರಿಯರು' (ಕಬೀರದಾಸ).

ಮೇಲಿನ ಎಲ್ಲ ಮಾತುಗಳು ಮನುಷ್ಯನ ಆತ್ಮಾನುಭವ ಹಾಗೂ ಅಂತಃಪ್ರಜ್ಞೆಯ ಜಾಗೃತಿಯನ್ನು ಒತ್ತಿ ಹೇಳುತ್ತವೆ. 'ಆತ್ಮವ ಮಾರಿ ದೇವರ ಕೊಂಡಿ' (ಕಂಬಾರ)ರುವ ಮನುಷ್ಯ ಯಂತ್ರ ನಾಗರಿಕತೆಯಲ್ಲಿ ಅನಾತ್ಮನಾಗಿದ್ದಾನೆ ಹಾಗೂ ಅದೇಹಿಯಾಗಿದ್ದಾನೆ. ಅವನದೇನಿದ್ದರೂ ಜಡಭಾಗಿತ್ವ. ಮನುಷ್ಯನ ಅಸ್ತಿತ್ವವನ್ನು ಇದ್ದೂ ಇಲ್ಲವಾಗಿಸಿರುವ ಯಾಂತ್ರಿಕ ಅಭಿವೃದ್ಧಿ ಸಂದರ್ಭಗಳಲ್ಲಿ ಕಾಯನಿಷ್ಠ ಆಧ್ಯಾತ್ಮಿಕ ಅನುಭೂತಿಯ ಸಂತರ ಮಾತುಗಳು ಮನುಷ್ಯ ಅಸ್ತಿತ್ವಕ್ಕೆ ಹೋರಾಡುವ ಕೈದೀವಿಗೆಗಳಾಗುತ್ತವೆ.

*ಮಾರಲೀಲ ಸುಖವ ತಾಳ್ದು ತನುವನಗ್ರದ ಕಳೆಯನರಿದು*
*ಬೇರೆ ತಂತ್ರವಿಲ್ಲವೆಂದು ತಿಳಿದು ಚಿತ್ತದಿ*
*ತೋರಿ ತೋರಿ ನಿತ್ಯ ನಿತ್ಯ ನೆನೆವ ಮನದ ರತಿಯ ಕೀಲು*
*ಜಾರಿತೆಂದು ಹೇಳು ಕಂಡ್ಯಾ ಕೋಗಿಲೆ*

(ಕಾರುಗಹಳ್ಳಿ ಶಾಂತದೇವರು)

*ಇದ್ದರ ಇರಬೇಕ ಸಂಸಾರ ಸುಖದಲ್ಲೀಗೆ*
*ಪದ್ಮಪತ್ರವು ಜಲದೊಳಗಿದ್ದಾಂಗ*

(ಮಹಿಪತಿದಾಸರು)

*ನೀರಿಲ್ಲದ ಜಳಕ ಮಾಡಿರಬೇಕು*
*ತಂಬಾಕಿಲ್ಲದ ಬತ್ತಿ ಸೇದಿರಬೇಕು*

(ಅಜ್ಞಾತ)

– ಇತ್ಯಾದಿ ಮಾತುಗಳು ನಾಲ್ಕು ಹೊತ್ತು ಗಳಿಕೆ ಆಲಿಂಗನ, ನಿಂದ್ರೆಯಂಥ ಬಾಹ್ಯ ಚಟುವಟಿಕೆಯಲ್ಲೇ ಸವಕಲಾಗಿ ಹೋಗುತ್ತಿರುವ ಮಾನವ ಶಕ್ತಿಯನ್ನು ಸಾಧನೆಯಿಂದ ಊರ್ಧ್ವಮುಖಿಗೊಳಿಸಬೇಕು. ರಾಮದೇವ, ಅಕ್ಕಮಹಾದೇವಿಯಂತಹ ಸಂತರು, ಪರವಸ್ತುವನ್ನು ಸತ್‌ಗುರು, ಸತಿ–ಪತಿ, ಸಾಹಬ್, ಸಖ ಎಂದು ರಾಗಾತ್ಮಕ ಸಂಬಂಧದಿಂದ ಉಪಾಸಿಸಿದವರು. ರಾಗಾತ್ಮಕ ಸಂಬಂಧವನ್ನೇ ಅನುಭಾವವಾಗಿಸಿದ, ಭಕ್ತಿಯಾಗಿಸಿದ, ಕೃಷ್ಣ–ರಾಧೆ ಗೋಪಿಯರ ಸಂಬಂಧಗಳು ಗಮನಾರ್ಹವಾದಂಥವು. ಹಾಗಂತ ದಾಕ್ಷಿಣ್ಯ, ನೋವು, ವಿರಹದಲ್ಲೇ ಬೆಂದು ಬರೀ ಭಜನೆಯಲ್ಲೇ ಲೀನರಾದ ಭಕ್ತರಿವರಲ್ಲ. ತಮ್ಮ ವೈಯಕ್ತಿಕ ಜೀವನದಲ್ಲಿ ಸದಾಚಾರ ಸಂಬಂಧೀ ಸಾಮಾಜಿಕ ನಿಯಮಗಳನ್ನು ಪಾಲಿಸುವುದು ಸಂತರ ದೃಷ್ಟಿಯಲ್ಲಿ ಅಗತ್ಯವಾಗಿತ್ತು. ಅಂದರೆ ಮನುಷ್ಯನ ಪ್ರವೃತ್ತಿ ಹಾಗೂ ನಿವೃತ್ತಿಗಳ ಸಮನ್ವಯ ಇಂಥ ಸಂತಮತಗಳ ವೈಶಿಷ್ಟ್ಯವೆಂದೇ ಹೇಳಬೇಕು.

*ಹುಚ್ಚ ನೀ ಎಚ್ಚರಿಲ್ಲದೆ ಗಚ್ಚಿನ ಮನೆಗೆ ಮೆಚ್ಚಬೇಡ*
*ನುಚ್ಚು ಉಂಡವರ ಇಚ್ಚೆ ನುಡಿದು ಮಚ್ಚೇಲಿ ಹೊಡಿಸಿಕೊಳ್ಳಬೇಡ।*

(ಅಜ್ಞಾತ)

ಭೌತಿಕವಾದ ಉಪಭೋಗಿ ಸುಖಗಳ ಮೇಲೆ ಅತಿ ಅವಲಂಬಿಯಾಗಿ ತನ್ನತನವನ್ನೇ ಕಳೆದುಕೊಂಡು ಮನುಷ್ಯ ಮತಿಹೀನನಾಗಬಾರದು. ಇರುವ ಮಿತಿಯೊಳಗೆ ಬದುಕನ್ನು ಸಹ್ಯಮಾಡಿಕೊಳ್ಳಬೇಕು ಎನ್ನುವ ಎಲ್ಲ ಸಂತರ ಮಾತು ಸಂಪತ್ತು ಹಾಗೂ ಅಧಿಕಾರ ಮದಗಳನ್ನು ಮೀರುವುದಾಗಿತ್ತು. ವಿರಕ್ತಿಯನ್ನು ಸಂತರು ಲೌಕಿಕವನ್ನು ಮೀರುವ ಚಿತ್ತ ಸಮತೆಯ ಸ್ಥಿತಿಯಾಗಿ ವ್ಯಾಖ್ಯಾನಿಸಿದರೇ ಹೊರತು ಲೌಕಿಕ ಬದುಕನ್ನೇ ಧಿಕ್ಕರಿಸುವ ನಿಟ್ಟಿನಲ್ಲಿ ಅಲ್ಲ. ವಿರಕ್ತಿ ಎನ್ನುವುದನ್ನು ಧಾರಣಶಕ್ತಿಯನ್ನಾಗಿ ಮಾನಸಿಕವಾಗಿ ಗೆಲ್ಲುವ ತಾಕತ್ತನ್ನಾಗಿ ಮಂಡಿಸಿದರು. ಆ ಮೂಲಕ ಲೋಕದ ಸಾಂಸ್ಥಿಕರಣದ ಅಪಾಯಗಳನ್ನು ಎದುರಿಸಿ ಬದುಕುವ ಎದೆಗಾರಿಕೆಯನ್ನು ಸಂತರು ಜನಕ್ಕೆ ಕಲಿಸಿಕೊಟ್ಟರು.

*ಯಾತಕ ಚಿಂತಿ ಮನವೇ। ಗುರು*
*ನಾಥನಿರಲ್ಯಾತಕ್ಕೆ ಚಿಂತಿ ಮನವೆ*
*ಯಾತಕ ಚಿಂತಿ ಗುರುನಾಥನ ಕರುಣದಿ*
*ಪಾತಕ ಪಿಂಗಿ ಪರಮಾತ್ಮನಾದ ಬಳಿಕ್ಯಾತಕ ಚಿಂತಿ*

– ಗಬ್ಬೂರ ಹಂಪಣ್ಣನ ಈ ಹಾಡು ಮನುಷ್ಯನು ಲೋಕದ ಕಷ್ಟ ಗೆಲ್ಲಬೇಕೆಂದರೆ ಗುರು ತೋರಿದ ಅರಿವಿನ ಮಾರ್ಗದಲ್ಲಿ ನಡೆಯಬೇಕು. ವ್ಯಕ್ತಿ ಉದ್ಧಾರಕ್ಕೆ ಗುರುವಿನ ಮೊರೆ ಅಗತ್ಯ. ಸಂತರು ಗುರುವಿಗಾಗಿ ಮಾಡುವ ಹುಡುಕಾಟವೆ ತನ್ನತನದ ಹುಡುಕಾಟ ವಾಗಿದೆ. ಗುರುವಿನೊಂದಿಗೆ ಸಂತರು ಮಾಡುವ ಮೌನಾನುಸಂಧಾನ ಸಾಧನೆಯ ಮಾರ್ಗವನ್ನರಿಯುವ ಪರಿಯದ್ದಾಗಿರುತ್ತದೆ. 'ನರನ ಕೆಡಿಸಿ ಹರನ ಮಾಡಿದ ಸದ್ಗುರುರಾಯ' (ಕೂಡಲೂರು ಬಸವಲಿಂಗ ಶರಣ), 'ಹರಮುನಿದರೆ ಗುರು ಕಾಯುವನು (ನೀರಲಕೇರಿ ಶರಣ) – ಎನ್ನುವಂಥ ದೃಢ ನಂಬಿಕೆಯೇ ಬದುಕಿನ ಮೂಲವನ್ನು ಮತ್ತು ತನ್ನ ತಾನರಿವ ಪರಿಯನ್ನು ಹುಡುಕುವ ಕ್ರಮವಾಗಿದೆ.




ಹೀಗೆ ಅನುಭಾವದ ನೆಲೆಯಲ್ಲಿ ಬದುಕಿನ ಅರ್ಥ ಶೋಧಿಸಿದವರು ಕನ್ನಡ ಸಂತರು. ಅನುಭವ ಎಂದರೆ ಪ್ರತ್ಯಕ್ಷಜ್ಞಾನ. ಸ್ವಾನುಭೂತಿಯ ಸ್ಥಿತಿಯಲ್ಲಿ ತನ್ನತನ ಇಲ್ಲವೇ ಆತ್ಮದ ಅನುಭವವಾಗುವ ಪರಮತತ್ತ್ವದ ಅನುಭೂತಿ ಎಂದರ್ಥ. ಅನುಭವ ಹಾಗೂ ಅನುಭೂತಿ ಮನುಷ್ಯನ ಕ್ರಿಯೆ ಹಾಗೂ ಕೌಶಲ್ಯವನ್ನು ಸದೃಢಗೊಳಿಸುತ್ತದೆ. ಸಂತ ರೈದಾಸ ಹೇಳುವಂತೆ, 'ನಾನು ನನ್ನಲ್ಲೇ ನನ್ನನ್ನು ಕಂಡೆ, ನನಗೆ ನನ್ನತನ (ಆತ್ಮ) ತನ್ನಷ್ಟಕ್ಕೇ ತಾನೇ ಹೊಳೆಯಿತು, ಸ್ವಃ ಹೇಳಿ ಕೇಳುವುದರಿಂದ ನನಗೆ ಆತ್ಮಜ್ಞಾನ ದೊರೆಯಿತು', ಎನ್ನುತ್ತಾನೆ. ವ್ಯಕ್ತಿಗತ ಅನುಭವದ ಅನಿರ್ವಚನೀಯತೆಯೇ ಮನುಷ್ಯನನ್ನು ದಾಸ್ಯದಿಂದ ಬಿಡುಗಡೆ ಮಾಡಿ ಸ್ವತಂತ್ರವಾಗಿಸುತ್ತದೆನ್ನುವ ಭಾವ ಇಲ್ಲಿ ಮುಖ್ಯವಾಗಿದೆ.

ರೂಢಿವಾದದ ವಿರೋಧಿಗಳಾಗಿದ್ದ ಸಂತರು ಈ ಅರ್ಥದಲ್ಲಿ ಪ್ರಗತಿವಾದಿಗಳಾಗಿದ್ದಾರೆ. ಸಾಮ್ಯ ಹಾಗೂ ಉಪಯೋಗಿತಾವಾದದ ಪೋಷಕರಾದ ಸಂತರು ಜನತೆಯಲ್ಲಿ ಆತ್ಮವಿಶ್ವಾಸ ಮತ್ತು ಆಶಾವಾದವನ್ನು ತುಂಬಿ ವರ್ತಮಾನದಲ್ಲಿ ಮಾನವ ನಿಜವಾದ ಅರ್ಥದಲ್ಲಿ ಸಶಕ್ತನಾಗಲು ಪ್ರೇರೇಪಿಸಿದರು. 'ಪ್ರಗತಿಪರರೆನಿಸಿಕೊಂಡವರು ಮೇಲಿನ ಸಂಗತಿಗಳನ್ನು ರಾಜಕೀಯಾರ್ಥಿಕ ದೃಷ್ಟಿಕೋನಗಳಿಂದ ನೋಡಿದರೆ ಸಂತರು ಅದನ್ನು ಸರಳ ಆಧ್ಯಾತ್ಮಿಕ ಕಣ್ಣಿನಿಂದ ನೋಡುತ್ತಾರೆ. ಪ್ರಗತಿ ವಾದಿಗಳು ವರ್ಗಸಂಘರ್ಷಕ್ಕೇ ಒತ್ತುಕೊಟ್ಟರೆ ಸಂತರು ನಿರ್ವೈರ ಭಾವಕ್ಕೆ ಒತ್ತುಕೊಟ್ಟರು. ಪ್ರಗತಿವಾದಿಯು ಸಾಮಾಜಿಕ ಕ್ರಾಂತಿಯಲ್ಲಿ ನಂಬಿಕೆಯಿಟ್ಟು ರಾಜಕೀಯ ಉಪವಿಪ್ಲವದಿಂದಲೇ ವ್ಯಕ್ತಿ ವಿಕಾಸ ಸಂಭವ ಸಾಧ್ಯ ಎನ್ನುತ್ತಾನೆ. ಆದರೆ ಸಂತ ವೈಯಕ್ತಿಕ ಪರಿವರ್ತನೆಯಲ್ಲಿ ಆಸ್ಥೆಯಿಡುತ್ತಾನೆ. ಅದರ ತಳಹದಿಯ ಮೇಲೆ ಮಹಾಮಾನವನನ್ನು ಪ್ರತಿಷ್ಠಾಪಿಸಿ ಉಚ್ಚ ಸಾಮಾಜಿಕ ಸ್ತರದ ನಿರ್ಮಾಣದ ಮೂಲಕ ಈ ಭೂಮಿಯ ಮೇಲೆ ಸ್ವರ್ಗವನ್ನು ನೆಲೆಗೊಳಿಸಬಯಸುತ್ತಾನೆ. (ಉತ್ತರದ ಸಂತ ಪರಂಪರೆ, ಪುಟ ೭೪) ಎನ್ನುವ ಡಾ॥ ಮ. ಸು. ಕೃಷ್ಣಮೂರ್ತಿಯವರ ಮಾತು ಇಲ್ಲಿ ಔಚಿತ್ಯಪೂರ್ಣವೆನಿಸುತ್ತದೆ.

ಮಾನಸಿಕ ಅಸಮತೋಲನ ಹಾಗೂ ಸಾಮಾಜಿಕ ಅಸಮಾನತೆಗಳನ್ನು ಹೆಚ್ಚಿಸಿ ಮನುಷ್ಯನ ಅಂತಃಶಕ್ತಿಯನ್ನು ಕೊಲ್ಲುವ ಲೌಕಿಕ ನೆಲೆಗಳ ವಿರುದ್ಧ ಸೆಟೆದು ನಿಂತು ಭೇದ ತೊರೆಯುವ ಉಪದೇಶ ನೀಡಿದವರು ಈ ನಾಡಿನ ಸಂತರು. ಪರಸ್ಪರರು ಪ್ರೀತಿ ಅಂತಃಕರಣ ಹಾಗೂ ಉಪಕಾರ ಭಾವದಿಂದ ಬದುಕಬೇಕು. ಸರಳವೂ ಸಾತ್ತ್ವಿಕವೂ ಆದ ಜೀವನದಲ್ಲಿ ಅಹಿಂಸೆ ಹಾಗೂ ಅಪರಿಗ್ರಹಕ್ಕೆ ಒತ್ತು ನೀಡಬೇಕು ಎಂದರು. ಸ್ತುತಿ, ನಿಂದೆ, ಮಾನಾಪಮಾನಗಳನ್ನು ಲೆಕ್ಕಿಸದೆ ತಮ್ಮ ಶುದ್ಧ ಆತ್ಮಾನುಭಾವದಿಂದ ಎಲ್ಲರಿಗೂ ಶಾಂತಿ ನೆಮ್ಮದಿ ನೀಡಿ ಸ್ವತಃ ತಾವೂ ಸ್ವಾನಂದದಲ್ಲಿ ತೇಲಿದವರು. ವರ್ಗಹೀನ ಸಮಾಜದ ಹರಿಕಾರರಾದ ಸಂತರು ಈ ಭೂಮಿ ಹಾಗೂ ಮನುಷ್ಯನನ್ನು ಸ್ವಾನುಭೂತಿ ಹಾಗೂ ಸದಾಚಾರದಿಂದ ಸಶಕ್ತಗೊಳಿಸಿದರು. ಮನುಷ್ಯ ಹಾಗೂ ಆತನ ಧಾರಣಾಶಕ್ತಿಯ ಅಭಿವೃದ್ಧಿಗೆ ಮೊದಲ ಆದ್ಯತೆ ನೀಡಿದರು. ಆ ಮೂಲಕ ಮಾನವಾಭಿವೃದ್ಧಿಮುಖಿ ಚಿಂತನೆಗಳನ್ನು ಆಧುನಿಕ ಪೂರ್ವದಲ್ಲಿಯೇ ಹುಟ್ಟುಹಾಕಿ ಮಾನವಮುಖಿ ಅಭಿವೃದ್ಧಿ ಚಿಂತನೆಗಳ ಹರಿಕಾರರಾಗಿದ್ದಾರೆ.

**ಡಾ॥ ವೀರೇಶ ಬಡಿಗೇರ**
ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬, ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

---

*(೫೬ನೇ ಪುಟದಿಂದ ಮುಂದುವರೆದಿರುವುದು)*

ಕಾರಣವನ್ನೂ ಕೊಡುತ್ತಾರೆ. ನಮ್ಮ ದೇಶದ ಇತಿಹಾಸವೂ ಕೂಡ 'ಅವನ' ಕತೆಯಾಗಿದೆಯೇ ಹೊರತು ಅದು ಎಂದಿಗೂ 'ಅವಳ' ಕತೆಯಾಗಿರಲೇ ಇಲ್ಲ' ಎಂಬ ಲೇಖಕರ ವಾದವನ್ನು ತಳ್ಳಿಹಾಕಲಾದೀತೇ ?

ಕ್ರಾಂತಿ ಚಿಂತನೆಗಳಲ್ಲಿ ಹೊಮ್ಮಿದ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಚಿಂತನೆಗಳನ್ನು ಮುಖಾಮುಖಿಯಾಗಿಸಿರುವ ಲೇಖಕರು, "ಇಂಡಿಯಾಕ್ಕೆ ಸಮಾಜವಾದ ತೀರಾ ಅನಿವಾರ್ಯ. ಅದು ಇಲ್ಲದಿದ್ದರೆ ಖಾಸಗಿ ಸಂಸ್ಥೆಗಳು ಸಂಪತ್ತಿನ ಅಸಮಾನತೆಯನ್ನು ಬೆಳೆಸಿ ದ್ವೇಷಾಸೂಯೆಗಳಿಗೆ ಎಡೆ ಮಾಡಿಕೊಡುತ್ತವೆ. ಮಾರ್ಕ್ಸ್‌ವಾದ ಒಂದೇ ನಮಗೆ ಮದ್ದು. ಆದರೆ, ಮಾರ್ಕ್ಸ್‌ವಾದ ನಮಗೆ ಮಾರ್ಗದರ್ಶಕವಾಗಬೇಕೇ ಹೊರತು ಉಲ್ಲಂಘಿಸಲಾಗದ ವೇದವಾಗಬಾರದು" ಎಂಬ ಅಂಬೇಡ್ಕರ್ ಅವರ ಮಾತುಗಳನ್ನು ಉಲ್ಲೇಖಿಸುವ ಮೂಲಕ ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರಲ್ಲಿದ್ದ ಸಹಮತವನ್ನು ಸ್ಪಷ್ಟಪಡಿಸುತ್ತಾರೆ.

'ಯುದ್ಧದಲ್ಲಿ ಗೆದ್ದವನಿಗೆ ಸೋತವರ ಬಗೆಗೂ ಜವಾಬ್ದಾರಿ ಇರುತ್ತದೆ' ಎಂಬ ಬುದ್ಧನ ಮಾತಿನ ಮೂಲಕ, ಚುನಾವಣೆಯ ನಂತರ ಪಕ್ಷ, ಪಕ್ಷಭೇದವನ್ನು, ಗುಂಪುಭೇದವನ್ನು ಮರೆತು, ಎಲ್ಲರ ಪರವಾಗಿ, ಎಲ್ಲರ ನಾಯಕರಾಗಿ ಕೆಲಸ ಮಾಡಬೇಕು ಎನ್ನುವ ದಾಸ್ ಅವರ ಕಳಕಳಿ ಜನಪ್ರತಿನಿಧಿಗಳಿಗೆ ದೀಕ್ಷಾರೂಪವಾಗಿ ಪ್ರಕಟವಾಗಿದೆ. 'ಮಕ್ಕಳ ಹೊಳೆಯುವ ಕಣ್ಣುಗಳಲ್ಲಿ ದೇಶದ ಉಜ್ವಲ ಭವಿಷ್ಯ'ವನ್ನು ಕಾಣುವ ನ್ಯಾಯಮೂರ್ತಿ ನಾಗಮೋಹನ್ ದಾಸ್, ಕರಾರುವಾಕ್ಕಾದ ಅಂಕಿ–ಅಂಶಗಳು, ಸರಳ ನಿರೂಪಣೆ, ವಿಮರ್ಶಾತ್ಮಕ ದೃಷ್ಟಿಕೋನದಿಂದಾಗಿ ತಮ್ಮ 'ಅರಿವು ಬೆಳಕು' ಕೃತಿಯನ್ನು ಕನ್ನಡ ಸಾರಸ್ವತ ಲೋಕದ ಅಪರೂಪದ ಕೃತಿಯನ್ನಾಗಿಸಿದ್ದಾರೆ. ಲೇಖಕರ ಸಮಾನತೆಯ ಕನಸು ಇಲ್ಲಿನ ಬರಹಗಳು ಓದುಗರನ್ನು ಹೆಚ್ಚು ಮಾನವೀಯವಾಗಿಸುವಲ್ಲಿ ಯಶಸ್ವಿಯಾಗಿವೆ.

**ಚಿದಾನಂದ ಕಮ್ಮಾರ್**
# ೦೦೧, ಪೆಸಿಫಿಕ್ ಪರ್ಲ್ ಅಪಾರ್ಟ್‌ಮೆಂಟ್
೪ನೇ ಅಡ್ಡರಸ್ತೆ, ಎಂ. ಟಿ. ಎಸ್., ವಿದ್ಯಾನಗರ
ಹುಬ್ಬಳ್ಳಿ – ೫೮೦ ೦೩೧




ತನ್ನ ಪಥದಲ್ಲಿ ಕರಾರುವಾಕ್ಕಾಗಿ ಸಾಗುವ ಚಂದ್ರ ಆಗಿಂದಾಗ್ಗೆ ಕೆಲವು ನಕ್ಷತ್ರಗಳನ್ನು ಮತ್ತು ಗ್ರಹಗಳನ್ನು ಮರೆ ಮಾಡುವುದು ಅಪರೂಪವೇನಲ್ಲ. ಚಂದ್ರನ ಕಕ್ಷೆಯೂ ಸ್ವಲ್ಪ ಓರೆಯಾಗಿರುವುದರಿಂದ ನಕ್ಷತ್ರಗಳನ್ನು ಮರೆ ಮಾಡುವ ಸಂದರ್ಭಗಳಲ್ಲಿಯೂ ಒಂಬತ್ತು ವರ್ಷಗಳ ಒಂದು ನಿಯತ ಕಾಲಿಕತೆ ಇದೆ. ಕೆಲವು ವರ್ಷಗಳ ಹಿಂದೆ ರೋಹಿಣಿ ನಕ್ಷತ್ರವನ್ನು ಪ್ರತಿ ತಿಂಗಳೂ ಮರೆ ಮಾಡಿತ್ತು. ಈ ವರ್ಷ ಚಿತ್ರಾ ನಕ್ಷತ್ರವನ್ನು ಪ್ರತಿ ತಿಂಗಳೂ ಆಚ್ಛಾದಿಸುತ್ತಿದೆ.

ನವೆಂಬರ್ ೨ರಂದು ಬೆಳಗಿನ ಜಾವ ಚಂದ್ರನ ಪಕ್ಕವೇ ಕಾಣುವ ಚುಕ್ಕೆಯೇ ಚಿತ್ರಾ. ಸೂಕ್ಷ್ಮವಾಗಿ ಗಮನಿಸಿದರೆ ರೇಖಾ ಚಂದ್ರ ಈ ನಕ್ಷತ್ರದ ಹತ್ತಿರ ಹತ್ತಿರಕ್ಕೆ ಸರಿಯುವುದನ್ನು ಕಾಣಬಹುದು. ಆದರೆ ಗಮನಾರ್ಹವಾದ ವ್ಯತ್ಯಾಸ ತಿಳಿಯಲು ಕೆಲವು ಗಂಟೆಗಳೇ ಬೇಕು. ಅಷ್ಟು ಹೊತ್ತಿಗೆ ಸೂರ್ಯೋದಯವಾಗಿಬಿಡುತ್ತದೆ. ಇದೇ ಬಗೆಯ ಇನ್ನೊಂದು ಅವಕಾಶ ೨೯ರಂದು ದೊರಕಲಿದೆ. ಅಂದು ಮುಂಜಾವಿನಲ್ಲಿ ಸುಮಾರು ಎರಡು ಗಂಟೆಗಳ ಕಾಲ ಚಂದ್ರನನ್ನು ನೋಡಬಹುದು. ಅದು ಚಿತ್ರಾ ನಕ್ಷತ್ರವನ್ನು ಸಮೀಪಿಸುವುದನ್ನೂ ಕಾಣಬಹುದು. ಆ ಮುಂದೆ ಡಿಸೆಂಬರ್ ೨೬ರ ಬೆಳಿಗ್ಗೆ ಚಿತ್ರಾ ಚಂದ್ರನಿಗೆ ಇನ್ನೂ ಹತ್ತಿರವಾಗಿ ಇರುವುದನ್ನು ಕಾಣಬಹುದು. ಹೀಗೆ ಮುನ್ನಡೆವ ಚಂದ್ರ ಈ ಮೂರೂ ದಿನಗಳಲ್ಲಿ ಚಿತ್ರಾ ನಕ್ಷತ್ರವನ್ನು ಮರೆ ಮಾಡುವುದಾದರೂ ಅದು ನಡೆಯುವ ಸಮಯ ನಮಗೆ ನೋಡಲು ಅನುಕೂಲವಾಗಿಲ್ಲ.

ಸಂಜೆ ಪ್ರಕಾಶಮಾನವಾಗಿ ಕಾಣುವ ಗ್ರಹವೇ ಶುಕ್ರ. ಅದು ನವೆಂಬರ್ ೧ರಂದು ಗರಿಷ್ಠ ಎತ್ತರದಲ್ಲಿ ಧನು ರಾಶಿಯಲ್ಲಿ ಕಾಣುವುದು. ಅದರ ಆಸುಪಾಸಿನಲ್ಲಿ ಹಲವಾರು ನೆಬ್ಯುಲಗಳು, ನಕ್ಷತ್ರ ಗುಚ್ಛಗಳು ಇವೆ. ಚಂದ್ರನಿಲ್ಲದೆ, ಆಕಾಶ ಶುಭ್ರವಾಗಿರುವಾಗ ಆಕಾಶಗಂಗೆಯ ಈ ಭಾಗವನ್ನು ಗುರುತಿಸಲು ಶುಕ್ರವೇ ಮಾರ್ಗದರ್ಶಿಯಾಗುವುದು.

ಇನ್ನುಳಿದ ಗ್ರಹಗಳಲ್ಲಿ ಶನಿ ಈ ತಿಂಗಳ ಆರಂಭದಲ್ಲಿ ಕಾಣುವುದಿಲ್ಲ. ೬ರಂದು ಅದರ ಯುತಿ – ಅಂದರೆ ಸೂರ್ಯನೊಡನೇ ಉದಯಿಸಿ, ಕಂತುವುದು. ಗುರುಗ್ರಹ ಮಧ್ಯರಾತ್ರಿಗೆ ಉದಯಿಸುವುದು. ೨೨ರಂದು ಚಂದ್ರನ ಪಕ್ಕ ಕಾಣುವುದು. ಮಂಗಳ ಬೆಳಗಿನ ಜಾವ ಕಾಣುವುದು. ಸಿಂಹರಾಶಿಯಲ್ಲಿರುವ ಈ ಕೆಂಪುಗ್ರಹದ ಸಮೀಪವೇ ೨೭ರಂದು ಚಂದ್ರ ಕಾಣುವುದು. ತಿಂಗಳ ಮೊದಲ ದಿನ ಸೂರ್ಯನೊಡನೆ ಬುಧದ ಯುತಿ. ಅಂದರೆ ಸೂರ್ಯನೊಡನೆಯೇ ಉದಯಾಸ್ತಗಳು. ಎರಡನೆಯ ವಾರದಲ್ಲಿ ಮುಂಜಾವು ಪೂರ್ವದ ಅಂಚಿನಲ್ಲಿ ಕಾಣುವ ಬುಧ ಕ್ರಮೇಣ ಮೇಲೇರುವುದು. ೧೮ರಂದು ಗರಿಷ್ಠ ಎತ್ತರದಲ್ಲಿ ಕಾಣುವುದು. ಆಮೇಲೆ ಪುನಃ ದಿಗಂತದ ಅಂಚಿಗೆ ಸರಿಯತೊಡಗುವುದು. ತಿಂಗಳ ಕೊನೆಗೆ ಅದು ಶನಿಯ ಜೊತೆಗೂಡುವುದನ್ನು ನೋಡಬಹುದು; ಆಕಾಶ ಶುಭ್ರವಾಗಿರಬೇಕು. ಚಳಿಗಾಲವಾದ್ದರಿಂದ ೫:೪೫ರವರೆಗೂ ಕಾಣುವ ಸಾಧ್ಯತೆ ಇದೆ.

*೭ರ ಸಂಜೆ ಚಂದ್ರ–ಶುಕ್ರ ಜೋಡಿ*

ಡಿಸೆಂಬರ್ ೧ ರಂದು ಚಂದ್ರ ಶನಿಗ್ರಹವನ್ನು ಮರೆಮಾಡುವ ಆಚ್ಛಾದನೆ ಇದೆ; ಆದರೆ ಅದು ಭಾರತಕ್ಕೆ ಕಾಣುವುದಿಲ್ಲ. ಮುಂಜಾವು ಪೂರ್ವದತ್ತ ಕಣ್ಣು ಹಾಯಿಸಿದಲ್ಲಿ ರೇಖಾ ಚಂದ್ರ, ಅದರ ಕೆಳಗೆ ಶನಿಗ್ರಹ, ಇನ್ನೂ ಸ್ವಲ್ಪ ಕೆಳಗೆ ಬುಧ ಕಾಣುವುವು.

ಅಮಾವಾಸ್ಯೆಗೆ (೩ರಂದು) ಸೂರ್ಯಗ್ರಹಣವಿದೆ. ಆದರೆ ಭಾರತಕ್ಕೆ ಕಾಣುವುದಿಲ್ಲ. ಆಫ್ರಿಕದಿಂದ ಅಟ್ಲಾಂಟಿಕ್ ಸಮುದ್ರದಿಂದ ಕಾಣುವುದು. ಅಲ್ಲಿರುವವರು ಪೂರ್ಣತೆಯ ಅವಧಿಯಲ್ಲಿ ತಲೆ ಎತ್ತಿ ನೋಡಿದರೆ ಶನಿ ಮತ್ತು ಬುಧಗ್ರಹಗಳೂ ಕಾಣುವುವು.

೧೭ರ ಹುಣ್ಣಿಮೆಯಂದು ಚಂದ್ರ ಭೂಮಿಯ ನೆರಳನ್ನು ಸ್ಪರ್ಶಿಸುವ ಪಾರ್ಶ್ವ ಛಾಯಾ ಗ್ರಹಣವಿದೆ. ಆದರೆ ಅದರಿಂದ ಚಂದ್ರನ ಬೆಳಕಿನಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಏಕೆಂದರೆ ನೆರಳಿನ ದಟ್ಟ ಭಾಗದ ಮೂಲಕ ಚಂದ್ರ ಹಾದುಹೋಗುವುದಿಲ್ಲ. ಕೃತ್ತಿಕಾ ಗುಚ್ಛದ ಪಕ್ಕದಲ್ಲಿ ಚಂದ್ರನಿರುವುದು. ಆದರೆ ಚಂದ್ರನ ಪ್ರಕಾಶದ ಕಾರಣ ಆ ಗುಚ್ಛವನ್ನು ಗುರುತಿಸುವುದೇ ಕಷ್ಟವಾಗುವುದು.

ಲಿಯೋನಿಡ್ಸ್ ಎಂಬ ಉಲ್ಕಾವೃಷ್ಟಿ ೧೭ರಂದು ಗರಿಷ್ಠ ಮುಟ್ಟುವುದು. ಆದರೆ ಚಂದ್ರನ ಬೆಳಕಿನ ಕಾರಣ ಉಲ್ಕೆಗಳನ್ನು ಗುರುತಿಸುವುದು ಕಷ್ಟವಾಗುವುದು. ಗಂಟೆಗೆ ೧೦–೧೫ ಉಲ್ಕೆಗಳು ಕಾಣಬಹುದು.

**ಖಗೋಳ ದಿನಚರಿ** ನವೆಂಬರ್ :

| | |
|---|---|
| ೧ | ಸಂಜೆ ಶುಕ್ರಗ್ರಹದ ಗರಿಷ್ಠ ಕೋನೋನ್ನತಿ (೪೭ ಡಿಗ್ರಿಗಳು)* |
| ೩ | ಬುಧ – ಚಂದ್ರ ಜೋಡಿ |
| | ಅಮಾವಾಸ್ಯೆ ೧೮:೨೦ಕ್ಕೆ / ಪೂರ್ಣಗ್ರಹಣ ಭಾರತಕ್ಕೆ ಕಾಣುವುದಿಲ್ಲ. (ಆರಂಭ ೧೫:೩೪ಕ್ಕೆ ಮುಕ್ತಾಯ ೨೦:೫೯ಕ್ಕೆ) |
| | ಶನಿ – ಚಂದ್ರ – ಸೂರ್ಯ ಪುಟ್ಟ ಗುಂಪು |
| ೬ | ಚಂದ್ರ – ಭೂಮಿ ನಡುವೆ ಕನಿಷ್ಠ ಅಂತರ |
| | ಶನಿಗ್ರಹದ ಯುತಿ |
| ೭ | ಸಂಜೆ ಚಂದ್ರ – ಶುಕ್ರ ಜೋಡಿ* |
| ೧೦ | ಚಾಂದ್ರಮಾಸದ ಮೊದಲ ಪಾದ |
| | ಬುಧ ಗ್ರಹದ ಹಿನ್ನಡೆ ಮುಕ್ತಾಯ |
| ೧೭ | ಹುಣ್ಣಿಮೆ ೨೦:೪೬ಕ್ಕೆ ಪಾರ್ಶ್ವ ಛಾಯಾಗ್ರಹಣ; |
| | ಲಿಯೋನಿಡ್ಸ್ ಉಲ್ಕಾವೃಷ್ಟಿ |
| ೧೮ | ಮುಂಜಾವು ಬುಧಗ್ರಹದ ಗರಿಷ್ಠ ಕೋನೋನ್ನತಿ* |
| ೨೨ | ಮುಂಜಾವು ಗುರು – ಚಂದ್ರ ಜೋಡಿ* |
| ೨೫ | ಚಾಂದ್ರಮಾಸದ ಕೊನೆಯ ಪಾದ |
| ೨೬ | ಮುಂಜಾವು ಶನಿ – ಬುಧ ಜೋಡಿ* |
| ೨೭ | ಮುಂಜಾವು ಮಂಗಳ – ಚಂದ್ರ ಜೋಡಿ* |
| ಡಿಸೆಂಬರ್ ೧ | ಶನಿ – ಚಂದ್ರ – ಬುಧ – ಪುಟ್ಟ ಗುಂಪು |

*(* ಛಾಯಾಗ್ರಹಣಕ್ಕೆ ಸದವಕಾಶ)*

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧



# ಜೀವಪೋಷಕ ಜಲ ($H_2O$)

**ವೀರನಗೌಡ ಮರಿಗೌಡ**

*ಬೆಂಕಿಯ ಮುಂದೆ ನಿಂತಾಗ ಅದರ*
*ಆರ್ಭಟವನ್ನು ನೋಡಬಹುದು*
*ಆದರೆ ಮುಟ್ಟಲಾಗದು*
*ಸಮುದ್ರದ ಮುಂದೆ ನಿಂತಾಗ*
*ಎಲ್ಲೆಲ್ಲೂ ಕಾಣುವ ನೀರು ಅದರ*
*ಸೌಂದರ್ಯ ಸವಿಯಬಹುದು*
*ಆದರೆ ಬಾಯಾರಿಕೆಯಾದಾಗ ಕುಡಿಯಲಾಗದು* **– ವೀಮ**

ನಮ್ಮ ವಿಶಾಲವಾದ ಬ್ರಹ್ಮಾಂಡದಲ್ಲಿ ಮನುಷ್ಯನ ಬುದ್ಧಿಗೆ ಸದ್ಯಕ್ಕೆ ತಿಳಿದಿರುವಂತೆ ಜೀವಿಗಳು ಇರುವ ಒಂದೇ ಒಂದು ಆಕಾಶಕಾಯವೆಂದರೆ ಭೂಮಿ. ಹಾಗಾದರೆ ಭೂಮಿಯ ಮೇಲೆ ಏಕೆ ಜೀವಿಗಳು ನೆಲೆಗೊಂಡಿವೆ ? ಈ ಪ್ರಶ್ನೆಗೆ ನೇರ ಉತ್ತರ ನೀರು. ಅಂತಹ ಜೀವಪೋಷಕ ಅನರ್ಘ್ಯ ದ್ರವ್ಯ ನೀರಿನ ಬಗ್ಗೆ ಒಂದಿಷ್ಟು ಕಿರು ಮಾಹಿತಿ ಇಲ್ಲಿದೆ.

ಭೂಮಿಯ ಮೇಲೆ ನೀರಿನ ಅಸ್ತಿತ್ವಕ್ಕೆ ಕಾರಣವನ್ನು ನಿರ್ದಿಷ್ಟವಾಗಿ ವಿವರಿಸಲು ವಿಜ್ಞಾನಕ್ಕಾಗಲಿ, ತತ್ವಜ್ಞಾನಕ್ಕಾಗಲಿ ಉತ್ತರಿಸಲು ಇದುವರೆವಿಗೂ ಸಾಧ್ಯವಾಗಿಲ್ಲ. ಆದರೆ ನೀರು ಹೀಗೇ ಇದೆ ಎನ್ನಲು ಅನೇಕ ವೈಜ್ಞಾನಿಕ ಸಾಕ್ಷ್ಯಾಧಾರಗಳನ್ನು ನೀಡಬಹುದು. ಈ ವಸ್ತು ತನ್ನ ವಿಶಿಷ್ಟ, ವಿಚಿತ್ರ, ಅಪರೂಪದ ಲಕ್ಷಣಗಳಿಂದ ಇಡೀ ಭೂಮಿಯನ್ನು ನಡೆಸುತ್ತಿರುವುದೆಂಬ ವಿಷಯ ಎಷ್ಟೋ ಜನರಿಗೆ ತಿಳಿಯದು.

**ನೀರಿನ ರಚನೆ :** ೧೭೮೧ರವರೆಗೆ ನೀರನ್ನು ಒಂದು ಮೂಲವಸ್ತು ಎಂದೇ ಪರಿಗಣಿಸಲಾಗಿತ್ತು. ಇಂಗ್ಲೆಂಡಿನ ಜೋಸೆಫ್ ಪ್ರೀಸ್ಲಿ, ಹೆನ್ರಿ ಕ್ಯಾವೆಂಡಿಷ್ ಹಾಗೂ ಫ್ರಾನ್ಸ್‌ನ ಲೆವಾಸಿಯರ್ ಈ ಪರಿಗಣನೆಯನ್ನು ತಳ್ಳಿಹಾಕಿ ನೀರು ಒಂದು ಸಂಯುಕ್ತ ವಸ್ತು ಎಂದು ಸಾಬೀತುಪಡಿಸಿದರು.

ಜೋಸೆಫ್ ಪ್ರೀಸ್ಲಿ (೧೭೩೩–೧೮೦೪) ತಾನು ನಡೆಸಿದ ರಾಸಾಯನಿಕ ಪ್ರಯೋಗಗಳಿಂದ ಗಾಳಿ ಒಂದು ಮೂಲಭೂತ ವಸ್ತುವಲ್ಲ; ಅದೊಂದು ಅನಿಲಗಳ ಮಿಶ್ರಣ; ಅದರಲ್ಲಿ ಉಸಿರಾಟಕ್ಕೆ ಅಗತ್ಯವಾದ ಆಮ್ಲಜನಕವಿದೆ ಎಂದು ತೋರಿಸಿಕೊಟ್ಟ. ಪ್ರೀಸ್ಲಿಯ ಪ್ರಯೋಗಗಳಿಂದ ಪ್ರಭಾವಿತನಾಗಿ ಹೆನ್ರಿ ಕ್ಯಾವೆಂಡಿಷ್ (೧೭೩೧–೧೮೧೦) ದಹನ ಕ್ರಿಯೆಯಲ್ಲಿ ಆಮ್ಲಜನಕದೊಂದಿಗೆ ವಸ್ತುಗಳು ಸಂಯೋಗಗೊಂಡರೆ ಸಂಯುಕ್ತಗಳಾಗುವುದನ್ನು ತೋರಿಸಿದ. ಗಾಳಿಯನ್ನು ಹಾಗೂ ಉರಿಯುವ ಅನಿಲವನ್ನು ಮಿಶ್ರಣಮಾಡಿ ಮುಚ್ಚಿದ ಪಾತ್ರೆಯೊಂದರಲ್ಲಿ ವಿದ್ಯುತ್ ಕಿಡಿ ಹೊತ್ತಿಸಿದಾಗ ಗಾಳಿಯ ಒಂದು ಭಾಗ ಖರ್ಚಾಗುವುದೆಂದು ತೋರಿಸಿದ. ಹೀಗೆ ಖರ್ಚಾದ ಗಾಳಿಯ ಮತ್ತು ಬಳಸಿದ ಉರಿಯುವ ಅನಿಲದ ಒಟ್ಟು ತೂಕದಷ್ಟೆ ನೀರು ಅದರಲ್ಲಿ ಉತ್ಪತ್ತಿಯಾಗುತ್ತದೆಂದು ಕಂಡುಹಿಡಿದ. ಈ ಅನಿಲವು ಜಲದ ಉತ್ಪತ್ತಿಗೆ ಕಾರಣವಾಗಿದ್ದರಿಂದ ಅದಕ್ಕೆ 'ಜಲಜನಕ'ವೆಂದು ಹೆಸರಿಟ್ಟ. [(Hydro) – ನೀರು (ಜಲ) + gen–ಉತ್ಪತ್ತಿ → Hydrogen)] ಈ ಪ್ರಯೋಗವನ್ನು ಸಾಕಷ್ಟು ಬಾರಿ ಮಾಡಿ ಅದರಿಂದ ಪಡೆದ ಫಲಿತಾಂಶವನ್ನು ೧೭೮೪ರಲ್ಲಿ ಲಂಡನ್ನಿನ ರಾಯಲ್ ಸೊಸೈಟಿಗೆ ಒಪ್ಪಿಸಿದ. ಆಗ ನೀರು ಮೂಲಧಾತುವಲ್ಲ, ಅದೊಂದು ಸಂಯುಕ್ತ ವಸ್ತು ಎಂದು ವಿಜ್ಞಾನ ಜಗತ್ತು ಒಪ್ಪಿತು.

ಮುಂದೆ ಇವರಿಬ್ಬರ ಸಮಕಾಲೀನನಾದ ಫ್ರಾನ್ಸ್‌ನ ಲೆವಾಸಿಯರ್ (೧೭೪೩–೧೭೯೪) ಹೆನ್ರಿ ಕ್ಯಾವೆಂಡಿಷ್ ತೋರಿಸಿದ ಜಲಜನಕ ಮತ್ತು ಆಮ್ಲಜನಕಗಳ ಸಂಯೋಗದಿಂದ ಉಂಟಾದ ಸಂಯುಕ್ತವನ್ನು ಮತ್ತಷ್ಟು ಪ್ರಾಮಾಣೀಕರಿಸಿದ ಕೀರ್ತಿ ಲೆವಾಸಿಯರ್‌ನದು. ನೀರಿನಿಂದ ಕಲ್ಲು, ಮಣ್ಣು ಹುಟ್ಟುತ್ತದೆ ಎಂಬ ಕಲ್ಪನೆ ಅಂದಿನದಾಗಿತ್ತು. ಇದನ್ನು ಪರೀಕ್ಷಿಸಲು ಆತ ಒಂದು ಸರಳ ಪ್ರಯೋಗವನ್ನು ನಡೆಸಿದ. ಒಂದು ನಿರ್ದಿಷ್ಟ ತೂಕದ ಮಳೆ ನೀರನ್ನು ಭದ್ರವಾಗಿ ಮುಚ್ಚಿದ ಪಾತ್ರೆಯೊಂದರಲ್ಲಿಟ್ಟು ನೂರು ದಿನಗಳ ಕಾಲ ಅದನ್ನು ಕ್ರಮವಾಗಿ ಕುದಿಸಿದ. ಅದರಿಂದ ಆವಿ ಸ್ವಲ್ಪವೂ ನಷ್ಟವಾಗದಂತೆ ಏರ್ಪಾಟು ಮಾಡಿದ್ದ. ನೂರು ದಿನಗಳ ಬಳಿಕ ನೀರಿನ ತೂಕ ಸ್ವಲ್ಪವೂ ಕಡಿಮೆಯಾಗಿರಲಿಲ್ಲ. ಅದರಲ್ಲಿ ತೇಲಾಡುತ್ತಿದ್ದ ಕೆಲವೊಂದು ವಸ್ತುಗಳು ಪಾತ್ರೆ ಕಳೆದುಕೊಂಡವಾಗಿದ್ದವೇ ಹೊರತು ನೀರಿನಿಂದ ಉದ್ಭವವಾಗಿರಲಿಲ್ಲವೆಂದು ತೋರಿಸಿ ಮೂಢನಂಬಿಕೆಗೆ ತೆರೆ ಎಳೆದಿದ್ದ.

ವೈಜ್ಞಾನಿಕ ದೃಷ್ಟಿಯಲ್ಲಿ $H_2O$ ಎಂಬುದು ನೀರಿನ ಸಂಕ್ಷಿಪ್ತ ರಾಸಾಯನಿಕ ಸೂತ್ರ. ಈ ಸೂತ್ರವು ನೀರು ಒಂದು ಸಂಯುಕ್ತ ವಸ್ತು, ಅದು ೨ ಪರಮಾಣು ಹೈಡ್ರೋಜನ್ ಮತ್ತು ಒಂದು ಪರಮಾಣು ಆಕ್ಸಿಜನ್ ಸಂಯೋಗದಿಂದಾದ ಅಣು ಎನ್ನುವುದನ್ನು ನಿರೂಪಿಸುತ್ತದೆ.

**ನೀರಿನ ಮಹತ್ವ :** *ನೀರೆ, ನಮಗೆ ನೀನಾದೆ ಗಂಗಾಮಾತೆ*
*ಭೂಮಿಯಲ್ಲಿ ವಾಸಿಸುವ ಎಲ್ಲಾ ಜೀವಿಗಳಿಗೂ*
*ನೀನೇ ಜೀವದಾತೆ* – ವೀಮ

ನೀರು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಬದುಕಿನಲ್ಲಿ ಅತ್ಯಂತ ಪ್ರಭಾವ ಬೀರಿರುವ ಸಂಪನ್ಮೂಲ. ಕೃಷಿ, ವಾಣಿಜ್ಯ, ಸರಕು ಸಾಗಣೆಯ ಸಾಧನವೂ ಹೌದು. ಆಹಾರ ತಯಾರಿಸಲು, ವಾತಾವರಣವನ್ನು ತಂಪಾಗಿಸಲು, ಆಹಾರ ಜೀರ್ಣವಾಗಲು, ರಕ್ತಪರಿಚಲನಗೊಳ್ಳಲು, ಅನುಪಯುಕ್ತ ವಸ್ತುಗಳು ವಿಸರ್ಜನೆಯಾಗಲು ನೀರು ಅತ್ಯಗತ್ಯ.

**ನೀರಿನ ರೂಪಗಳು :** ಈ ನಿಸರ್ಗದಲ್ಲಿ ನೀರು ಎಲ್ಲಾ ಕಡೆಯೂ ಹರಡಿದೆ. ಧ್ರುವ ಪ್ರದೇಶಗಳಲ್ಲಿ, ಪರ್ವತಗಳಲ್ಲಿ, ನದಿ, ಸರೋವರಗಳಲ್ಲಿ, ಅಂತರ್ಜಲ ರೂಪದಲ್ಲಿ ಮತ್ತು ಭೂವಾತಾವರಣದಲ್ಲಿದೆ. ಈ ರೀತಿಯಾಗಿ ಮೂರು ಸ್ಥಿತಿಗಳಾದ ಘನ, ದ್ರವ ಮತ್ತು ಅನಿಲಗಳೆಂಬ ಮೂರು ರೂಪಗಳಲ್ಲಿ ಏಕ ಕಾಲಕ್ಕೆ ನೈಸರ್ಗಿಕವಾಗಿ ಅಸ್ತಿತ್ವದಲ್ಲಿರುವ ವಸ್ತು ನೀರು. ಈ ನೀರು ಭೂ ಒಡಲಲ್ಲಿ ಇರುವುದರಿಂದಲೇ ಭೂಮಿ ಅತಿ ಸುಂದರವಾಗಿ ಮತ್ತು ಆಕರ್ಷಕವಾಗಿ ಕಂಗೊಳಿಸುತ್ತದೆ.

**ನೀರಿನ ಸ್ಥಿತಿಗತಿ :** ಭೂಗ್ರಹದಲ್ಲಿನ ಒಟ್ಟಾರೆ ನೀರಿನ ಪ್ರಮಾಣ ೧೩೮.೬ ಕೋಟಿ ಘನ ಕಿಲೋಮೀಟರ್‌ಗಳಷ್ಟು. ಅದರಲ್ಲಿ ಶೇಕಡ ೯೭ರಷ್ಟು ಭಾಗ ಸಮುದ್ರದ ಉಪ್ಪು ನೀರು. ಉಳಿದ ಕೇವಲ ಶೇ. ೩ ಭಾಗ ಸಿಹಿ ನೀರು. ಈ ನೀರಿನ ಅಳತೆಗಳನ್ನು ಎಂ.ಎಲ್. ಲೆಕ್ಕದಲ್ಲಿ ಈ ಕೆಳಗಿನ ಉದಾಹರಣೆಯೊಂದಿಗೆ ನೋಡೋಣ :

ಇಲ್ಲಿ ೧೦೦೦ ಎಂ.ಎಲ್. ನೀರನ್ನು ತೆಗೆದುಕೊಳ್ಳೋಣ :

ಇದರಲ್ಲಿ –

| | |
|---|---|
| ೯೭% ಭಾಗ ಸಮುದ್ರದ ಉಪ್ಪು ನೀರು | ೯೭೦ ಎಂ.ಎಲ್. |
| ೩% ಭಾಗ ಸಿಹಿ ನೀರು | ೩೦ ಎಂ.ಎಲ್. |
| ಸಿಹಿ ನೀರಿನ ೭೯% ಭಾಗ ಧ್ರುವ ಪ್ರದೇಶಗಳಲ್ಲಿ ಅಡಕವಾಗಿರುವ ಮಂಜುಗಡ್ಡೆ ಹಾಗೂ ಪರ್ವತ ಶಿಖರಗಳಲ್ಲಿ ಶೇಖರವಾಗಿರುವ ಹಿಮಾನಿ | ೨೩.೭ ಎಂ.ಎಲ್. |
| ೨೦% ರಷ್ಟು ಅಂತರ್ಜಲ | ೬.೦ ಎಂ.ಎಲ್. |
| ಕೇವಲ ೧% ರಷ್ಟು ಸಿಹಿ ನೀರು ಜೀವಿಗಳ ಬಳಕೆ ಮತ್ತು ಮರುಬಳಕೆಗೆ ಲಭ್ಯವಿರುವುದು | ೦.೩ ಎಂ.ಎಲ್. |
| | ೩೦.೦ ಎಂ.ಎಲ್. |

ಈ ಲಭ್ಯವಿರುವ ಶೇಕಡ ೧ ನೀರಿನ ಹಂಚಿಕೆ ವೈವಿಧ್ಯಮಯವಾಗಿದೆ :

| | |
|---|---|
| ಇದರ ೮% ನೀರಾವಿಯ ರೂಪದಲ್ಲಿ ವಾತಾವರಣದಲ್ಲಿದೆ. | ೦.೦೨೪ ಎಂ.ಎಲ್. |
| ೩೮% ಮಣ್ಣಿನ ಕಣಗಳಲ್ಲಿ ಅಡಕವಾಗಿರುವ ತೇವಾಂಶ | ೦.೧೧೪ ಎಂ.ಎಲ್. |
| ೫೨% ಕೊಳ, ಸರೋವರಗಳಲ್ಲಿ | ೦.೧೫೬ ಎಂ.ಎಲ್. |
| ಕೇವಲ ೧% ಹರಿಯುವ ನದಿಗಳಲ್ಲಿ | ೦.೦೦೩ ಎಂ.ಎಲ್. |
| ಕೇವಲ ೧% ಜೀವಿಗಳಲ್ಲಿ | ೦.೦೦೩ ಎಂ.ಎಲ್. |
| | ೦.೩೦೦ ಎಂ.ಎಲ್. |

ಇನ್ನೂ ಸಾಮಾನ್ಯೀಕರಿಸಿ ಹೇಳುವುದಾದರೆ, ಪಾತ್ರೆಯೊಂದರಲ್ಲಿ ನೀರು ತುಂಬಿ ಸೂಜಿಯೊಂದನ್ನು ಅದ್ದಿ ಹೊರತೆಗೆದಾಗ ಸೂಜಿಯ ಮೊನೆಯ ಮೇಲೆ ನಿಲ್ಲುವ ನೀರಿನ ಪ್ರಮಾಣದಷ್ಟೆ ಒಟ್ಟು ಭೂಮಿಯ ಮೇಲಣ ನೀರಿನಲ್ಲಿ ಶುದ್ಧ ಬಳಕೆಗೆ ಯೋಗ್ಯವಾದ ನೀರು ದೊರಕುತ್ತದೆ.

**ನೀರಿನ ಸಮಸ್ಯೆಗಳು :** ಪರಿಸರ ಕುರಿತು ೧೯೨೨ರಲ್ಲಿ ರಯೋಡಿ ಜನೈರೋದಲ್ಲಿ ನಡೆದ ಪೃಥ್ವಿ ಶೃಂಗ ಸಭೆಯಲ್ಲಿ ೧೨ ವರ್ಷದ ಬಾಲಕಿ ಸುಜಕಿ ನೀಡಿದ ಮನವಿ ಮನ ಕಲಕುವಂತಿದೆ :

*ನನಗೆ ಬಿಸಿಲಲ್ಲಿ ಹೋಗಲು ಭಯ*
*ಏಕೆಂದರೆ ಓಝೋನ್ ಪದರದಲ್ಲಿ ರಂಧ್ರಗಳಿವೆ.*
*ನನಗೆ ನಿಶ್ಚಿಂತೆಯಿಂದ ಉಸಿರಾಡಲು ಭಯ*
*ಏಕೆಂದರೆ ಗಾಳಿಯಲ್ಲಿ ಅಪಾಯಕಾರಿ ರಾಸಾಯನಿಕಗಳಿವೆ.*
*ನನಗೆ ನೀರು ಕುಡಿಯಲು ಭಯ*
*ಏಕೆಂದರೆ ರೋಗಗಳ ತಾಣವೇ ಅಲ್ಲಿ ಇದೆ.*

ಬಳಕೆಗೆ ಲಭ್ಯವಿರುವ ಒಟ್ಟು ನೀರಿನಲ್ಲಿ ಶೇ. ೬೯ ಭಾಗ ವ್ಯವಸಾಯಕ್ಕೆ, ಶೇ. ೨೩ರಷ್ಟು ಭಾಗ ಕೈಗಾರಿಕೆಗೆ, ಶೇ. ೮ರಷ್ಟು ಭಾಗ ಗೃಹಬಳಕೆಗೆ ವ್ಯಯವಾಗುತ್ತದೆ. ಕೃಷಿಗಾಗಿ ಬಳಸುವ ನೀರಿನ ಶೇ. ೬೦ರಷ್ಟು ಭಾಗ ವ್ಯರ್ಥವಾಗುತ್ತದೆ. ಏಕೆಂದರೆ



ಅವೈಜ್ಞಾನಿಕ ಪದ್ಧತಿಯ ಬೇಸಾಯವೂ ಅದಕ್ಕೆ ಕಾರಣ. ಪ್ರತಿದಿನ ಒಬ್ಬ ವ್ಯಕ್ತಿಯ ಎಲ್ಲ ಅವಶ್ಯಕತೆಗಳನ್ನು ಸಮರ್ಥವಾಗಿ ನಿಭಾಯಿಸಲು ಅಂದಾಜು ೧೫೦ ಲೀಟರ್ ನೀರು ಬೇಕು. ೨೦೩೦ರ ವೇಳೆಗೆ ಜನ ನೀರಿನ ಕೊರತೆಗೆ ಸಿಲುಕಲಿದ್ದಾರೆ. ಆಗ ಜನ ನೀರಿಗಾಗಿ ಹಾಹಾಕಾರ ಪಡುವ ಸ್ಥಿತಿ ತಲುಪಲಿದ್ದಾರೆ. ನೀರಿನ ಕೊರತೆಯಿಂದಾಗಿ ಕೃಷಿಯ ಮೂಲಕ ಮಾಡುವ ಆಹಾರದ ಉತ್ಪಾದನೆ ಕಡಿಮೆಯಾಗಲಿದೆ. ಅಂತರ್ಜಲ ಉಪಯೋಗ ಹೆಚ್ಚಾಗಿ ಜಲಸಂಪತ್ತನ್ನು ಬರಿದುಮಾಡಿದೆ.

ಉದಾಹರಣೆಗೆ, ಭಾರತದಲ್ಲಿ ೧೯೫೦ರಲ್ಲಿ ೩೦ ಸಾವಿರ ಕೊಳವೆ ಬಾವಿಗಳಿದ್ದವು. ೨೦೦೦ದಲ್ಲಿ ೭ ಕೋಟಿ ಕೊಳವೆ ಬಾವಿಗಳನ್ನು ತೋಡಲಾಗಿತ್ತು. ೨೦೧೩ರಲ್ಲಿ ಎಷ್ಟಿರಬಹುದು, ೨೦೩೦ಕ್ಕೆ ಎಷ್ಟಾಗಬಹುದು, ಊಹಿಸಬಲ್ಲಿರಾ ?

**ಪರಿಹಾರಗಳು :** 'ಜಲವೇ ಸಕಲ ಕುಲಕ್ಕೆ ತಾಯಿಯಲ್ಲವೇ', ಎಂಬ ಕನಕದಾಸರ ನುಡಿ ಅರ್ಥಪೂರ್ಣವಾಗಿದೆ. ಇಂತಹ ಪ್ರಕೃತಿಯ ಒಂದು ದಿವ್ಯ ಕೊಡುಗೆಯನ್ನು ಸಂರಕ್ಷಿಸಿದರೆ ತಾಯಿಯನ್ನು ಸಂರಕ್ಷಿಸಿದಂತೆ.

ಸಮುದ್ರದ ನೀರಿನಲ್ಲಿರುವ ಲವಣಾಂಶಗಳನ್ನು ನಿರ್ಮಲೀಕರಣಗೊಳಿಸುವ ಪ್ರಕ್ರಿಯೆಯ ಮೂಲಕ ಸಿಹಿ ನೀರನ್ನು ಪಡೆಯುವ ತಂತ್ರಜ್ಞಾನವನ್ನು ಅಭಿವೃದ್ಧಿಪಡಿಸಬಹುದು. ನದಿಗಳ ಜೋಡಣೆಯಿಂದ ಸ್ವಲ್ಪ ಮಟ್ಟಿಗೆ ಶುದ್ಧ ನೀರಿನ ಕೊರತೆಯನ್ನು ನೀಗಿಸಬಹುದು. ಮಳೆಯಿಂದ ಭೂಮಿಯ ಮೇಲೆ ಬೀಳುವ ಪ್ರತಿ ಹನಿ ನೀರು ಇಂಗುವ ವ್ಯವಸ್ಥೆಯನ್ನು ಮಾಡಬೇಕು. ಅಂದರೆ ಹೊಲದಲ್ಲಿ ಒಡ್ಡು, ಚೆಕ್ ಡ್ಯಾಂಗಳನ್ನು ನಿರ್ಮಿಸಬೇಕು. ವಿಶ್ವದ ೯೯% ಭಾಗ ಶುದ್ಧ ನೀರಿನ ಅವಶ್ಯಕತೆಯನ್ನು ಅಂತರ್ಜಲವೇ ಪೂರೈಸಬಲ್ಲದು.

ಆದರೆ ಅದುವೇ ವೇಗವಾಗಿ ನಾಶವಾಗುತ್ತಿದೆ. ಇದನ್ನು ಮರುಪೂರಣ ಮಾಡುವ ಮೂಲಕ ಸಂರಕ್ಷಿಸಬೇಕು. ಜಗತ್ತಿನಾದ್ಯಂತ ನೀರು ಕಲುಷಿತವಾಗುವುದನ್ನು ತಡೆಗಟ್ಟಬೇಕು.

*ಹೆಣ್ಣು, ಹೊನ್ನು, ಮಣ್ಣಿಗಾಗಿ ಯುದ್ಧಗಳಾದವು*
*ರಾಜ್ಯ ವಿಸ್ತರಣೆಗೆ ರಾಜ, ರಾಜರುಗಳ ಮಧ್ಯೆ ಯುದ್ಧಗಳಾದವು*
*ಇಂಧನ ಪೈಪೋಟಿಗಾಗಿ ದೇಶ, ದೇಶಗಳ ಮಧ್ಯೆ ಯುದ್ಧಗಳಾದವು*
*ಮುಂದೆ ನೀರಿಗಾಗಿ ಯುದ್ಧಗಳಾಗುತ್ತವೆ. ಮರೆಯದಿರು ತಮ್ಮ* – ವೀಮ

ಆದ್ದರಿಂದ ಜಲಸಂಪತ್ತನ್ನು ಮಲಿನಮಾಡದಂತೆ ಸಂರಕ್ಷಿಸುವುದು ಪ್ರತಿಯೊಬ್ಬ ಮಾನವನ ಕರ್ತವ್ಯವೆಂದು ಭಾವಿಸಬೇಕು. ಈ ದಿಶೆಯಲ್ಲಿ ಫಾದರ್ ಲೋಬೋ ಅವರ ಈ ಹೇಳಿಕೆ ಬಹಳ ಪ್ರಸ್ತುತವಾಗಿದೆ :

*ಎಲ್ಲಿ ನೀರು ಓಡುತ್ತದೆಯೋ*
*ಅಲ್ಲಿ ಅದನ್ನು ನಡೆಯುವಂತೆ ಮಾಡಿ*
*ಎಲ್ಲಿ ನೀರು ನಡೆಯುತ್ತದೆಯೋ*
*ಅಲ್ಲಿ ಅದನ್ನು ತೆವಳುವಂತೆ ಮಾಡಿ*
*ಎಲ್ಲಿ ನೀರು ತೆವಳುತ್ತದೆಯೋ*
*ಅಲ್ಲಿ ಅದನ್ನು ನಿಲ್ಲುವಂತೆ ಮಾಡಿ*
*ಎಲ್ಲಿ ನೀರು ನಿಲ್ಲುತ್ತದೆಯೋ*
*ಅಲ್ಲಿ ಅದನ್ನು ಇಂಗುವಂತೆ ಮಾಡಿ !!*

ವೀರನಗೌಡ ಮರಿಗೌಡ
ಕಿರಿಯ ತರಬೇತಿ ಅಧಿಕಾರಿ, ಮಂಜುನಾಥ ನಗರ, ಪಿ. ಬಿ. ರೋಡ್
ಬೆಟಗೇರಿ – ೫೮೨ ೧೦೨, ಗದಗ ತಾಲೂಕು ಮತ್ತು ಜಿಲ್ಲೆ



# ಬಹುಮುಖ ಪ್ರತಿಭೆಯುಳ್ಳ ಪರಿಸರಪ್ರಿಯ ಚಿತ್ರಕಲಾವಿದ ಡಿ. ಎನ್. ರವಿಕುಮಾರ್



ರವಿಕುಮಾರ್ ತುಂಬ ಮಹತ್ವಾಕಾಂಕ್ಷಿಯಾಗಿದ್ದು, ಚಿತ್ರಕಲೆ ಬಾಲ್ಯದಿಂದಲೇ ಒಲಿದಿದ್ದರೂ ಅಷ್ಟಕ್ಕೇ ತೃಪ್ತರಾಗದೆ ಹಲವಾರು ಆರೋಗ್ಯಕರ ಹವ್ಯಾಸಗಳನ್ನು ತಮ್ಮದಾಗಿಸಿದ್ದಾರೆ. ಈ ಹವ್ಯಾಸಗಳನ್ನು ತಮ್ಮ ವಿದ್ಯಾರ್ಥಿಗಳಲ್ಲೂ ಬೆಳೆಸಲು ಹವಣಿಸುತ್ತಾರೆ.

ಈ ವಿಶಿಷ್ಟ ಪ್ರತಿಭೆಗೆ ಬಾಲ್ಯದಲ್ಲಿಯೇ ಚಿತ್ರಕಲೆಯಲ್ಲಿ ದೊರೆತ ಪ್ರಶಸ್ತಿಗಳು ಹಲವು. ಅಂತೆಯೇ 1997ರಲ್ಲಿ ಇವರ 'ಜನಸಂಖ್ಯಾ ಸ್ಫೋಟ' ಎಂಬ ತೈಲವರ್ಣ ಕಲಾಕೃತಿಯು ಲಲಿತಕಲೆ ಮತ್ತು ಕುಶಲ ಕಲಾ ವಿಭಾಗ, ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಆಯ್ಕೆಯಾಗಿ ಪ್ರದರ್ಶನಗೊಂಡು ಜನ ಮೆಚ್ಚುಗೆಗೆ ಪಾತ್ರವಾಗಿತ್ತು. ಪುನಃ 2002ರ ಅದೇ ಪ್ರದರ್ಶನದಲ್ಲಿ ಐತಿಹಾಸಿಕ ಚಿತ್ರದುರ್ಗ ಕೋಟೆಯ 'ಪ್ರಕೃತಿ ಚಿತ್ರ' ಪ್ರದರ್ಶನಗೊಂಡು ಇವರಲ್ಲಿರುವ ಕಲಾಸಕ್ತಿಯನ್ನು ಗುರುತಿಸಿದೆ. 2005ರಲ್ಲಿ 'ಸೆಂಟ್ರಲ್ ಸಿಲ್ಕ್ ಬೋರ್ಡ್' ಬೆಂಗಳೂರು ಪೀತಾಂಬರ್ ಪರ್ಸಿಪ್ಷನ್ ಎಂಬ ಇವರ ವಿಶೇಷ ಡಿಸೈನ್‌ಗಳ ಅಡಕಮುದ್ರಿಕೆ (ಸಿ.ಡಿ.) ರಾಷ್ಟ್ರಮಟ್ಟದಲ್ಲಿ ಬಿಡುಗಡೆಯಾಗಿ ಕೇಂದ್ರ ಸರ್ಕಾರದ ಪುರಸ್ಕಾರಕ್ಕೆ ಭಾಜನರಾಗಿದ್ದರು.

ಇತ್ತೀಚೆಗಷ್ಟೆ ನಡೆದ 11ನೇ ಚಿತ್ರದುರ್ಗ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ವೈವಿಧ್ಯಮಯ ಚಿತ್ರದುರ್ಗ' ಎಂಬ ವಿಷಯದಡಿಯಲ್ಲಿನ ಛಾಯಾಚಿತ್ರ ಪ್ರದರ್ಶನಗೊಂಡು ಸಮ್ಮೇಳನಾಧ್ಯಕ್ಷರಿಂದ ಪ್ರಶಸ್ತಿ ಪುರಸ್ಕಾರಕ್ಕೆ ಪಾತ್ರರಾಗಿದ್ದಾರೆ. 67ನೇ ಸ್ವಾತಂತ್ರ್ಯೋತ್ಸವದ ಅಂಗವಾಗಿ ಚಿತ್ರದುರ್ಗದ ವಿದ್ಯಾವಿಕಾಸ ವಿದ್ಯಾಸಂಸ್ಥೆಯಲ್ಲಿ ನಡೆದ ಸ್ವಾತಂತ್ರ ಸಂಗ್ರಾಮದ ಕಪ್ಪು-ಬಿಳುಪು ಚಿತ್ರಗಳು, ಚಿತ್ರಕಲೆ ಹಾಗೂ ದುರ್ಗದ ಸಿರಿ ಛಾಯಾಚಿತ್ರ ಪ್ರದರ್ಶನಗಳು ಸಾಕ್ಷಿಯಾಗಿವೆ.

– ಮಂಜುನಾಥ ಎಂ. ತಿಮ್ಲಾಪುರ್, ಉಪನ್ಯಾಸಕರು, ಚಿತ್ರದುರ್ಗ











Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly /NOVEMBER 2013 / Rs. 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)